


ಮೂಲ: ತೆಲುಗು

ಕನ್ನಡ ಅನುವಾದ

# ಎಂ.ದೇವಾ ಕೊಂಡಪ್ಪ

# ಅನುಭವ ಬೋಧಾಮೃತ

ಸುಮತಿ ಶತಕ (ಪುಟ 1)    ನರಸಿಂಹ ಶತಕ (ಪುಟ 55)

ವೇಮನ ಪದ್ಯಗಳು (ಪುಟ 159)

"THIS BOOK IS PUBLISHED WITH THE FINANCIAL ASSISTANCE OF THIRUMALA THIRUPATI DEVASTHANAMS UNDER THEIR SCHEME AID TO PUBLISH RELIGIOUS BOOKS"

ಮೂಲ : ತೆಲುಗು

ಕನ್ನಡ ಅನುವಾದ :

ಎಂ. ದೇವರಕೊಂಡಪ್ಪ

ಪ್ರಕಾಶನ :

ಬಳ್ಳಪಲ್ಲಿ ಪ್ರಕಾಶಕರು
659, 11ನೇ ಮುಖ್ಯರಸ್ತೆ, 4ನೇ ಬ್ಲಾಕ್
ಜಯನಗರ, ಬೆಂಗಳೂರು–560 011

ANUBHAVA BODHAMRUTHA : 1. SUMATI SHATAK
2. NARASIMHA SHATAKA & 3. VEMANA PADYAG
Translated from Telugu to Kannada by
M. Devarakondappa, Demy 1/8 Size, 219 + xii
Price Rs. 30/-

ಮೊದಲ ಮುದ್ರಣ ; 1000 ಪ್ರತಿಗಳು,



ಬೆಲೆ : ರೂ. 30/-

1995

ಮುದ್ರಣ :
ಓರಿಯಂಟ್ ಪವರ್ ಪ್ರೆಸ್
೫೪, ಲಾಲ್‌ಬಾಗ್ ರಸ್ತೆ
ಬೆಂಗಳೂರು – ೨೭

# ಪ್ರಸ್ತಾವನೆ

ಸುಮತಿ ಶತಕವು ಆಂಧ್ರ ಪ್ರದೇಶದಲ್ಲಿ ಶತಮಾನಗಳಿಂದಲೂ ಜನಪ್ರಿಯ ವಾಗಿದೆ. ಹಿಂದೆ ತೆಲುಗು ಪಾಠಶಾಲೆಗಳಲ್ಲಿ ಈ ಶತಕದಿಂದ ನೀತಿಪಾಠವನ್ನು ಬೋಧಿಸುತ್ತಿದ್ದರು. ತೆಲುಗು ಮಾತೃಭಾಷೆಯಾಗಿರುವವರು ಈಗಲೂ ಈ ಶತಕದಿಂದ ಒಂದಲ್ಲ ಒಂದು ಪದ್ಯವನ್ನು ಕಂಠಪಾಠ ಮಾಡಿರುತ್ತಾರೆ. ಈ ಶತಕದ ರಚನೆ ಕಂದ ಪದ್ಯಗಳಲ್ಲಿದ್ದು ಬಹು ಸರಳ ಮತ್ತು ಸುಂದರವಾಗಿವೆ. ಎಲ್ಲಾ ಪದ್ಯಗಳೂ ನೀತಿಯನ್ನು ತಿಳಿಸುತ್ತವೆ. ಬಹುಪಾಲು ಸಾಮಾಜಿಕ ನೀತಿಯನ್ನೊಳಗೊಂಡಿವೆ. ಸ್ವಲ್ಪಮಟ್ಟಿಗೆ ರಾಜನೀತಿಯನ್ನೂ ತಿಳಿಸುತ್ತವೆ. ಈ ಕೃತಿಯ ಪದ್ಯಗಳನ್ನು ಎಷ್ಟು ಸಲ ಓದಿದರೂ ಮತ್ತೆ ಮತ್ತೆ ಓದಬೇಕೆಂಬ ಅಭಿರುಚಿ ಉಂಟಾಗುತ್ತದೆ. ಕವಿ ಈ ಶತಕದಲ್ಲಿ, ದುರ್ಜನರಿಂದ ಬಹು ದೂರವಿರಲು ಎಚ್ಚರಿಸಿದ್ದಾನೆ. 34ನೆಯ ಪದ್ಯದಲ್ಲಿ ತರವಿಲ್ಲವು ದುಸ್ಸಂಗತಿ ಎಂದು ಹೇಳಿ, 39ನೆಯ ಪದ್ಯದಲ್ಲಿ, ಮಂಚದಲ್ಲಿ ಸೇರಿರುವ ತಿಗಣೆ ಕಚ್ಚಿದರೆ ತಿಗಣೆಗೆ ಹೊಡೆತ ಬೀಳುವುದಂತಿರಲಿ, ಅವು ಆಶ್ರಯಿಸಿರುವ ಮಂಚಕ್ಕೆ ಮಾತ್ರ ಹೊಡೆತಗಳು ತಪ್ಪುವುದಿಲ್ಲ ಎಂದಿದ್ದಾನೆ. ಬಹಳ ಹತ್ತಿರದಲ್ಲಿದ್ದು, ಚಾಡಿ ಹೇಳುವ ಮಂತ್ರಿಯ ಮಾತಿಗೆ ರಾಜನು ಕಿವಿಗೊಟ್ಟು ಆ ಮಾತುಗಳನ್ನು ಆಚರಣೆಗೆ ತರಬಾರದು ಎಂದಿದ್ದಾನೆ. ಪದ್ಯ 88 ಮತ್ತು 89ರಲ್ಲಿ, ಮಂಡಲಾಧಿಪತಿಯ ಹತ್ತಿರ ಸಮರ್ಥನಾದ ಮಂತ್ರಿ ಇರಬೇಕು. ಮಂತ್ರಿಯನ್ನು ಹೊಂದಿರುವ ರಾಜ್ಯದಲ್ಲಿ ರಾಜಕಾರ್ಯಗಳು ಸುಗಮವಾಗಿ ನಡೆಯುತ್ತವೆ. ಮಂತ್ರಿ ಇಲ್ಲದ ರಾಜ್ಯದಲ್ಲಿ, ಯಂತ್ರದಲ್ಲೆಯ ಕೀಲುಗಳು ಕಳಚಿ ಯಂತ್ರವು ಚಲಿಸದೆ ನಿಲ್ಲುವ ಹಾಗೆ ರಾಜಕಾರ್ಯಗಳು ನಡೆಯದೆ ಹೋಗುತ್ತವೆ ಎಂದಿದ್ದಾನೆ. ನೀತಿಪರನು ಬಹುಕಾಯವುಳ್ಳವನಿಗಿಂತ ಬಲಶಾಲಿ ಎಂದಿದ್ದಾನೆ. ತಂದೆಗೆ ನಿಜವಾದ ಸಂತೋಷ ಪುತ್ರನು ಜನಿಸಿದಾಗ ಆಗುವುದಕ್ಕಿಂತ, ಆ ಪುತ್ರನನ್ನು ಜನರು ಹೊಗಳುವುದನ್ನು ನೋಡಿದ ತಂದೆಗೆ ಅಮಿತಾನಂದವಾಗುತ್ತದೆ. ಸರೋವರದಲ್ಲಿ ವಾಸಮಾಡುವ ಬಕನಂತೆಯೂ, ಕಾಡಿನಲ್ಲಿ ವಾಸಮಾಡುವ ಉಡದಂತೆಯೂ, ಹುತ್ತದಲ್ಲಿ ವಾಸ ಮಾಡುವ ಹಾವಿನಂತೆಯೂ, ಬದುಕುವುದಕ್ಕಾಗಿಯೇ ಮಾನವನು ನೂರು ವರುಷ ಜೀವಿಸಿ ಪ್ರಯೋಜನವಿಲ್ಲ, ಮಾನವನ ಜೀವನ ಪುರುಷಾರ್ಥಗಳನ್ನು ಸಾಧಿಸುವಂತಾಗಬೇಕು ಎಂಬುದಾಗಿ ಕವಿ ಹೇಳುತ್ತಾನೆ. ನೆಂಟರ ಬಗ್ಗೆ ಕವಿ ಬಹು ಸ್ವಾರಸ್ಯ

ಹಾವ ಮಾತನ್ನು ಹೇಳುತ್ತಾನೆ. ಮಳೆಗಾಲದಲ್ಲಿ ಕೆರೆಯು ನೀರಿನಿಂದ ತುಂಬಿರುವಾಗ ಸಹಸ್ರಾರು ಕಪ್ಪೆಗಳು ಬಂದು ಸೇರುತ್ತವೆ. ಕೆರೆಯು ಬರಿದಾದಾಗ ಅಲ್ಲಿಂದ ದೂರ ಹೋಗುತ್ತವೆ. ಅದೇ ರೀತಿ ಐಶ್ವರ್ಯವಿರುವಾಗ ನೆಂಟರು ಬಂದು ಬಿಡದೆ ಅಂಟಿಕೊಂಡಿರುತ್ತಾರೆ. ಆದರೆ ಐಶ್ವರ್ಯ ಕರಗಿ ಬರಿಗೈಯಾದಾಗ ಯಾವ ನೆಂಟನೂ ಹತ್ತಿರ ಸುಳಿಯುವುದಿಲ್ಲ ಎಂದಿದ್ದಾನೆ. ಇದೇ ರೀತಿ ಕರ್ಮ, ಹಣ, ನೆಲೆ ಮುಂತಾಗಿ ಅನೇಕ ವಿಷಯಗಳನ್ನು ಕುರಿತು ಹೇಳುತ್ತಾನೆ.

ರಸಭರಿತವಾದ ಈ ಕೃತಿಯ ಮಧುರ ಸವಿಯು ಕನ್ನಡಿಗರಿಗೂ ಲಭಿಸಲೆಂದು ಇದನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. ಅನುವಾದದ ಕೆಳಭಾಗದಲ್ಲಿ ತಾತ್ಪರ್ಯ ವನ್ನೂ ಬರೆಯಲಾಗಿದೆ. ಮೂಲದಲ್ಲಿರುವ ಕವಿಯ ಭಾವನೆಗಳನ್ನು ನನ್ನ ಮನಸ್ಸಿಗೆಟುಕುವಷ್ಟು ಗ್ರಹಿಸಿ ಅನುವಾದಿಸಿದ್ದೇನೆ. ಸಹೃದಯ ಓದುಗ ಮಹಾಶಯರು ಈ ಕೃತಿಯನ್ನು ಓದಿ ಸಂತಸಗೊಳ್ಳಲಿ ಎಂದು ಹಾರೈಸುತ್ತಾ ಅವರ ಮುಂದಿಟ್ಟಿ ದ್ದೇನೆ.

ಬೆಂಗಳೂರು ವಿಶ್ವವಿದ್ಯಾನಿಲಯದ ತೆಲುಗು ಭಾಷಾ ವಿಭಾಗದ ಮುಖ್ಯಸ್ಥ ರಾದ ಶ್ರೀ ತಂಗಿರಾಲ ವೆಂಕಟಸುಬ್ಬರಾಯರು ಈ ನನ್ನ ಕನ್ನಡ ಅನುವಾದಕ್ಕೆ ಮುನ್ನುಡಿಯನ್ನು ಬರೆದು ಈ ಕೃತಿಗೆ ಮೆರುಗು ತಂದಿದ್ದಾರೆ. ಶ್ರೀಯುತರಿಗೆ ನನ್ನ ಅನಂತ ವಂದನೆಗಳು.

ಪ್ರೊ. ಸಾ. ಕೃ. ರಾಮಚಂದ್ರರಾಯರು ಈ ಕೃತಿಯನ್ನು ಅವಲೋಕಿಸಿ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಅವರಿಗೂ ನಾನು ಆಭಾರಿ.

ಈ ಕೃತಿಯ ಮುದ್ರಣಕ್ಕೆ ತಿರುಮಲ ತಿರುಪತಿ ದೇವಸ್ಥಾನದವರು ಉದಾರವಾಗಿ ಧನ ಸಹಾಯ ಮಾಡಿದ್ದಾರೆ. ಅವರಿಗೂ ನನ್ನ ಸವಿನಯ ವಂದನೆಗಳು.

ಈ ಮುದ್ರಣ ಕಾರ್ಯವನ್ನು ಕೇಳಿದ ತಕ್ಷಣ ಸಂತೋಷದಿಂದ ಪೂರೈಸಲು ಒಪ್ಪಿ ಅದನ್ನು ಅಂದವಾಗಿ ರೂಪಿಸಿಕೊಟ್ಟಿರುವ ಓರಿಯಂಟ್ ಪವರ್ ಪ್ರೆಸ್ಸಿನ ಮಾಲೀಕರಾದ ಶ್ರೀ ಜಿ. ಎಸ್. ಕುಮಾರಸ್ವಾಮಿಯವರಿಗೆ ನನ್ನ ನಮನಗಳು.

ಈ ಪುಸ್ತಕವನ್ನು ಸಿದ್ಧಪಡಿಸುವಲ್ಲಿ ನನಗೆ ಉತ್ತೇಜನವನ್ನು ನೀಡಿದ ಶ್ರೀ ಜಗಳೂರು ಲಕ್ಷ್ಮಣರಾವ್ ಇವರನ್ನು ನಾನು ಮರೆಯುವಂತಿಲ್ಲ. ಅವರಿಗೂ ನನ್ನ ಕೃತಜ್ಞತೆಗಳು.

**ಎಂ. ದೇವರಕೊಂಡಪ್ಪ**

# ಸುಮತಿ ಶತಕ

ಕನ್ನಡ–ತೆಲುಗು ನುಡಿಗಳ ನಡುವಣ ನಂಟು ಪುರಾತನವಾದದ್ದು ಮಾತ್ರವಲ್ಲ, ನಿಕಟವಾದುದೂ ಹೌದು. ಈ ನಂಟು ಸಾರ್ಥಕವಾಗಬೇಕಾದರೆ ಪರಸ್ಪರ ಸಾಹಿತ್ಯಗಳ ಪರಿಚಯ:ವಾಗಬೇಕು, ಸುಮತಿ ಶತಕ ತೆಲುಗು ವಾಙ್ಮಯದಲ್ಲಿ ಮೈಲಿಗಲ್ಲು. ಭಾವ, ಭಾಷೆ, ಶೈಲಿ, ಧ್ವನಿ ಎಲ್ಲದರಲ್ಲೂ ಇದರದ್ದು ಎತ್ತಿದ ಕೈ. ಇಂಥದೊಂದು ಸರಳ, ಸುಂದರ ಕಾವ್ಯವನ್ನು ನಮ್ಮ ಬರಹಗಾರರಲ್ಲಿ ಹಿರಿಯರಾದ ಶ್ರೀ ದೇವರಕೊಂಡಪ್ಪ ನವರು ಕನ್ನಡಕ್ಕೆ ಪರಿವರ್ತಿಸಿರುವುದು ಸ್ವಾಗತಾರ್ಹವೇ. ಶ್ರೀಯುತರು ಕವಿತೆಯ ಸ್ವಾರಸ್ಯವನ್ನು ಸಾಕಲ್ಯವಾಗಿ ಅರಿತುಕೊಂಡು, ಭಾಷಾಮರ್ಯಾದೆಗೆ ಭಂಗ ಬಾರದಂತೆ ಭಾವಪುಷ್ಟಿ ಸಡಿಲವಾಗದಂತೆ, ಕಾವ್ಯ ಗುಣ ಕಡಮೆಯಾಗದಂತೆ ಸುಮತಿ ಶತಕವನ್ನು ಕನ್ನಡದಲ್ಲಿ ತಂದಿದ್ದಾರೆ. ಮೂಲದ ಯಾವುದೊಂದು ಗುಣಕ್ಕೂ ಕೊರತೆಯಾಗದಂತೆ ಶ್ರಮವಹಿಸಿ ಎಚ್ಚರದಿಂದ ಈ ಗ್ರಂಥವನ್ನು ಸಿದ್ಧ ಮಾಡಿದ್ದಾರೆ. ವಾಕ್ಯಾರ್ಥವಲ್ಲದೆ ಸುಬೋಧವಾಗುವಂತೆ ತಾತ್ಪರ್ಯವನ್ನೂ ಕೊಟ್ಟಿರುವುದು ಸಾಮಾನ್ಯ ಓದುಗರಿಗೆ ಉಪಕಾರವಾಗುತ್ತದೆ. ಶ್ರೀಯುತರ ಲೇಖನಿಯಿಂದ ಇಂಥ ಹಲವು ಅನುವಾದಗಳು ಕನ್ನಡಿಗರ ಮಡಿಲಿಗೆ ಬೀಳಲೆಂದು ಆಶಿಸುತ್ತೇನೆ.

**ಪ್ರೊ. ಸಾ. ಕೃ. ರಾಮಚಂದ್ರರಾವ್**

# ಮುನ್ನುಡಿ

ಆಂಧ್ರ ಸಾಹಿತ್ಯ ಚರಿತ್ರೆಯಲ್ಲಿ ಶತಕಗಳು ಪುಷ್ಕಳವಾಗಿವೆ. (ಇವುಗಳ ಸಂಖ್ಯೆ ಐನೂರಕ್ಕೂ ಹೆಚ್ಚಾಗಿವೆ ಎಂದು ತಿಳಿದು ಬರುತ್ತದೆ). ಕ್ರಿ. ಶ. 12ನೇ ಶತಮಾನದಿಂದ ಇವತ್ತಿನವರೆಗೂ ಶತಕ ರಚನೆ ಮುಂದುವರಿಯುತ್ತಲೇ ಇದೆ.

'ಶತಕ' ಎಂದರೆ 'ನೂರು ಪದ್ಯಗಳು' ಎಂದು ಅರ್ಥ. ಆದರೆ ಹಲವಾರು ಶತಕಗಳಲ್ಲಿ 108 ಪದ್ಯಗಳಿರುತ್ತವೆ. ಶತಕ ಸಾಧಾರಣವಾಗಿ ದೇವರ ಸ್ತುತಿ ಮೂಲಕವಾಗಿರುತ್ತದೆ. ಭಗವನ್ನಾಮ ಸ್ತೋತ್ರ ಅಷ್ಟೋತ್ತರ ಶತಕವಾಗಿರುವುದು ಸಂಪ್ರದಾಯ. ಆದ್ದರಿಂದ ಈ 108 ಪದ್ಯಗಳ ಸಂಖ್ಯಾನಿಯಮ ಬಂದಿರಬಹುದು.

ದೇವರನ್ನು ಸ್ತುತಿಸುವುದು ಋಗ್ವೇದ ಕಾಲದಿಂದಲೂ ಕಂಡುಬರುತ್ತದೆ. ಋಗ್ವೇದವು ಇಂದ್ರ, ಅಗ್ನಿ, ರವಿ, ವರುಣಾದಿ ದೇವತೆಗಳ ಸ್ತೋತ್ರಗಳೆಂದು ಹೇಳಬಹುದು. ಸಂಸ್ಕೃತದಲ್ಲಿ ಮಯೂರನ ಸೂರ್ಯಶತಕ, ಭರ್ತೃಹರಿ ಸುಭಾಷಿತ ತ್ರಿಶತಿ ಮುಂತಾದ ಶತಕಗಳು ಕಂಡುಬರುತ್ತವೆ. ತೆಲುಗಿನಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯ (1120–1180) ಬರೆದ 'ಶಿವತತ್ವಸಾರ' ಮೊಟ್ಟ ಮೊದಲನೆಯ ಶತಕವೆಂದು ಹೇಳಬಹುದು. ಆದರೆ ಇದರಲ್ಲಿ ಸಾವಿರ ಪದ್ಯಗಳಿವೆ. ಎಲ್ಲಾ ಕಂದ ಪದ್ಯಗಳೇ. ಪದ್ಯದ ಕೊನೆಯಲ್ಲಿ "ಶಿವಾ ! ರುದ್ರಾ ! ಅಜಾ ! ಮಹೇಶಾ !" ಎಂಬುವ ಸಂಬೋಧನೆಗಳಿವೆ. ಇವುಗಳನ್ನು ಮಕುಟವೆಂದು ಭಾವಿಸ ಬಹುದು. ನೂರು ಅಥವಾ ನೂರಾ ಎಂಟು ಪದ್ಯಗಳಿರುವುದು, ಮಕುಟವಿರುವುದು, ಕಥಾಸೂತ್ರವಿಲ್ಲದೆ ಪ್ರತಿಯೊಂದು ಪದ್ಯವೂ ಮುಕ್ತವಾಗಿ ಮತ್ತು ಸ್ವತಂತ್ರವಾಗಿರು ವುದು ಶತಕದ ಮುಖ್ಯ ಲಕ್ಷಣಗಳು. ಈ ಲಕ್ಷಣಗಳಲ್ಲಿ ಇರುವ ಮೊಟ್ಟಮೊದಲನೆಯ ಶತಕ ಪಾಲ್ಕುರಿಕಿ ಸೋಮನಾಥ (13ನೇ ಶತಮಾನದ ಉತ್ತರಾರ್ಧ) 'ವೃಷಾಧಿಪ' ಶತಕವು'.

ತೆಲುಗು ಶತಕಗಳನ್ನು ನಾಲ್ಕು ಬಗೆಯಾಗಿ ವಿಂಗಡಿಸಬಹುದು :

1. ನೀತಿ ಶತಕಗಳು, 2. ಭಕ್ತಿ ಶತಕಗಳು, 3. ವ್ಯಾಜಸ್ತುತಿ ಶತಕಗಳು, 4. ವೇದಾಂತ ಶತಕಗಳು. ಇವುಗಳಲ್ಲಿ ನೀತಿ ಶತಕಗಳು ಸರ್ವಜನ ಹಿತಕರವಾದ

ನೀತಿಗಳಿಂದ ಕೂಡಿ ಓದುಗರ ಗುಣಸ್ವಭಾವಗಳನ್ನು ನೇರ ಮಾತುವಲ್ಲಿ ನೆರವಾಗು ತ್ತದೆ. ಇಂತಹ ನೀತಿ ಶತಕದಲ್ಲಿ ಪ್ರಾಚೀನವೂ ಬಹಳ ಪ್ರಸಿದ್ಧವೂ ಆದ ಶತಕ 'ಸುಮತಿ ಶತಕ'.

ಸುಮತಿ ಶತಕವನ್ನು 13ನೇ ಶತಮಾನಕ್ಕೆ ಸೇರಿದ ಬದ್ದೆನ ಅಥವಾ ಭದ್ರ ಭೂಪಾಲ ಬರೆದನೆಂದು ಹಲವಾರು ವಿಮರ್ಶಕರು ಹೇಳುತ್ತಾರೆ. ಕೆಲವರು ಇದನ್ನು ವೇಮುಲವಾಡ ಭೀಮ ಕವಿ (11ನೇ ಶತಮಾನ) ಬರೆದನೆನ್ನುತ್ತಾರೆ. ಮತ್ತೆ ಕೆಲವರು 'ಸುಮತಿ' ಎನ್ನುವ ಜೈನಮುನಿ ಆತ್ಮಸಂಬೋಧನೆ ಪರವಾಗಿ, 'ಸುಮತಿ!' ಎಂಬ ಮಕುಟದಿಂದ ಇದನ್ನು ಬರೆದನೆಂದು ಭಾವಿಸುತ್ತಿದ್ದಾರೆ. (ವಂಗೂರಿ ಸುಬ್ಬಾ ರಾವು ಅವರು).

ಸಂಸ್ಕೃತದಲ್ಲಿ ವೇದ ಧರ್ಮಗಳನ್ನು ಬಿಟ್ಟು, ಪ್ರತ್ಯೇಕವಾದ ಧರ್ಮಶಾಸ್ತ್ರ ಗ್ರಂಥ ರಚನೆ ಯಾವಾಗ ಪ್ರಾರಂಭವಾಯಿತೋ ಗೊತ್ತಾಗಲಿಲ್ಲ. ಆದರೆ ಕ್ರಿ. ಪೂ. 600-300 ಮಧ್ಯ ಕಾಲದಲ್ಲಿ ಹೊರಗೆ ಬಂದ ಗೌತಮ, ಬೋಧಾಯನ. ಅಪಸ್ತಂಬರ ರಚನೆಗಳಿಂದ ಅವಕ್ಕೆ ಮುಂಚೆಯೇ ಕಾಶ್ಯಪ, ಮೌದ್ಗಲ್ಯ, ಹಾರೀತ ಎಂಬುವರು ಧರ್ಮಶಾಸ್ತ್ರ ಕರ್ತೃಗಳಾಗಿದ್ದರೆಂದು ಗೊತ್ತಾಗುತ್ತದೆ. ಆದರೆ ಅವರ ಗ್ರಂಥಗಳು ಉಪಲಬ್ಧವಿಲ್ಲ. ಆದ್ದರಿಂದ ಗೌತಮ, ಬೋಧಾಯನ, ಅಪಸ್ತಂಬರ ಗ್ರಂಥಗಳೇ ಮೊದಲನೆಯ ಧರ್ಮಶಾಸ್ತ್ರ ಗ್ರಂಥಗಳು. ಕ್ರಿ. ಶ. ಎರಡನೆಯ ಶತಮಾನಕ್ಕೆ ಧರ್ಮಶಾಸ್ತ್ರಗಳ ಪ್ರಾಮಾಣ್ಯವೂ ಹೆಚ್ಚಿತು. ಇವುಗಳನ್ನು ಅನುಸರಿಸಿ ಸಂಸ್ಕೃತದಲ್ಲಿ ನೀತಿಪ್ರಧಾನ್ಯವಾದ ಕಾವ್ಯಗಳು, ಶತಕಗಳು, ಹುಟ್ಟಿವೆ. ತೆಲುಗಿನಲ್ಲಿರುವ ನೀತಿ ಶತಕಗಳಿಗೆ ಕೂಡ ಸಂಸ್ಕೃತ ಧರ್ಮ ಶಾಸ್ತ್ರಗ್ರಂಥಗಳೇ ಆಧಾರ.

ನೀತಿ ಶತಕಗಳನ್ನು ಸಾಮಾನ್ಯ ನೀತಿ, ಅಧಿಕ್ಷೇಪ ನೀತಿ, ಹಾಸ್ಯನೀತಿ ಎಂದು ಮೂರು ವಿಧವಾಗಿ ವರ್ಗೀಕರಿಸಬಹುದು. ಇವುಗಳ ಜೊತೆಗೆ ಕೆಲ ಕವಿಗಳು ಸ್ವಾನುಭವಪೂರ್ವಕವಾದ ನೀತಿಗಳನ್ನು ಸಮಕಾಲಿಕ ಪರಿಸ್ಥಿತಿಗೆ ಅನುಗುಣವಾದ ನೀತಿಗಳನ್ನು ಹೇಳಿದರು. ಈ ನೀತಿಗಳಲ್ಲಿ ರಾಜನೀತಿ ಕೂಡ ಒಂದು ಪ್ರಧಾನ ವಾದ ವರ್ಗ.

ಬದ್ದೆನ ಅಥವಾ ಭದ್ರಭೂಪಾಲ ಮೊದಲು ನೀತಿಶಾಸ್ತ್ರ ಮುಕ್ತಾವಳಿಯನ್ನು ಬರೆದು, ನಂತರ ಸುಮತಿ ಶತಕವನ್ನು ಬರೆದನು. ನೀತಿಶಾಸ್ತ್ರ ಮುಕ್ತಾವಳಿ ಯಲ್ಲಿರುವ ಪದ್ಯಗಳ ಅನುಕರಣೆಗಳು ಸುಮತಿ ಶತಕದಲ್ಲಿ ಕಂಡುಬರುತ್ತವೆ. ಸುಮತಿ ಶತಕದಲ್ಲಿ ಸಾಮಾನ್ಯ ನೀತಿಗಳ ಸಂಖ್ಯೆಯೇ ಜಾಸ್ತಿ. ರಾಜನೀತಿಗಳು ಕೂಡ ಕೆಲವಿವೆ. ದೊರೆಗಳು, ಶಾನುಭೋಗರು, ವೈದಿಕ ಬ್ರಾಹ್ಮಣರು, ಸ್ತ್ರೀಯರು, ಪುರುಷರು

ಮುಂತಾದವರನ್ನು ಕುರಿತು ಬದ್ದೆನ ಹೇಳಿದ ನೀತಿಗಳು ಪ್ರಧಾನವಾಗಿ ಗಮನಿಸ ಬೇಕಾದವು. ಸಂಬಳವನ್ನು ಕೊಡದಂತಹ ದೊರೆಯನ್ನು ಸೇವಿಸುವುದು ವ್ಯರ್ಥ. ಶಾನಭೋಗರು ಮತ್ತು ವೈದಿಕರು ಇವರಲ್ಲಿ ಸಾಮರಸ್ಯ ಬೇಕು. ಗ್ರಾಮಜೀವನದಲ್ಲಿ ಶಾನುಭೋಗರಿಗೆ ಇರುವ ಪ್ರಾಧಾನ್ಯವನ್ನು ಕುರಿತು ಬದ್ದೆನ ಬಹಳ ಪದ್ಯಗಳನ್ನು ಹೇಳಿದ್ದಾನೆ.

ಬದ್ದೆನ ಬೋಧಿಸಿದ ನೀತಿಗಳು ಜನರ ಜೀವನ ವಿಧಾನಕ್ಕೆ ಮತ್ತು ಅವರ ಗುಣ ಸ್ವಭಾವಕ್ಕೆ ಕನ್ನಡಿಯಾಗಿದೆ. ಗ್ರಾಮಜೀವನಕ್ಕೆ ಸಂಬಂಧಿಸಿದ ಎಷ್ಟೋ ವಿಷಯಗಳನ್ನು ಬದ್ದೆನ ಹೇಳಿದ್ದಾನೆ. ಗ್ರಾಮಕ್ಕೆ ಪ್ರಾಣಪ್ರಾಯ ಕೋಮಟಿ. ಈತ ಗ್ರಾಮೀಣ ಆರ್ಥಿಕ ವ್ಯವಸ್ಥೆಯ ಪ್ರತೀಕ. ವೈದ್ಯನಿಗೂ ಪುರೋಹಿತನಿಗೂ ಆಯಾ ರಂಗಗಳಲ್ಲಿ ಪ್ರಾಧಾನ್ಯವಿದೆ. ಪ್ರಾಚೀನ ಕಾಲದಲ್ಲಿ ಸಾಮಾಜಿಕ ಜೀವನವೆಲ್ಲ ನದೀ ತೀರಗಳಲ್ಲಿತ್ತು. ನೀರೇ ಪ್ರಾಣಾಧಾರವಾಗಿರುವುದರಿಂದ ಗ್ರಾಮ ನಿರ್ಮಾಣ ನೀರಿನ ಸೌಕರ್ಯವನ್ನು ನೋಡಿ ಮಾಡುತ್ತಿದ್ದರು. ಅದಲ್ಲದೆ ಬೇಸಾಯಕ್ಕೆ ಕೂಡ ನೀರೇ ಆಧಾರ. ಇವೆಲ್ಲವನ್ನೂ ಗಮನಿಸಿ, ಬದ್ದೆನ "ಸಾಲ ಕೊಡುವವನು, ವೈದ್ಯನು, ಯಾವಾಗಲೂ ಹರಿಯುವ ಹೊಳೆ, ಬ್ರಾಹ್ಮಣ ಇರುವ ಗ್ರಾಮದಲ್ಲಿ ಮಾತ್ರ ವಾಸ ಮಾಡಬೇಕು" ಎಂದು ತೀರ್ಮಾನಿಸಿದ್ದಾನೆ.

ಆಯಾ ಕಾಲಗಳಲ್ಲಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ವೈಯಕ್ತಿಕ ಅನುಭವ ಗಳನ್ನಾಧಾರವಾಗಿಟ್ಟುಕೊಂಡು, ನೀತಿಶತಕ ಕರ್ತರು ಸ್ತ್ರೀಯರನ್ನು ಕುರಿತು ಅಭಿ ಪ್ರಾಯಗಳನ್ನು ಹೇಳಿದ್ದರೆ ಇವು ಒಂದೊಂದು ಸಲ ಪರಸ್ಪರ ವಿರುದ್ಧವಾಗಿರುತ್ತವೆ. ಬದ್ದೆನ ಕುಲಕಾಂತೆಯನ್ನು ಪ್ರಶಂಸಿಸಿದನು. ಆದರೆ ಇನ್ನೊಂದು ಕಡೆ, ಹೆಂಗಸರಿಗೆ ವಿಶ್ವಾಸವಿರುವುದಿಲ್ಲ, ಅವರು ಗಂಡಸರನ್ನು ಪ್ರೀತಿಸುತ್ತಾರೆನ್ನುವುದು ಸುಳ್ಳು ಎನ್ನುತ್ತಾನೆ. ಸ್ತ್ರೀಯರು ಸಂಪಾದನೆ ಮಾಡುವ ಗಂಡನನ್ನೇ ಗೌರವಿಸುತ್ತಾರೆಂದೂ ಕೂದಲು, ಶರೀರ, ಉಡುಪುಗಳು ಇವು ಮಾಸಿದರೆ, ಪ್ರಾಣಕ್ಕೆ ಸಮಾನನಾದ ಗಂಡನನ್ನೂ ಕೂಡ (ಪತಿವ್ರತೆಯಾದ ಹೆಂಡತಿ ಕೂಡ) ಅಸಹ್ಯಪಡುತ್ತಾಳೆಂದೂ ಬದ್ದೆನ ಅವರ ಸ್ವಭಾವವನ್ನು ಹೇಳಿದನು. ಸ್ತ್ರೀಯರಿಗೆ ಪತಿ ಇಲ್ಲದ ಜೀವನ ಕಷ್ಟವೆಂದು, ಅವರಿಗೆ ಮಾನವೇ ಭೂಷಣವೆಂದು, ಅವರು ಗಂಡಸರನ್ನು ಗೌರವಿಸ ಬೇಕೆಂದು, ಪರ ಪುರುಷರೊಂದಿಗೆ ಸರಸ ಸಲ್ಲಾಪ ಮಾಡಬಾರದೆಂದು, ಗಂಡನ ಎದುರು ನಿಷ್ಕಾರಣವಾಗಿ ನಗಬಾರದೆಂದು ಹಿತಬೋಧೆ ಮಾಡಿದನು, ಸ್ತ್ರೀಯರಿಗೆ ಸೀರೆ, ಕುರುಬು ಶೃಂಗಾರವೆಂದು ಹೇಳಿದ್ದಾನೆ.

ಭದ್ರಭೂಪಾಲ, ಇದೇ ರೀತಿಯಲ್ಲಿ ಪುರುಷರಿಗೆ ಕೂಡ ಉಪದೇಶ ಮಾಡಿ ದ್ದಾನೆ. ಪುರುಷರಿಗೆ ನಾರಿ ರತ್ನದಂತಹದು. ಹೆಂಡತಿಯೊಂದಿಗೆ ಜಗಳ ಮಾಡ

ಬಾರದು, ವಾದ ಮಾಡಬಾರದು, ಪರಸತಿಯನ್ನು ಕೋರಬಾರದು. ಹೆಂಡತಿ, ಮಕ್ಕಳು, ದೇವರು, ಗುರು ಮತ್ತು ರಾಜ ಇವರ ಕಡೆಗೆ ಹೋಗುವಾಗ ಬರೀ ಕೈಯಿಂದ ಹೋಗಬಾರದೆಂದು ಹೇಳುತ್ತಾನೆ. ಪುರುಷರು ವೇಶ್ಯೆಯರ ಸಂಪರ್ಕವನ್ನು ಇಟ್ಟುಕೊಳ್ಳಬಾರದು. ಅವರಿಗೆ ಧನವೇ ಪ್ರಧಾನ. ಅವರಿಗೆ ಪ್ರೀತಿ ವಿಶ್ವಾಸ ಗಳಿರುವುದಿಲ್ಲ ಎನ್ನುತ್ತಾನೆ.

ಲೋಕ ಪರಿಶೀಲನೆಯಿಂದ, ಲೋಕಾನುಭವದಿಂದ ಮತ್ತು ಸ್ವಾನುಭವದಿಂದ ಬದ್ದೆನ ಹೇಳಿದ ನೀತಿಗಳು ಕೆಲವಿವೆ. ಸಾಲ ಮಾಡಿ ಮಜಾ ಮಾಡಿದರೆ ಅದು ಕೇಡು ತರುತ್ತದೆ. ಸುಂಕದ ಅಧಿಕಾರಿಯನ್ನು, ಜೂಜುಗಾರನನ್ನು, ಅಕ್ಕಸಾಲಿಗನನ್ನು ವೇಶ್ಯೆಯನ್ನು, ಅಂಗಡಿಯವನನ್ನು, ಎಡಗೈಯಿಂದ ಬರೆಯುವವನನ್ನು ನಂಬಬಾರ ದೆನ್ನುತ್ತಾನೆ. ಸಭೆಯೊಳಗೆ ನಗಬಾರದು, ತಾಂಬೂಲವನ್ನು ಹಾಕದ ಬಾಯಿ ಹೀನವಾದುದು. ತನ್ನ ಕೋಪವೇ ತನ್ನ ಶತ್ರು. ಕೈಗಳಿಗೆ ಆಭರಣ ದಾನ ಗುಣ. ತನ್ನ ಸಂತೋಷವೇ ತನ್ನ ಸ್ವರ್ಗ ; ತನ್ನ ದುಃಖವೇ ತನ್ನ ನರಕ. ಬಂಗಾರವನ್ನು ಅಡ ಇಡಬಾರದು. ಯೌವನದಲ್ಲಿ ಹೆಂಡತಿಯನ್ನು ತವರು ಮನೆಯಲ್ಲಿ ಬಿಡ ಬಾರದು—ಮುಂತಾದ ನೀತಿಗಳು ಇಂತಹವು.

ಸಂಸ್ಕೃತ ನೀತಿಶಾಸ್ತ್ರದಲ್ಲಿನ ಶ್ಲೋಕಗಳನ್ನು ಬದ್ದೆನ ಅಲ್ಲಲ್ಲಿ ಉಪಯೋಗಿಸಿ ಕೊಂಡಿದ್ದಾನೆ. ಉದಾಹರಣೆಗೆ–

"ತಲನುಂಡು ವಿಷಮು ಫಣಿಕಿನಿ
ನೆಲಯೆಂಗಾ ತೋಕನುಂಡು ವೃಶ್ಚಿಕಮುನಕುನ್
ತಲತೋಕ ಯನಕ ನುಂಡುನು
ಖಲುನಕು ನಿಲುವೆಲ್ಲ ವಿಷಮು ಗದರಾ ಸುಮತೀ !"

–ಎನ್ನುವ ಪದ್ಯ ಈ ಕೆಳಗಿನ ಶ್ಲೋಕದ ಅನುವಾದ :

"ವೃಶ್ಚಿಕಸ್ಯ ವಿಷಂ ಪುಚ್ಛಂ
ಮಕ್ಷಿಕಸ್ಯ ವಿಷಂ ಶಿರ ;
ತಕ್ಷಕಸ್ಯ ವಿಷಂ ದಷ್ಟ್ರಾ
ಸರ್ವಾಂಗಂ ದುರ್ಜನೇ ವಿಷಃ"

"ಕಾರ್ಯೇಷು ದಾಸೀ ಕರಣೇಷು ಮಂತ್ರಿ" ಎನ್ನುವ ಶ್ಲೋಕವೇ "ಪನಿಜೇಯು ನೆಡಲದಾಸಿಯು" ಎನ್ನುವ ಪದ್ಯವಾಯಿತು. ಹಾಗೆಯೇ ಸ್ತ್ರೀಯರನ್ನು ಕುರಿತು

ಹೇಳಿದ ನೀತಿಗಳಲ್ಲಿ ಭರ್ತೃಹರಿ ಮುಂತಾದವರ ಶುಭಾಷಿತಗಳ ಅನುಸರಣೆಗಳು ಕೂಡ ಕಂಡುಬರುತ್ತವೆ .

ನೀತಿಯನ್ನು ಬೋಧಿಸುವುದರಲ್ಲಿ ಬದ್ದೆನ ಕೆಲವು ಪದ್ಧತಿಗಳನ್ನು ಅನುಸರಿಸುತ್ತಾನೆ. ಕೆಲವು ಪದ್ಯಗಳಲ್ಲಿ ಸಂಸ್ಕೃತ ಕವಿಗಳನ್ನು ಅನುಸರಿಸಿದನು. ಮತ್ತೆ ಕೆಲವು ಪದ್ಯಗಳಲ್ಲಿ ಪ್ರಾಚೀನ ತೆಲುಗು ಕವಿಗಳನ್ನು ಅನುಸರಿಸಿದನು. ಅನೇಕಾಂಶಗಳನ್ನು ಒಂದೆಡೆ ಸೇರಿಸಿ, ಅವು ನಿಷಿದ್ಧವಾದುವೋ ಅಥವಾ ಅನುಸರಣೀಯವಾದುವೋ ಸ್ಪಷ್ಟಪಡಿಸುತ್ತಾನೆ. ಇದೊಂದು ಪದ್ಧತಿ. "ಅಳಿಯನಲ್ಲಿ ಒಳ್ಳೆಯತನವೂ, ಗೊಲ್ಲನಲ್ಲಿ ಸಾಹಿತ್ಯ ವಿದ್ಯೆಯೂ, ಹೆಂಗಸರಲ್ಲಿ ಸತ್ಯವೂ, ಜಳ್ಳುಬತ್ತವನ್ನು ಕುಟ್ಟಿ ಮಾಡಿದ ಅಕ್ಕಿ, ಬಿಳಿಯ ಕಾಗೆಗಳೂ ಇಲ್ಲ" ಎಂದು ಹೇಳಿದ ಪದ್ಯ ಇದಕ್ಕೆ ಉದಾಹರಣೆ.

ದೃಷ್ಟಾಂತಗಳಿಂದ, ಉಪಮಾನಗಳಿಂದ, ಉಪದೇಶವನ್ನು ಮಾಡುವುದು ಬದ್ದೆನನಲ್ಲಿರುವ ಮತ್ತೊಂದು ಪದ್ಧತಿ. ಈ ಪದ್ಧತಿಯಲ್ಲಿ ಹೇಳಿದ ನೀತಿಗಳು ಕೆಲವು ಸೂಕ್ತಿಗಳ ಹಾಗಿರುತ್ತವೆ; ಅನ್ಯೋಪದೇಶವಾಗಿರುತ್ತವೆ; ಅರ್ಥಾಂತರ ನ್ಯಾಸಾಲಂಕಾರದಿಂದ ಅಲಂಕೃತವಾಗಿರುತ್ತದೆ." ಚೆನ್ನಾಗಿ ಓದದ ಬಾಯಿ, ತಾಯಿಯನ್ನು 'ಅಮ್ಮಾ' ಎಂದು ಕರೆದು ಊಟ ಕೇಳದ ಬಾಯಿ, ತಮ್ಮಂದಿರನ್ನು ಕರೆಯದ ಬಾಯಿ–ಇವು ಕುಂಬಾರನು ಮಣ್ಣಿಗಾಗಿ ಅಗೆದ ಗುಳಿ ಕಣೋ; ಎನ್ನುವ ಪದ್ಯವು ಮತ್ತೆ "ಉತ್ತಮ ಗುಣಗಳು ನೀಚನಿಗೆ ಬರುವುದಿಲ್ಲ. ಇದು ಹೇಗೆಂದರೆ, ಬಂಗಾರಕ್ಕೆ ಸರಿತೂಕ ಹಿತ್ತಾಳೆಯನ್ನು ಕರಗಿಸಿ ಹುಯ್ದರೆ ಅದು ಉತ್ತಮ ಬಂಗಾರವಾಗುತ್ತದೆಯೇ ?" ಎನ್ನುವ ಪದ್ಯ ಇದಕ್ಕೆ ಉದಾಹರಣೆಗಳು.

ಬದ್ದೆನ ಕೆಲವು ಪದ್ಯಗಳಲ್ಲಿ ಒಂದೊಂದು ಪಾದದಲ್ಲಿ ಒಂದೊಂದು ನೀತಿ ಹೇಳುತ್ತಾನೆ. "ಹಸಿವಾದಾಗ ತಿನ್ನುವ ಅನ್ನವೇ ಅಮೃತ; ಏನೂ ಸಂಕೋಚ ಪಡದೆ ಕೊಡುವವನೇ ದಾತ; ದುಃಖವನ್ನು ಸಹಿಸುವವನೇ ಮನುಷ್ಯ; ಧೈರ್ಯವಿರುವವನೇ ವಂಶಕ್ಕೆ ತಿಲಕಪ್ರಾಯನು" (ನೋಡಿ : ಪದ್ಯ–9)

ಇನ್ನೂ ಕೆಲವು ಪದ್ಯಗಳಲ್ಲಿ, ಬದ್ದೆನ, ಒಂದೇ ಕ್ರಿಯಾಪದವನ್ನು ನಾಲ್ಕು ಪಾದಗಳಲ್ಲಿಯೂ ಬಳಸಿ ನಿಕ್ಷೇಪ ಮಾಡಬೇಕಾದ ವಿಷಯಗಳನ್ನು ಸೂಚಿಸುತ್ತಾನೆ.

"ನಮ್ಮಕು ಸುಂಕರಿ ಜೂದರಿ
ನಮ್ಮಕು ಮಗಸಾಲಿವಾನಿ ನಟುವೆಲಿಯಾಲಿನ್
ನಮ್ಮಕು ಮಂಗಡಿ ವಾನಿನಿ
ನಮ್ಮಕುಮೀ ವಾಮಹಸ್ತು ನವನಿನಿ ಸುಮತೀ !" (ಪದ್ಯ 62)

"ನವ್ವಕುಮಿಾ ಸಭೆಲೋಪಲ...." ಎನ್ನುವ 66ನೇ ಪದ್ಯವೂ ಇಾತಹದೇ.

ಬದ್ದೆನ ಹೆಜ್ಜೆ ಹೆಜ್ಜೆಗೂ ಗಾದೆಗಳು, ನುಡಿಗಟ್ಟುಗಳನ್ನು ಬಳಸುತ್ತಾನೆ. ವ್ಯರ್ಥ ಪದಗಳಿಲ್ಲದೆ, ಪ್ರತಿ ಪದ್ಯವೂ ಪೂರ್ಣವಾದ ಒಂದು ಅಮೃತಭಾಂಡದಂತೆ ಇರುತ್ತದೆ. ತನ್ನ ಮೊಟ್ಟಮೊದಲನೆಯ ಪದ್ಯದಲ್ಲಿ ಬದ್ದೆ ನ "ಶ್ರೀರಾಮನ ದಯೆ ಯಿಂದ ಎಲ್ಲಾ ಜನರೂ 'ಭಲೇ! ಚೆನ್ನಾಗಿದೆ' ಎಂದು ಮೆಚ್ಚುವಂತೆ, ಧಾರಾಳವಾದ ನೀತಿಗಳನ್ನು ಓದುಗನಿಗೆ ಆಸಕ್ತಿ ಮೂಡಿಸಿ, ಮತ್ತೆ ಮತ್ತೆ ಓದಬೇಕೆಂಬ ಅಭಿರುಚಿ ಉಂಟಾಗುವಂತೆ ನಾನು ಹೇಳುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು, ಈ ತನ್ನ ಪ್ರತಿಜ್ಞೆಯನ್ನು ಈ ಶತಕದಲ್ಲಿ ಪ್ರತಿಯೊಂದು ಪದ್ಯದಲ್ಲಿಯೂ ಬದ್ದೆನ ಪಾಲಿಸಿದ್ದಾನೆ ಎನ್ನುವುದರಲ್ಲಿ ಸಂದೇಹವಿಲ್ಲ.

ಇಂತಹ ಉತ್ತಮವಾದ, ಬಹಳ ಜನಪ್ರಿಯವಾದ ಶತಕವನ್ನು ತೆಲುಗಿನಿಂದ ಕನ್ನಡಕ್ಕೆ ಅನುವಾದ ಮಾಡಿದ ಎಂ. ದೇವರಕೊಂಡಪ್ಪ ಅವರನ್ನುನಾನು ಅಭಿನಂದಿಸು ತ್ತೇನೆ. ಈ ಶತಕ ಕಂದ ಪದ್ಯಗಳಲ್ಲಿ ಬರೆಯಲ್ಪಟ್ಟಿದೆ. ತೆಲುಗು ಸಾಹಿತ್ಯದಲ್ಲಿ ಕಂದ ಪದ್ಯವನ್ನು ಬಹಳ ಸೊಗಸಾಗಿ ಬರೆದ ಕವಿಗಳು: ತಿಕ್ಕನ, ಬದ್ದೆನ ಮತ್ತು ಕವಿ ಚೌಡಪ್ಪ. "ಕಂದವನ್ನು ಬರೆದವನೇ ಕವಿ; ಹಂದಿಯನ್ನು ಹೊಡೆದವನೇ ಬಂಟ" ಎಂದು ತೆಲುಗಿ ನಲ್ಲಿ ಒಂದು ಗಾದೆಯಿದೆ. ಇಂತಹ ಕಂದಪದ್ಯ ಶತಕವನ್ನು ಕಂದಪದ್ಯಗಳಲ್ಲಿಯೇ ಅನುವಾದ ಮಾಡಿದ ದೇವರಕೊಂಡಪ್ಪನವರ ಸಾಮರ್ಥ್ಯ ಪ್ರಶಂಸಾರ್ಹವಾದುದು. ಮೂಲ ತೆಲುಗು ಪದ್ಯವನ್ನು ಕನ್ನಡ ಲಿಪಿಯಲ್ಲಿ ಕೊಟ್ಟು, ನಂತರ ಅದರ ಕನ್ನಡಾನು ವಾದ ಕಂದ ಪದ್ಯದಲ್ಲೇ ರಚಿಸಿ, ಮತ್ತೆ ಅದರ ಕೆಳಗಡೆ ತಾತ್ಪರ್ಯವನ್ನೂ ಸಹ ಒದಗಿಸಿದ್ದಾರೆ. ಈ ಪದ್ಧತಿ ಸಹೃದಯರಿಗೆ ಬಹಳ ಅನುಕೂಲವನ್ನು. ಸಂತೋಷ ವನ್ನು ಉಂಟುಮಾಡುತ್ತದೆಂದು ನಾನು ನಂಬಿದ್ದೇನೆ. ದೇವರಕೊಂಡಪ್ಪನವರು ಇನ್ನಷ್ಟು ಅನುವಾದಗಳನ್ನು ಮಾಡಿ, ಕನ್ನಡ ಸಾಹಿತ್ಯವನ್ನು ಸಂಪದ್ಭರಿತವನ್ನಾಗಿ ಮಾಡುತ್ತಾರೆಂದು ಭಾವಿಸಿದ್ದೇನೆ. ಅವರಿಗೆ ಒಳ್ಳೆಯದನ್ನು ಹಾರೈಸುತ್ತೇನೆ,

'ಜ್ಞಾನಭಾರತಿ', ಬೆಂಗಳೂರು
ಆಂಗೀರಸ ಸಂಕ್ರಾಂತಿ

—ತಂಗಿರಾಲ ವೆಂಕಟಸುಬ್ಬರಾವ್
14–1–1993

# ಅ ರ್ಪ ಣೆ

ಯತೀಂದ್ರರಾದ

ಶ್ರೀ ಕೈವಾರ ನಾರಾಯಣಪ್ಪನವರ

ಅಡಿದಾವರೆಗೆ

# ಸುಮತಿ ಶತಕ

1. ಮೂಲ : ಶ್ರೀರಾಮುನಿ ದಯಚೇತನು
ನಾರೂಢಿಗ ಸಕಲ ಜನುಲು ನೌರಾಯನಗಾ
ಧಾರಾಳಮ್ಮೈನ ನೀತುಲು
ನೋರೂರಗ ಜವುಲು ಬುಟ್ಟ ನುಡಿವೆದ ಸುಮತೀ

ಅನುವಾದ : ಶ್ರೀರಾಮನ ಒಲುಮೆಯು ಬಲ
ದಿಂ ರೂಢಿಯೊಳು ಸಕಲ ಜನ ಭಲೇ ಎನುವೊಲ್
ಧಾರಾಳದಿ ನೀತಿಗಳನು
ಹುರುಪುಂ ಅಭಿರುಚಿ ಉದಯಿಸೆ ನುಡಿಯುವೆ ಸುಮತೀ,

ತಾತ್ಪರ್ಯ : ಹೇಳಿದ ನೀತಿಯನ್ನು ಕೇಳುವವನಿಗೆ ಸುಬುದ್ಧಿ ಇರಬೇಕು. ಕಾರಣ 'ಸುಮತೀ' ಒಳ್ಳೆಯ ಬುದ್ಧಿವಂತನೇ ಎಂಬುದಾಗಿ ಸಂಬೋಧಿಸಲಾಗಿದೆ. ನೀತಿ ವಚನಗಳನ್ನು ಹೇಳುವ ಮೊದಲಿಗೆ, ಶ್ರೀರಾಮನ ಅನುಗ್ರಹ ಬಯಸಿ ಕವಿ ನುಡಿಯಲು ಪ್ರಾರಂಭ ಮಾಡುತ್ತಾನೆ. ಸಕಲ ಜನರು ಭಲೇ ಚೆನ್ನಾಗಿದೆ ಎಂದು ಹೊಗಳುವಂತೆಯೂ, ಓದುಗನಿಗೆ ಆಸಕ್ತಿ ಮೂಡಿ, ಮತ್ತೆ ಮತ್ತೆ ಓದಬೇಕೆಂಬ ಅಭಿರುಚಿ ಉಂಟಾಗುವಂತೆ ನುಡಿಯುವುದಾಗಿ ಕವಿ ಹೇಳುತ್ತಾನೆ.

2. ಮೂಲ : ಅಕ್ಕರಕುರಾನಿ ಚುಟ್ಟಮು
ಮ್ರೊಕ್ಕಿನ ವರಮೀನಿ ವೇಲ್ಪು ಮೋಹರಮುನದಾ
ನೆಕ್ಕಿನ ಬಾರನಿ ಗುರ್ರಮು
ಗ್ರಕ್ಕುನ ವಿಡವಂಗ ವಲಯು ಗದರಾ ಸುಮತೀ

ಅನುವಾದ : ಸಮಯಕೆ ಒದಗದ ನೆಂಟನ
ನಮಿಸಲ್ ವರವೀಯದ ಸುರ ಏರಲು ಸಮರದಿ
ತಾಮುಂದೋಡದ ಹಯನವ
ಸುಮ್ಮನೆ ಬಿಡಬೇಕವುಗಳ ಅಲ್ಲವೆ ಸುಮತೀ

ತಾತ್ಪರ್ಯ : ಆಪತ್ಕಾಲದಲ್ಲಿ ಸಹಾಯ ಮಾಡಬೇಕಾದುದು ನೆಂಟನ ಕರ್ತವ್ಯ. ಸಮಯಕ್ಕೆ ನೆರವಾಗದ ನೆಂಟನನ್ನು ಬಿಡಬೇಕು. ಅಂತೆಯೇ ಪೂಜಿಸಿದರೂ ವರವನ್ನು ಕೊಡದ ದೈವವನ್ನು ಬಿಡಬೇಕು. ಮತ್ತೆ ರಣರಂಗದಲ್ಲಿ ಮುಂದೆ ಓಡದ ಕುದುರೆಯನ್ನೂ ಸಹ ತಕ್ಷಣ ಬಿಟ್ಟುಬಿಡಬೇಕು.

3. ಮೂಲ : ಅಡಗಿನ ಜೀತಂಬಿಯ್ಯನಿ
ಮಿಡಿಮೇಲಪುದೊರನು ಗೊಲ್ಚಿ ಮಿಡಕುಟ ಕಂಟೆನ್
ವಡಿಗಲ ಎದ್ದುಲ ಗಟ್ಟುಕ
ಮಡಿದುನ್ನುಕ ಬ್ರತುಕವಚ್ಚು ಮಹಿಲೋ ಸುಮತೀ

ಅನುವಾದ : ಕೇಳಿಯು ಜೀತವ ನೀಯದ
ಖಳ ಗರ್ವಿ ಅರಸನ ಸೇವೆ ಕಸಿವಿಸಿ ಬದಲಿಗೆ
ಉಳುವಾ ಎತ್ತುಗಳ ಗಳಿಸಿ
ಹೊಲವನುಳುತ ಜೀವಿಸುವುದು ಒಳಿತೈ ಸುಮತೀ

ತಾತ್ಪರ್ಯ : ಕೆಲಸಗಾರನಿಗೆ ಕಾಲಕ್ಕೆ ಸರಿಯಾಗಿ ಧಣಿ ಸಂಬಳ ಕೊಡಬೇಕು, ಬಾಯಿಬಿಟ್ಟು ಕೇಳಿದರೂ ಸಹ ಸಂಬಳ ಕೊಡದ ಯಜಮಾನನ ಸೇವೆ ಮಾಡಿ ಕಸಿವಿಸಿಪಡುವುದಕ್ಕಿಂತ ಒಂದು ಜೊತೆ ಎತ್ತುಗಳನ್ನು ಸಂಪಾದಿಸಿ ಹೊಲವನ್ನು ಉತ್ತು ಅದರಿಂದ ಜೀವನ ಸಾಗಿಸುವುದು ಉತ್ತಮ.

4. ಮೂಲ : ಅಡಿಯಾಸ ಕೊಲುವು ಗೊಲುವಕು
ಗುಡಿ ಮಣಿಯಮು ಸೇಯಬೋಕು ಕುಜನುಲ ತೋಡನ್
ವಿಡುವಕ ಕೂರಿಮಿ ಸೇಯಕು
ಮಡವಿನಿ ದೋಡರಯಕೊಂಟಿ ನರುಗಕು ಸುಮತೀ

ಅನುವಾದ : ಬಿಡು ಹಿರಿಯಾಸೆಯ ಓಲಗ
ಮಾಡದಿರು ಗುಡಿಯಧಿಕಾರ ದುರ್ಜನರೊಳಗುಂ
ಬಿಡದಲೆ ಮೈತ್ರಿಯ ಗೈಯದೆ
ಅಡವಿಯೊಳು ಸಂಚರಿಸದಿರು ಒಬ್ಬನೆ ಸುಮತೀ

ತಾತ್ಪರ್ಯ : ತನಗೆ ಅಧಿಕ ಲಾಭ ಸಿಗುವುದೆಂಬ ಹಿರಿಯಾಸೆಯಿಂದ ಸಭೆಯಲ್ಲಿ ಪಾಲ್ಗೊಳ್ಳಬಾರದು. ದೇವಸ್ಥಾನದ ಮೇಲೆ ಅಧಿಕಾರ ಮಾಡಬಾರದು. ಅಧಿಕಾರ ನಡೆಸುವುದಾದರೆ ದೇವತಾ ಕಾರ್ಯಗಳು ಕುಂಟಿತವಾಗುತ್ತದೆ. ಕೆಟ್ಟವರಲ್ಲಿ ಸದಾ ಮೈತ್ರಿಯಿಂದ ಕೂಡಿರಬಾರದು. ಅಂತೆಯೇ ಕಾಡಿನಲ್ಲಿ ಒಂಟಿಯಾಗಿ ಸಂಚರಿಸಬಾರದು.

5. ಮೂಲ : ಅಧರಮು ಕದಲಿಯು ಕದಲಕ
ಮಧುರಮುಲಗು ಭಾಷಲುಡುಗಿ ಮೌನ ವ್ರತುಡೌ
ನಧಿಕಾರ ರೋಗಪೂರಿತ
ಬಧಿರಾಂಧಕ ಶವಮು ಜೂಡ ಬಾಪಮು ಸುಮತೀ

ಅನುವಾದ : ಅಧರವು ಕದಲಿಯು ಕದಲದೆ
ಮಧುರ ನುಡಿಗಳಂ ನುಡಿಯುದೆ ಮೌನವ ತಳೆದಾ
ಅಧಿಕಾರ ರೋಗಪೂರಿತ
ಬಧಿರಾಂಧ ಶವವನು ನೋಡೆ ಪಾಪವೊ ಸುಮತೀ

ತಾತ್ಪರ್ಯ : ತುಟಿಗಳನ್ನು ಅಲುಗಾಡಿಸದೆ ಸರಿಯಾಗಿ ಮಾತನಾಡದೆ ಬಂದವರ ಕಷ್ಟಗಳನ್ನು ಅರಿಯದೆ, ಮೌನ ತಾಳಿ ಅಧಿಕಾರ ಲಾಲಸೆಯಿಂದ, ಕಂಡು ಕಾಣದ ಕುರುಡನಂತೆಯೂ ಅವರ ಸಮಸ್ಯೆಗಳನ್ನು ಕೇಳದೆ ಕಿವುಡನಂತೆಯೂ ಇರುವ ಅಧಿಕಾರಿಯ ಸಂದರ್ಶನದಿಂದ ಪಾಪವು ಬರುತ್ತದೆಯೇ ಹೊರತು ಯಾವ ಉಪಯೋಗವೂ ಆಗುವುದಿಲ್ಲ.

6. ಮೂಲ : ಅಪ್ಪುಗೊನಿಜೇಯುವಿಭವಮು
ಮುಪ್ಪುನ ಬ್ರಾಯಂಪುಟಾಲು ಮೂರ್ಖುನಿ ತಪಮುನ್
ದಪ್ಪರಯುನಿ ನೃಪುರಾಜ್ಯಮು
ದೆಪ್ಪರಮ್ಮೈಮೀದಗೀಡು : ದೆಚ್ಚುರ ಸುಮತೀ

ಅನುವಾದ : ಪಡೆದು ಋಣವ ಮಾಳ್ಪವಿಭವ
ಮುದಿತನದೊಳ್ ಪರೆಯುದ ಸತಿ ದಡ್ಡನ ತಪವುಂ
ಕೇಡರಿಯದ ನೃಪಪಾಲನೆ
ಕಡು ಹಾನಿ ತರುವುದು ಮುಂದೆ ತಿಳಿಯೈ ಸುಮತೀ

ತಾತ್ಪರ್ಯ : ಸಾಲವನ್ನು ಮಾಡಿ ವೈಭವಪೂರಿತ ಜೀವನ ಮಾಡುವುದು ಒಳಿತಲ್ಲ, ಇದರಿಂದ ಸಾಲಗಳು ಹೆಚ್ಚುತ್ತವೆ. ಇಳಿ ವಯಸ್ಸಿನಲ್ಲಿ ಪರೆಯುದ ಹೆಣ್ಣನ್ನು ಮದುವೆಯಾಗುವುದು ದುಃಖಕ್ಕೆ ಕಾರಣ. ತಿಳುವಳಿಕೆ ಇಲ್ಲದೆ ಮಾಡುವ ತಪಸ್ಸು, ಜನರ ತಪ್ಪುಗಳನ್ನು ಅರಿತು ಶಿಕ್ಷೆ ವಿಧಿಸದ ಅರಸನ ರಾಜ್ಯವು ಮುಂದೆ ಕಷ್ಟಕ್ಕೆ ಗುರಿಯಾಗುತ್ತದೆ.

7. ಮೂಲ : ಅಪ್ಪಿಚ್ಚುವಾಡು ವೈದ್ಯುಡು
ನೆಪ್ಪುಡು ನೆಡತೆಗಕಪಾರು ನೇರುನು ದ್ವಿಜುಡುನ್
ಜೊಪ್ಪಡಿನ ಯೂರನುಂಡುಮು
ಜೊಪ್ಪಡಕುನ್ನಟ್ಟಿಯೂರು ಸೊರಕುಮು ಸುಮತೀ

ಅನುವಾದ : ಸಾಲವ ಕೊಡುವವ ವೈದ್ಯನು
ನಿಲ್ಲದೆ ಒಣಗದೆ ಹರಿಯುವ ನದಿಯುಂ ದ್ವಿಜನುಂ
ಕಲಹವಿರದ ಊರೊಳಿರು ಆ
ವಿಲ್ಲದ ಊರಿಗೆ ಪೊಗದಿರು ವಾಸಕೆ ಸುಮತೀ

ತಾತ್ಪರ್ಯ : ಯಾವುದೇ ಊರಿನಲ್ಲಿ ವಾಸ ಮಾಡಬೇಕಾದರೆ, ಕಷ್ಟ ಬಂದಾಗ ಸಾಲ ಮತ್ತು ಖಾಯಿಲೆ ಬಂದಾಗ ಔಷಧೋಪಚಾರ ಸಿಗುವಂತಿರಬೇಕು. ಆ ಊರಿನಲ್ಲಿ ವೈದಿಕ ಕಾರ್ಯಗಳಿಗೆ ಒಬ್ಬ ಬ್ರಾಹ್ಮಣನು ಇರಬೇಕು. ಕೃಷಿ ಕಾರ್ಯಕ್ಕೆ ಊರ ಹತ್ತಿರ ಸದಾ ಹರಿಯುವ ನದಿ ಇರಬೇಕು, ಊರಲ್ಲಿ ಕಲಹಗಳು ಇರಬಾರದು. ಇಂತಹ ಸೌಲಭ್ಯಗಳಿಲ್ಲದ ಊರಲ್ಲಿ ವಾಸ ಮಾಡಬಾರದು,

8. ಮೂಲ ; ಅಲ್ಲುನಿ ಮಂಚಿತನಂಬುನು
ಗೊಲ್ಲನಿ ಸಾಹಿತ್ಯ ವಿದ್ಯ ಕೋಮಲಿ ನಿಜಮುನ್
ಬೊಲ್ಲುನ ದಂಚಿನ ಬಿಯ್ಯಮು
ದೆಲ್ಲನಿ ಕಾಕುಲುನು ಲೇವು ತೆಲಿಯುರ ಸುಮತೀ

ಅನುವಾದ : ಅಳಿಯನ ಒಳ್ಳೆಯತನವುಂ
ಗೊಲ್ಲನ ಸಾಹಿತ್ಯ ವಿದ್ಯೆ ಕೋಮಲೆ ನಿಜವುಂ
ಜಳ್ಳಲಿ ಕುಟ್ಟಿದ ಅಕ್ಕಿಯು
ಬೆಳ್ಳನೆ ವಾಯಸಗಳಿಲ್ಲ ತಿಳಿಯೈ ಸುಮತೀ

ತಾತ್ಪರ್ಯ : ಜಳ್ಳುಬತ್ತವನ್ನು ಕುಟ್ಟಿ ಯಾವ ರೀತಿಯಲ್ಲಿ ಅಕ್ಕಿಯನ್ನು ಪಡೆಯುವುದಕ್ಕಾಗುವುದಿಲ್ಲವೋ, ಬಿಳಿಯ ಕಾಗೆಗಳನ್ನು ನೋಡುವುದಕ್ಕಾಗುವುದಿಲ್ಲವೋ, ಅದೇ ರೀತಿ ನಾರಿಯ ನಿಜವನ್ನೂ, ಗೊಲ್ಲನಲ್ಲಿ ಸಾಹಿತ್ಯ ವಿದ್ಯೆಯನ್ನೂ, ಅಳಿಯನಲ್ಲಿ ಒಳ್ಳೆಯತನವನ್ನೂ ನೋಡಲಾಗುವುದಿಲ್ಲ.

9. ಮೂಲ : ಆಕೊನ್ನ ಕೂಡೆಯಮೃತಮು
ತಾ ಗೊಂಕಕ ನಿಚ್ಚುವಾಡೆ ಧಾತ ಧರಿತ್ರಿನ್
ಸೋಕೋರ್ಚುವಾಡೆ ಮನುಜುಡು
ತೇಕುವಗಲವಾಡೆ ವಂಶ ತಿಲಕುಡು ಸುಮತೀ

ಅನುವಾದ : ಹಸಿದಾಗ ಅನ್ನ ಅಮೃತವು
ತುಸು ತನಗಿರಿಸದೆ ಕೊಡುವವ ಧಾತನು ಭುವಿಯೊಳ್
ಕಷ್ಟಸಹಿಷ್ಣುವೆ ಮನುಜನು
ಅಸದೃಶ ಸಾಹಸಿಗನೆ ವಂಶ ತಿಲಕನು ಸುಮತೀ

ತಾತ್ಪರ್ಯ : ಚೆನ್ನಾಗಿ ಹಸಿವಾದಾಗ ಊಟ ಮಾಡಿದರೆ ಅದು ರುಚಿಕರವಾಗಿ, ಜೀರ್ಣವಾಗಿ, ರಕ್ತಗತವಾಗಿ ಅಮೃತದಂತಿರುತ್ತದೆ. ದಾನವೀಯುವಾಗ, ತನಗಾಗಿ ಸ್ವಲ್ಪವನ್ನೂ ಇರಿಸಿಕೊಳ್ಳದೆ ದಾನ ಮಾಡುವವನು ಧಾತನೆ ಸರಿ. ಕಷ್ಟ ಪರಂಪರೆಗಳು ಬಂದಾಗ ಅವನ್ನು ಸಹಿಸಿಕೊಳ್ಳುವುದೆ ಮನುಜ ಗುಣವು ಕೆಲಸ ಕಾರ್ಯಗಳಲ್ಲಿ, ವಂಶದ ಹೆಸರನ್ನು ಕಾಪಾಡುವಲ್ಲಿ ಧರ್ಮಪಾಲನೆಯಲ್ಲಿ ಸಾಹಸದಿಂದ ಹೋರಾಡುವವನೇ ವಂಶಕ್ಕೆ ತಿಲಕಪ್ರಾಯನು.

10. ಮೂಲ : ಆಕಲಿಯುಡುಗನಿ ಕುಡುಪುನು
ವೇಕಟಿಯಗು ಲಂಜ ಪಡುಪು ವಿಡುವನಿ ಬ್ರತುಕುನ್
ಬ್ರಾಕೊನ್ನ ನೂತಿ ಯುದಕಮು
ಪೋಕಲ ಪಾಡಿಯುನು ರೋತ ಮೇದಿನಿ ಸುಮತೀ

ಅನುವಾದ : ಹಸಿವನು ನೀಗದ ಅಸನವು
ಬಸಿರು ಗಣಿಕೆ ವ್ಯಭಿಚಾರ ಬಿಡಲೊಲ್ಲದ ಬಾಳ್
ಕಸಟಗುಳಿಯುದಕ ಆಡಿನ
ಮೊಸರಿನ ತಿನಿಸು ಬಹುರೋತೆ ಮಹಿಯೊಳ್ ಸುಮತೀ

ತಾತ್ಪರ್ಯ : ಊಟವನ್ನು ಮಾಡಿದರೂ ಸಹ ಹಸಿವನ್ನು ನೀಗದ ಆ ಊಟ, ಬಸಿರಾದ ಸೂಳೆಯ ಬಾಳು, ವ್ಯಭಿಚಾರವನ್ನು ಬಿಡದೆ ಇರುವವನ ಜೀವಿತ, ಕೊಳೆತು ನಾರುವ ಹೊಂಡದ ನೀರು, ಆಡಿನ ಮೊಸರಲ್ಲಿ ಮಾಡಿದ ತಿನಿಸು ಇವು ಬಹು ಅಸಹ್ಯವಾದವುಗಳು.

**11.** ಮೂಲ : ಇಚ್ಚುನದೆ ವಿದ್ಯ ರಣಮುನ
ಜೊಚ್ಚುನದೇ ಮಗತನಂಬು ಸುಕವೀಶ್ವರುಲನ್
ಮೆಚ್ಚುನದೆ ನೇರ್ಪು ವಾದುಕು
ವಚ್ಚುನದೇ ಕೀಡು ಸುಮ್ಮಿ ವಸುಂದನಂ ಸುಮತೀ

ಅನುವಾದ : ನೀಡುವುದೇ ವಿದ್ಯೆ ರಣದಲಿ
ಪೊಡವುದೆ ಪೌರುಷವದಲ್ತೆ ಸುಕವೀಶ್ವರರಂ
ಕೊಂಡಾಡುವುದೆ ನಿಪುಣತೆಯು
ವಾದಕೆ ತಪ್ಪದದು ಕೀಡು ಧರೆಯೊಳ್ ಸುಮತೀ

ತಾತ್ಪರ್ಯ : ಕಲಿಯುವ ವಿದ್ಯೆಯಿಂದ ಗೌರವ, ಕೀರ್ತಿ, ಹಣ ಇವು ಸಿಗುವಂತಾಗಬೇಕು. ಯುದ್ಧಭೂಮಿಯಲ್ಲಿ ಧೈರ್ಯದಿಂದ ಹೋರಾಡುವುದೇ ಪೌರುಷವು. ಒಳ್ಳೆಯ ಕೃತಿಗಳನ್ನು ಓದಿ ಅರ್ಥ ಮಾಡಿಕೊಂಡು ಆ ಕವಿಗಳನ್ನು ಹೊಗಳುವುದೇ ನಿಪುಣತೆ. ಅದಲ್ಲದೆ ಬರಿ ವಾದಕ್ಕೆ ಇಳಿದರೆ ಅದರಿಂದ ವೈರತ್ವವು ಹಾನಿಯೂ ಉಂಟಾಗುತ್ತವೆ.

**12.** ಮೂಲ : ಇಮ್ಮುಗ ಜದುವನಿ ನೋರುನು
ಅಮ್ಮಾಯನಿ ಪಿಲಿಚಿಯನ್ನ ಮಡುಗನಿ ನೋರುನ್
ದಮ್ಮುಲ ಪಿಲುವನಿ ನೋರುನು
ಗುಮ್ಮರಿ ಮನು ದ್ರವ್ವಿನಟ್ಟಿ ಗುಂಟರ ಸುಮತೀ

ಅನುವಾದ : ಇಷ್ಟದಿ ಓದದ ಬಾಯಿಯು
ಇಷ್ಟದಿ ಅಮ್ಮನ ಅಸನವ ಬೇಡದ ಬಾಯಿಂ
ಇಷ್ಟದಿ ತಮ್ಮನೆನದ ಬಾಯಿ್
ಕಷ್ಟದಿ ಕುಂಬಾರನಗೆದ ಕುಳಿಯಲೊ ಸುಮತೀ

ತಾತ್ಪರ್ಯ : ಓದಬೇಕು ಎಂಬ ಹಂಬಲದಿಂದ ಓದದ ಬಾಯಿ, ಪ್ರೀತಿಯಿಂದ ತಾಯಿಯನ್ನು ಅಮ್ಮಾ ಎಂದು ಕರೆದು ಊಟ ಕೇಳದ ಬಾಯಿ, ಪ್ರೀತಿಯಿಂದ ತಮ್ಮನನ್ನು 'ತಮ್ಮಾ' ಎಂದು ಕರೆಯದ ಬಾಯಿ ಇವು ಕುಂಬಾರನು ಕಷ್ಟಪಟ್ಟು ಮಣ್ಣಿಗಾಗಿ ಅಗೆದ ಗುಳಿ ಇದ್ದ ಹಾಗೆ ವ್ಯರ್ಥ.

13. ಮೂಲ : ಉಡುಮುಂಡದೆ ನೂರೇಂಡ್ಲುನು
ಪಡಿಯುಂಡದೆ ಪೆರ್ಮಿಪಾಮು ಪದಿನೂರೇಂಡ್ಲುನ್
ಮಡುವುನ ಗೊಕ್ಕೆರಯುಂಡದೆ
ಕಡು ನಿಲ ಪುರುಷಾರ್ಥಪರುಡು ಕಾವಲೆ ಸುಮತೀ

ಅನುವಾದ : ಉಡ ಜೀವಿಸದೆ ಶತವರುಷ
ಬದುಕುತ ಬಿದ್ದಿರದೆ ಉರಗ ನೂರಾರು ವರುಷ
ಮಡುವೊಳ್ ಬಕ ತಾನಿಲ್ಲವೆ
ನಡೆಯಲಿ ಪುರುಷಾರ್ಥಪರನು ಎನಿಸೈ ಸುಮತೀ

ತಾತ್ಪರ್ಯ : ಬದುಕಿನಲ್ಲಿ ದೀರ್ಘಾಯುಸ್ಸು ಒಂದೇ ಸಾಲದು. ಬದುಕು ಪುರುಷಾರ್ಥಗಳನ್ನು ಸಾಧಿಸುವಂತಿರಬೇಕು. ಆದಿಲ್ಲದಿದ್ದರೆ, ಉಡ, ಹೆಬ್ಬಾವು, ಬಕ ಇವುಗಳಂತೆ ಶತವರುಷ ಜೀವಿಸಿಯೂ ಪ್ರಯೋಜನವಿಲ್ಲ.

14. ಮೂಲ : ಉತ್ತಮ ಗುಣಮುಲು ನೀಚುನ
ಕೆತ್ತೆರುಗುನ ಗಲುಗ ನೇರ್ಚು ನೆಯ್ಯಡಲಂದಾ
ನೆತ್ತಿಚ್ಚಿ ಕರಗಿ ಪೋಸಿನ
ನಿತ್ತಡಿ ಬಂಗಾರಮಗುನೆ ಯಿಲಲೋ ಸುಮತೀ

ಅನುವಾದ : ಉತ್ತಮ ಗುಣಗಳ ನೀಚನು
ಎಂತಾವ ವಿಧದಿ ತಿಳಿಯುವ ತೂಕ ಸರಿಸಮಂ
ಹಿತ್ತಾಳೆ ಕರಗಿಸಿ ಹುಯ್ದೊಡೆ
ಉತ್ತಮ ಬಂಗಾರವಹುದೆ ಭುವಿಯೊಳ್ ಸುಮತೀ

ತಾತ್ಪರ್ಯ : ನೀಚನಿಗೆ ಉತ್ತಮ ಗುಣಗಳ ಪರಿವೆ ಇರುವುದಿಲ್ಲ. ಅವನು ಇತರರಲ್ಲಿ ಉತ್ತಮ ಗುಣಗಳನ್ನು ಗುರುತಿಸಲು ಅಶಕ್ತ. ಅವನನ್ನು ಉತ್ತಮ ರೀತಿಯಲ್ಲಿ ತಿದ್ದಲು ಆಗುವುದಿಲ್ಲ. ಹೇಗೆಂದರೆ ಬಂಗಾರಕ್ಕೆ ಸರಿತೂಕ ಹಿತ್ತಾಳೆಯನ್ನು ಕರಗಿಸಿ ಹುಯ್ದರೆ ಅದು ಉತ್ತಮ ಬಂಗಾರವಾಗುತ್ತದೆಯೆ ? ಇಲ್ಲ.

15. ಮೂಲ : ಉದಕಮು ದ್ರಾವೆಡು ಹಯಮುನು
ಮದಮುನ ನುಪ್ಪೊಂಗುಚುಂಡು ಮತ್ತೇಭಂಬುನ್
ಮೊದವು ಕಡನುನ್ನ ವೃಷಭಮು
ಚೆದುವನಿ ಯಾ ನೀಚು ಕಡಕು ಚನಕುರ ಸುಮತೀ

ಅನುವಾದ : ಉದಕವ ಕುಡಿಯುವ ಕುದುರೆಯು
ಮದದಿಂದ ಕೊಬ್ಬಿ ಕೆರಳಿದ ಕಾಡಿನ ಆನೆಯು
ಬೆದೆಹಸು ಸನಿಹದ ಗೂಳಿಯು
ಓದದ ಕಡು ನೀಚನ ಬಳಿ ಸಾರದೆ ಸುಮತೀ

ತಾತ್ಪರ್ಯ : ನೀರನ್ನು ಕುಡಿಯುತ್ತಿರುವ ಕುದುರೆಯ ಸನಿಹವೂ, ಮದದಿಂದ ಕೆರಳಿದ ಕಾಡಾನೆಯ ಹತ್ತಿರವೂ, ಬೆದೆಗೆ ಬಂದ ಹಸುವಿನ ಸನಿಹದ ಗೂಳಿಯ ಹತ್ತಿರವೂ ಹೋಗುವುದು ಅಪಾಯಕರ. ಅಂತೆಯೇ ಓದದ ನೀಚನ ಹತ್ತಿರ ಹೋಗುವುದು ಸಹ ಅಪಾಯಕರ.

16. ಮೂಲ : ಉಪಕಾರಿಕಿನುಪಕಾರಮು
ವಿಪರೀತಮುಕಾದುಸೇಯ ವಿವರಿಂಪಂಗಾ
ನಪಕಾರಿಕಿನುಪಕಾರಮು
ನೆಪವೆನ್ನಕ ಸೇಯುವಾಡು ನೇರ್ಪರಿ ಸುಮತೀ

ಅನುವಾದ : ಉಪಕಾರಿಗೆ ಉಪಕಾರವ
ಒಪ್ಪಿ ಎಸಗಲು ಪಿರಿದಲ್ಲ ವಿವರದಿ ಗಣಿಸಲ್
ಅಪಕಾರಿಗೆ ಉಪಕಾರವ
ನೆಪವನು ಎಣಿಸದೆ ಎಸಗಲು ನಿಪುಣನು ಸುಮತೀ

ತಾತ್ಪರ್ಯ : ತಮಗೆ ಉಪಕಾರ ಮಾಡಿದ ವ್ಯಕ್ತಿಗೆ, ಮರು ಉಪಕಾರ ಮಾಡುವುದು ಹೆಚ್ಚಿನದಲ್ಲ. ವಿಮರ್ಶೆ ಮಾಡಿ ನೋಡಿದಾಗ, ಅಪಕಾರ ಮಾಡಿದವನಿಗೆ, ತನಗೆ ಹಿಂದೆ ಆದ ಅಪಕಾರವನ್ನು ನೆಪ ಮಾಡದೆ ಉಪಕಾರ ಮಾಡುವವನೇ ಜಾಣನು.

17. ಮೂಲ : ಉಪಮಿಂಪ ಮೊದಲು ತಿಯ್ಯನ
ಕಪಟಂ ಚೆಡನೆಡನು ಚೆರುಕು ಕೈವಡಿ ನೇ ಪೋ
ನೆಪಮುಲು ವೆದಕುನು ಗಡಪಟ
ಕಪಟಿಪು ದುರ್ಜಾತಿಪೊಂದು ಗದರಾ ಸುಮತೀ

ಅನುವಾದ : ಪರಿಕಿಸೆ ಮೊದಲಲಿ ಸಿಹಿಯದು
ಪರ್ವದಲಿ ಕಪಟವು ಕಬ್ಬು ಜಲ್ಲೆಯ ತೆರನದು
ಸರಿತಪ್ಪುಗಳನು ಹುಡುಕುವ
ದುರ್ಜಾತಿ ಕಪಟಿಯ ಸಂಗ ತಿಳಿಯೈ ಸುಮತೀ

ತಾತ್ಪರ್ಯ : ಕಬ್ಬಿನ ಜಲ್ಲೆಯು ಮೂಲದಲ್ಲಿ ಬಹಳ ಸಿಹಿಯಾಗಿರುತ್ತದೆ. ಗೆಣ್ಣುಗಳಲ್ಲಿ ಸಿಹಿ ಕಡಿಮೆ. ಜಲ್ಲೆಯ ಕೊನೆಯ ಭಾಗ ಬಹಳ ಸಪ್ಪೆಯಾಗಿರುತ್ತದೆ. ಇದೇ ರೀತಿ ದುರ್ಜನ ಸಂಘವು ಮೊದ ಮೊದಲು ಇಂಪಾಗಿ ಕಂಡರೂ ಕೊನೆಗೆ ತಪ್ಪುಗಳನ್ನು ಹುಡುಕಿ ಬೇಸರವನ್ನು, ತೊಂದರೆಯನ್ನೂ ಉಂಟುಮಾಡುತ್ತಾರೆ. ಕಾರಣ ಕೆಟ್ಟವರ ಸಂಗ ಒಳ್ಳೆಯದಲ್ಲ.

18. ಮೂಲ : ಎಪ್ಪಟಿಕೆಯ್ಯದಿ ಪ್ರಸ್ತುತ
ಮಪ್ಪಟಿ ಕಾಮಾಟಲಾಡಿ ಯನ್ಯುಲ ಮನಮುಲ್
ನೊಪ್ಪಿಂಪಕದಾನೊವ್ವಕ
ತಪ್ಪಿಂಚುಕ ತಿರುಗುವಾಡು ಧನ್ಯುಡು ಸುಮತೀ

ಅನುವಾದ : ಎಂದಿಗೆ ಯಾವುದು ಪ್ರಸ್ತುತ
ಅಂದಿಗೆ ಆ ಮಾತನಾಡಿ ಅನ್ಯರ ಮನವಂ
ಕುಂದಿಸದೆಲೆ ತಾ ಕುಂದದೆ
ನಿಂದೆಗೊಳದೆ ತಿರುಗುವವನು ಧನ್ಯನು ಸುಮತೀ

ತಾತ್ಪರ್ಯ : ಯಾವ ಸಂದರ್ಭಕ್ಕೆ ಯಾವ ಮಾತು ಉಚಿತವೋ ಆ ಮಾತುಗಳನ್ನಾಡಿ, ಇತರರ ಮನಸ್ಸನ್ನು ನೋಯಿಸದೆ ಎಚ್ಚರವಾಗಿ ಇರಬೇಕು. ಇತರರ ಮನಸ್ಸು ನೊಂದರೆ ತಮ್ಮ ಮನಸ್ಸಿಗೂ ನೋವುಂಟಾಗುತ್ತದೆ. ಹೀಗೆ ಇತರರ ಮನವನ್ನು ನೋಯಿಸದೆ ತಾನೂ ನೋಯದೆ ನಿಂದೆಯಿಂದ ತಪ್ಪಿಸಿಕೊಂಡು ತಿರುಗುವವನು ಧನ್ಯನು.

19. ಮೂಲ : ಏಪ್ಪುಡು ತಪ್ಪುಲು ವೆದುಕೆಡು
ನಪ್ಪುರುಷುನಿ ಗೊಲ್ವಗೂಡ ದದಿ ಎಟ್ಲನ್ನನ್
ಸರ್ಪಂಬು ಪಡಗ ನೀಡನು
ಗಪ್ಪ ವಸಿಂಚಿನ ವಿಧಂಬು ಗದರಾ ಸುಮತೀ

ಅನುವಾದ : ತಪ್ಪುಗಳ ಸದಾ ಹುಡುಕುವ
ತತ್ಪುರುಷನ ಸೇವೆ ಸಲ್ಲ ಅದು ಎಂತೆಂದೊಡೆ
ಸರ್ಪನ ಹೆಡೆಯಾ ನೆರಳಲಿ
ಕಪ್ಪೆಯು ನಿವಸಿಸುವ ರೀತಿ ಕಂಡೆಯ ಸುಮತೀ

ತಾತ್ಪರ್ಯ : ಕೆಲವರು ತಮ್ಮ ಸೇವಕರಲ್ಲಿ ಸದಾ ತಪ್ಪುಗಳನ್ನು ಹುಡುಕುತ್ತಿರುತ್ತಾರೆ. ಅಂತಹವರ ಸೇವೆಯಲ್ಲಿ ಇರಬಾರದು. ಹೇಗೆಂದರೆ, ಹಾವಿನ ಹೆಡೆಯ ನೆರಳಲ್ಲಿ ಕಪ್ಪೆಯು ವಾಸ ಮಾಡುವಂತೆ, ಯಾವ ಸಮಯದಲ್ಲಿ ಯಾವ ತೊಂದರೆ ಬರುತ್ತದೆಯೋ ಹೇಳುವಂತಿಲ್ಲ.

20. ಮೂಲ : ಎಪ್ಪುಡು ಸಂಪದ ಗಲಿಗಿನ
ನಪ್ಪುಡು ಬಂಧುವುಲು ವತ್ತುರದಿ ಯೆಟ್ಲನ್ನನ್
ದೆಪ್ಪಲುಗ ಚೆರುವು ನಿಂಡಿನ
ಕಪ್ಪಲು ಪದಿವೇಲು ಚೇರುಗದರಾ ಸುಮತೀ

ಅನುವಾದ : ಸಂಪದ ತಾ ಕೈಸೇರಲು
ಇಂಪಾಗಿ ಬರುವರು ಬಂಧು ಜನ ಎಂತೆಂದೊಡೆ
ಸೊಂಪಾಗಿ ಕೆರೆಯು ತುಂಬಲು
ಕಪ್ಪೆ ದಶ ಸಾವಿರ ಬಂದು ಕೂರವೆ ಸುಮತೀ

ತಾತ್ಪರ್ಯ : ಸಂಪತ್ತು ಇರುವ ಕಾಲದಲ್ಲಿ ಬಂಧುಗಳು ಬಂದು ತಿಂದು ತೇಗಿ ಹೋಗುತ್ತಾರೆ. ಸಂಪತ್ತು ಕರಗಿಹೋದರೆ ಯಾರೂ ಹತ್ತಿರ ಬರುವುದಿಲ್ಲ. ಅದು ಹೇಗೆಂದರೆ ವರ್ಷ ಕಾಲದಲ್ಲಿ ಕೆರೆಯು ನೀರಿನಿಂದ ತುಂಬಿರಲು ಕಪ್ಪೆಗಳು ಸಾವಿರಾರು ಬಂದು ಸೇರುತ್ತವೆ. ಕೆರೆ ಒಣಗಿದರೆ ಅಲ್ಲಿಂದ ಅವು ಪಲಾಯನ ಮಾಡುತ್ತವೆ.

ಮೂಲ : ವಿರಕುಮೀ ಕಸುಕಾಯಲು
ದೂರಕುಮೀ ಬಂಧು ಜನುಲ ದೋಷಮು ಸುಮ್ಮೀ
ಪಾರಕುಮೀ ರಣಮಂದುನ
ಮೀರಕುಮೀ ಗುರುವುಲಾಜ್ಞ ಮೇದಿನಿ ಸುಮತೀ

ನುವಾದ : ಪೆರುಕದಿರ್ಕೈ ಕಸುಕಾಯ್ಗಳ
ದೂರದಿರ್ಕೈ ಬಂಧು ಜನರ ದೋಷವ್ವ ತಿಳಿಯ್ಕೈ
ಪಾರದಿರ್ಕೈ ರಣರಂಗದಿ
ಮೀರದಿರ್ಕೈ ಗುರುಗಳಾಜ್ಞೆ ಮೇದಿನಿ ಸುಮತೀ

ತ್ಪರ್ಯ : ಹೀಚು ಕಾಯಿಗಳನ್ನು ಕೀಳಬಾರದು. ಅವು ತಿನ್ನಲು ಯೋಗ್ಯವಲ್ಲ. ಬಂಧು ಜನರನ್ನು ದೂಷಿಸಬಾರದು. ಅದರಿಂದ ದೋಷ ಉಂಟಾಗುತ್ತದೆ. ರಣರಂಗದಿಂದ ಓಡಿಹೋಗಬಾರದು. ಗುರುಗಳ ಆಜ್ಞೆಯನ್ನು ಅತಿಕ್ರಮಿಸಬಾರದು.

ಮೂಲ : ಒಕಯೂರಿಕಿ ನೊಕ ಕರಣಮು
ನೊಕತೀರ್ಪರಿಯೈನಗಾಕ ನೊಗಿದರ ಚೈನನ್
ಕಕವಿಕಲುಗಾಕಯುಂಡುನೆ
ಸಕಲಂಬುನು ಗೊಟ್ಟುವಡಕ ಸಹಜಮು ಸುಮತೀ

ನುವಾದ : ಒಬ್ಬನೆ ಕರಣಿಕ ಊರಿಗೆ
ಒಬ್ಬ ನ್ಯಾಯಾಧಿಪತಿಯು ಅದಕುಂ ಹೆಚ್ಚಲ್
ತಬ್ಬಿಬ್ಬಾಗುವುದು ಕೆಲಸ
ಗಬ್ಬೆದ್ದು ಸಕಲವು ಕೆಡುಗು ಸಹಜವು ಸುಮತೀ

ತ್ಪರ್ಯ : ಒಂದು ಊರಿಗೆ ಒಬ್ಬನೇ ಗ್ರಾಮಲೆಕ್ಕಿಗನಿರಬೇಕು. ಒಬ್ಬ ನ್ಯಾಯಾಧೀಶನಿರಬೇಕು. ಆಗ ಕೆಲಸ ಕಾರ್ಯಗಳು ಸುಗಮವಾಗಿ ನಡೆಯುತ್ತವೆ. ಹಾಗಲ್ಲದೆ ಇಬ್ಬಿಬ್ಬರು ನೇಮಕಗೊಂಡರೆ ಅವರಲ್ಲಿ ಸಾಮರಸ್ಯವಿಲ್ಲದೆ ಕೆಲಸ ಕಾರ್ಯಗಳು ಕೆಟ್ಟುಹೋಗುತ್ತವೆ. ಎಲ್ಲವೂ ಅಸ್ತವ್ಯಸ್ತ ವಾಗಿ ಹೋಗುತ್ತದೆ.

23. ಮೂಲ : ఒల్లని సతినొల్లని పతి
నొల్లని చెలికాని విడువ నొల్లనివాడే
గొల్లండుగాక ధరలో
గొల్లండును గొల్లడౌనె గుణమున సుమతీ

ಅನುವಾದ : ಒಲ್ಲದ ಸತಿಯೊಲ್ಲದ ಪತಿ
ಒಲ್ಲದ ಗೆಳೆಯನನು ಬಿಡಲು ಒಲ್ಲದ ಮನುಜನು
ಗೊಲ್ಲನವನೆ ತಿಳಿ ಭುವಿಯೊಳ್
ಗೊಲ್ಲನು ಗೊಲ್ಲನವನೆಂತು ಗುಣವಿರೆ ಸುಮತೀ

ತಾತ್ಪರ್ಯ : ಪ್ರೀತಿ ಇಲ್ಲದ ಹೆಂಡತಿಯನ್ನು ಪ್ರೀತಿಯಿಂದ ಕಾಣದ ಯಜಮಾನನನ್ನು, ಅನುರಾಗವಿಲ್ಲದ ಗೆಳೆಯನನ್ನು ಬಿಡಲು ಒಪ್ಪದವನೇ ಗೊಲ್ಲನು. ಅವನು ತಿಳಿವಳಿಕೆ ಇಲ್ಲದವನು. ಗೊಲ್ಲನಲಿ ಗುಣವಿರಲು ಅವನು ಗೊಲ್ಲನೆಂತಾಗುವನು ?

24. ಮೂಲ : ఓడలు బండ్లను వచ్చును
ఓడలు నా బండ్లమీద నొప్పుగ వచ్చున్
ఓడలు బండ్లునువలెనే
వాడంబడు కలిమి లేమి వసుధను సుమతీ

ಅನುವಾದ : ಹಡಗಲಿ ಶಕಟವು ಬರುವುದು
ಪಡಗಾ ಶಕಟಗಳ ಮೇಲೆ ಚಂದದಿ ಬರುವುದು
ಹಡಗೂ ಶಕಟಗಳಂತೆಯೆ
ಬಡತನ ಸಿರಿತನ ಬರುವುವು ಧರೆಯಲಿ ಸುಮತೀ

ತಾತ್ಪರ್ಯ : ಹಡಗುಗಳ ಮೇಲೆ ಬಂಡಿಗಳನ್ನು ಹೇರಿಕೊಂಡು ಬರುತ್ತಾರೆ. ಕೆಲವೊಮ್ಮೆ ಹಡಗುಗಳನ್ನು ಬಂಡಿಗಳ ಮೇಲೆ ಸಾಗಿಸುತ್ತಾರೆ. ಹೀಗೆ ಹಡಗು ಬಂಡಿಗಳಂತೆ ಸಿರಿತನ ಬಡತನ ಒಂದರ ಮೇಲೆ ಒಂದರಂತೆ ಬರುತ್ತಿರುತ್ತವೆ.

25. ಮೂಲ : ಕಡು ಬಲವಂತುಂಡೈನನು
ಬುಡಮಿನಿ ಬ್ರಾಯಂಬುಟಾಲಿ ಬುಟ್ಟಿನ ಇಂಟನ್
ದಡವುಂಡನಿಚ್ಚೆನೇನಿಯು
ಬಡುಪುಗ ನಂಗಡಿಕಿ ದಾನೆ ಪಂಪುಟ ಸುಮತೀ

ಅನುವಾದ : ಕಡು ಬಲವಂತನೆ ಆದರು
ಹೆಂಡತಿಯನು ಯೌವ್ವನದೊಳು ಬಹುದಿನ ತವರಿನಲಿ
ತಡವಾಗಿ ಇರಲು ಬಿಟ್ಟರೆ
ಹಾದರಕೆ ತಾನೆ ಕಳುಹುವ ತೆರನದು ಸುಮತೀ

ತಾತ್ಪರ್ಯ : ಹೆಂಡತಿಯನ್ನು ತವರಿನಲ್ಲಿ ಹೆಚ್ಚು ಕಾಲ ಬಿಡಬಾರದು. ಗಂಡನೇ ಹೆಂಡತಿಗೆ ತವರಿನಲ್ಲಿ ಬಹುಕಾಲ ಉಳಿಯಲು ಬಿಟ್ಟರೆ, ಅವನು ಎಷ್ಟೇ ಬಲಶಾಲಿಯಾದರೂ, ತಾನೇ ಅವಳನ್ನು ಹಾದರಕ್ಕೆ ಕಳುಹಿಸಿದಂತಾಗುತ್ತದೆ.

26. ಮೂಲ : ಕನಕಪು ಸಿಂಹಾಸನಮುನ
ಶುನಕಮು ಕೂರ್ಚುಂಡಬೆಟ್ಟಿ ಶುಭಲಗ್ನಮುನನ್
ದೊನರಗ ಬಟ್ಟಮು ಗಟ್ಟಿನ
ವೆನುಕಟಿ ಗುಣಮೇಲ ಮಾನು ವಿನುರಾ ಸುಮತೀ

ಅನುವಾದ : ಕನಕದ ಸಿಂಹಾಸನದೊಳ್
ಶುನಕವ ಕರೆತಂದು ಕುಳಿಸಿ ಶುಭಲಗ್ನದೊಳುಂ
ಘನದಿಂ ಪಟ್ಟವ ಕಟ್ಟಲು
ತನ್ನ ಹಿಂದಿನ ಗುಣವದೇಕೆ ತೊರೆವುದು ಸುಮತೀ

ತಾತ್ಪರ್ಯ : ನಾಯಿಯನ್ನು ಕರೆತಂದು ಬಂಗಾರದ ಸಿಂಹಾಸನದಲ್ಲಿ ಕೂರಿಸಿ ಶುಭಲಗ್ನದಲ್ಲಿ ಶಾಸ್ತ್ರೋಕ್ತವಾಗಿ ಅದಕ್ಕೆ ಪಟ್ಟವನ್ನು ಕಟ್ಟಿದರೆ, ಅದು ತನ್ನ ಹಿಂದಿನ ಗುಣವನ್ನು ಬಿಡುತ್ತದೆಯೇ ? ಅದೇ ರೀತಿ ದುರ್ಜನರಿಗೆ ಅಧಿಕಾರ ಕೊಟ್ಟರೆ ಅವರು ದುರ್ಗುಣಗಳನ್ನು ಬಿಡುವುದಿಲ್ಲ.

27. ಮೂಲ : ಕಪ್ಪಕು ನೊರಗಾಲೈನನು
ಸರ್ಪ ಮುನುಕು ರೋಗಮ್ಮೆನ ಸತಿ ತುಲು ವೈನನ್
ಮುಪ್ಪುನ ದರಿದ್ರುಡೈನನು
ತಪ್ಪದು ಮರಿ ದುಃಖ ಮುಗುಟ ತಥ್ಯಮು ಸುಮತೀ

ಅನುವಾದ : ಕಪ್ಪೆಗೆ ಕಾಲ್ ಕುಂಟಾಗಲು
ಸರ್ಪಕೆ ಬೇನೆಯು ತಗಲಲು ಸತಿ ಕುಲಟೆಯಾಗೆ
ಮುಪ್ಪಿನಲಿ ಬಡತನ ಬರಲು
ತಪ್ಪದೆ ದುಃಖವು ಬರುವುದು ಸತ್ಯವೊ ಸುಮತೀ

ತಾತ್ಪರ್ಯ : ಕಪ್ಪೆಗೆ ಕಾಲು ಮುರಿಯುವುದು, ಸರ್ಪಕೆ ಖಾಯಿಲೆ ಬರುವುದು, ಹೆಂಡತಿ ಜಾರಿಣಿ ಆಗುವುದು, ಮುಪ್ಪಿನಲ್ಲಿ ಬಡತನ ಬರುವುದು, ಇವೆಲ್ಲವೂ ದುಃಖಕ್ಕೆ ಕಾರಣಗಳು. ದುಃಖವು ತಪ್ಪಿದ್ದಲ್ಲ.

28. ಮೂಲ : ಕಮಲಮುಲು ನೀಟಬಾಸಿನ
ಕಮಲಾಪ್ತುನಿ ರಶ್ಮಿ ಸೋಕಿ ಕಮಲಿನ ಭಂಗಿನ್
ದಮ ತಮ ನೆಲವುಲು ದಪ್ಪಿನ
ದಮ ಮಿತ್ರುಲೆ ಶತ್ರುಲೌಟ ತಥ್ಯಮು ಸುಮತೀ

ಅನುವಾದ : ಕಮಲವ ಜಲದಿಂ ತೊಲಗಿಸೆ
ಕಮಲಾಪ್ತನ ರಶ್ಮಿ ತಾಕಿ ಕನಲುವ ತೆರದೊಳ್
ತಮ್ಮಯ ನೆಲೆಗಳು ತಪ್ಪಲು
ತಮ್ಮಯ ಮಿತ್ರರೆ ಶತೃಗಳು ತಥ್ಯವೊ ಸುಮತೀ

ತಾತ್ಪರ್ಯ : ಸದಾ ನೀರಿನಲ್ಲಿರುವ ಕಮಲ ಸೂರ್ಯ ರಶ್ಮಿಯಿಂದ ಅರಳುತ್ತದೆ. ಕಮಲವನ್ನು ನೀರಿನಿಂದ ಆಚೆ ತೆಗೆಯಲು, ಅದೇ ಸೂರ್ಯ ರಶ್ಮಿಯಿಂದ ಬಾಡಿ ಹೋಗುತ್ತದೆ. ಅದೇ ರೀತಿಯಾಗಿ ತಮ್ಮಯ ಸ್ಥಾನಮಾನಗಳು ತಪ್ಪಿಹೋದರೆ ತಮ್ಮ ಮಿತ್ರರೇ ಶತ್ರುಗಳಾಗುತ್ತಾರೆ.

29. ಮೂಲ : ಕರಣಮು ಗರಣಮು ನಮ್ಮಿನ
ಮರಣಾಂತಕ ಮೌನುಗಾನಿ ಮನಲೇದು ಸುಮ್ಮಿ
ಕರಣಮು ತನ ಸರಿ ಕರಣಮು
ಮರಿ ನಮ್ಮಿಕ ಮರ್ಮ ಮೀಕ ಮನವಲೆ ಸುಮತೀ

ಅನುವಾದ : ಕರಣಿಕ ಕರಣಿಕ ನಂಬಲು
ಮರಣಾಂತಕವು ಅದರಿಂದ ನೆಮ್ಮದಿ ಇರದೈ
ಕರಣಿಕ ಸರಿ ಕರಣಿಕನಿಗೆ
ಒರಿ ನಂಬದೆ ಮರ್ಮ ಬಿಡದೆ ಬಾಳಲಿ ಸುಮತೀ

ತಾತ್ಪರ್ಯ : ಒಬ್ಬ ಗ್ರಾಮಲೆಕ್ಕಿಗನು ಮತ್ತೊಬ್ಬ ಗ್ರಾಮ ಲೆಕ್ಕಿಗನನ್ನು ನಂಬಿ ತನ್ನ ಸಮಸ್ಯೆಗಳನ್ನು ಅವನಿಗೆ ತಿಳಿಸಿದರೆ ಅದು ಪ್ರಾಣಕ್ಕೆ ಅಪಾಯ ತರುತ್ತದೆ. ಗ್ರಾ ಮ ಲೆ ಕ್ಕಿ ಗ ನು ಮತ್ತೊಬ್ಬ ಗ್ರಾಮಲೆಕ್ಕಿಗನಿಗೆ ತನ್ನ ಮರ್ಮವನ್ನು ತಿಳಿಸದೆ ಬಾಳಬೇಕು.

30. ಮೂಲ : ಕರಣಮುಲ ನನುಸರಿಂಪಕ
ವಿರಸಂಬುನ ದಿನ್ನ ತಿಂಡಿ ವಿಕಟಿಂಚು ಜುಮೀ
ಇರಸುನ ಗಂದೆನ ಬೆಟ್ಟಕ
ಪರಮೇಶುನಿ ಬಂಡಿಯೈನ ಬಾರದು ಸುಮತೀ

ಅನುವಾದ : ಕರಣಿಕನನು ಅನುಸರಿಸದೆ
ವಿರಹದೊಳು ಭುಜಿಸಿದ ಅನ್ನ ವಿಕಟಿಸುವುದದುಂ
ಇರಸಿಗೆ ಎಣ್ಣೆ ಬಳಿಯದಿರೆ
ಪರಮೇಶ್ವರ ರಥವೆ ಇರಲು ಸರಿಯದು ಸುಮತೀ

ತಾತ್ಪರ್ಯ : ಊರಿನಲ್ಲಿ ಗ್ರಾಮಲೆಕ್ಕಿಗನ ವೈರತ್ವ ಕೂಡದು. ಅವನ ವೈರತ್ವ ಸಾಧಿಸಿ ಊರಿನಲ್ಲಿ ನೆಮ್ಮದಿಯಿಂದ ಬಾಳುವಂತಿಲ್ಲ. ತಿಂದ ಅನ್ನವೂ ಸಹ ಸರಿಯಾಗಿ ಜೀರ್ಣವಾಗುವುದಿಲ್ಲ. ಚಕ್ರದ ಕೀಲಿಗೆ ಎಣ್ಣೆ ಬಳಿಯದಿದ್ದರೆ ಪರಮೇಶ್ವರನ ರಥವೇ ಆಗಲಿ ಮುಂದಕ್ಕೆ ಹೋಗುವುದಿಲ್ಲ. ಆದ್ದರಿಂದ ಲೆಕ್ಕಿಗನನ್ನು ಅನುಸರಿಸಿಕೊಂಡು ಹೋಗಬೇಕು.

31. ಮೂಲ : ಕರಣಮು ಸಾದೈಯುನ್ನನು
ಗರಿಮದ ಮುಡುಗಿನನು ಬಾಮು ಕರವಕ ಯುನ್ನನ್
ಧರ ದೇಲು ಮೀಟಕುನ್ನನು
ಗರ ಮರುದುಗ ಲೆಕ್ಕಗೊನರು ಗದರಾ ಸುಮತೀ

ಅನುವಾದ : ಕರಣಿಕ ಸಾದುವೆ ಆಗಲು
ಕರಿಗೆ ಮದ ಉಡುಗಲು ಹಾವು ಕಡಿಯದೆ ಇರಲುಂ
ಧರೆಯೋಳ್ ಚೇಳು ಕುಟುಕದಿರೆ
ಅರುಗಾಗದೆ ಅಚ್ಚರಿಯೊಳು ಗಣಿಸರು ಸುಮತೀ

ತಾತ್ಪರ್ಯ : ಗ್ರಾಮಲೆಕ್ಕಿಗನು ಸಾದುವಾಗಿದ್ದರೆ ಅವನನ್ನು ಊರ ಜನರು ದುರುಪಯೋಗಪಡಿಸಿಕೊಳ್ಳುತ್ತಾರೆ. ತೊಂದರೆಯನ್ನೂ ಕೊಡುತ್ತಾರೆ. ಆನೆಗೆ ಮದ ಉಡುಗಿ ಹೋದರೆ, ಹಾವು ಕಡಿಯದೆ ಇದ್ದರೆ, ಚೇಳು ಕುಟುಕದೆ ಸುಮ್ಮನಿದ್ದರೆ ಅವುಗಳಿಗೆ ಯಾರೂ ಭಯಪಡುವುದಿಲ್ಲ. ಭಯಪಡುವುದಂತಿರಲಿ ಅವುಗಳಿಂದ ದೂರ ಸರಿದು ಹೋಗುವುದಿಲ್ಲ.

32. ಮೂಲ : ಕಸುಗಾಯ ಗರಚಿ ಚೂಚಿನ
ಮಸಲಕ ತನ ಯೊಗರು ಗಾಕ ಮಧುರಂಬಗುನಾ ?
ಪಸಗಲುಗು ಯುವತುಲುಂಡಗ
ಪಸಿಬಾಲಲ ಪೊಂದುವಾಡು ಪಶುವುರ ಸುಮತೀ

ಅನುವಾದ : ಕಸುಕಾಯ ಕಡಿದು ನೋಡಲು
ಕಸುಕದೆ ತನ್ನಒಗರಿಂದ ಮಧುರ ಮೆನಿಪುದೇ
ರಸಭರಿತ ಯುವತಿಯರಿರಲು
ಹಸುಳೆಗಳ ಹೊಂದುವವ ಪಶು ಅಲ್ಲವೆ ಸುಮತೀ

ತಾತ್ಪರ್ಯ : ಹೀಚು ಕಾಯಿಗಳನ್ನು ಕಚ್ಚಿದರೆ ಅವು ಒಗರಿಂದ ಕೂಡಿರುತ್ತದೆ. ಹಣ್ಣುಗಳಂತೆ ಮಧುರವಾದ ರುಚಿಯಿರುವುದಿಲ್ಲ. ಯೌವನಕ್ಕೆ ಬಂದ ಅನೇಕ ಯುವತಿಯರಿರಲು, ಹಸುಳೆಗಳನ್ನು ಹೊಂದುವವ ಹೀಚುಕಾಯಿಗಳನ್ನು ತಿನ್ನುವ ಹಾಗೆ ಮೂರ್ಖನು.

33. ಮೂಲ : ಕವಿಗಾನಿವಾನಿ ವ್ರಾತಯು
ನವರಸಭಾವಮುಲುಲೇನಿ ನಾತುಲ ವಲಪುನ್
ದವಿಲಿಚನು ಪಂದಿನೇಯುನಿ
ವಿವಿಧಾಯುಧ ಕೌಶಲಂಬು ವ್ಯಥರಾ ಸುಮತೀ

ಅನುವಾದ : ಕವಿಯಲ್ಲದವನ ಬರಹವು
ನವರಸಭಾವಗಳಿಲ್ಲದ ಸತಿಯು ಸರಸವುಂ
ತವಿಸದಿರೆ ಇದಿರು ಹಂದಿಯು
ನು ವಿಧವಿಧ ಅಸ್ತ್ರ ಕುಶಲತೆ ವ್ಯೆಥವ್ಯೆ ಸುಮತೀ

ತಾತ್ಪರ್ಯ : ಕವಿತ್ವ ಪಾಂಡಿತ್ಯವಿಲ್ಲದೆ ಬರೆಯುವ ಬರಹಗಳು ನಿರರ್ಥಕ. ನವರಸಭಾವಗಳಿಲ್ಲದ ಸತಿಯು ಸಲ್ಲಾಪ ವ್ಯರ್ಥ. ವಿಧವಿಧ ಅಸ್ತ್ರಶಸ್ತ್ರ ಕುಶಲತೆ ಇದ್ದಾಗ್ಯೂ ಇದಿರಿನಲ್ಲಿ ಬಂದ ಹಂದಿಯನ್ನು ಕೊಲ್ಲದಿದ್ದರೆ ಆ ವಿದ್ಯೆ ವ್ಯರ್ಥ. ಆದುದರಿಂದ ಸಮಯಕ್ಕೆ ತಕ್ಕಂತೆ, ಧೈರ್ಯದಿಂದ ಬುದ್ಧಿಕುಶಲತೆಯಿಂದ ವರ್ತಿಸದೆ ಹೋದರೆ ಮಾಡುವ ಕೆಲಸ ವ್ಯರ್ಥ.

34. ಮೂಲ : ಕಾದು ಸುಮೀ ದುಸ್ಸಂಗತಿ
ಪೋದು ಸುಮೀ ಕೀರ್ತಿಕಾಂತ ಪೊಂದಿನ ಪಿದಪನ್
ವಾದು ಸುಮೀ ಯಪ್ಪಿಚ್ಚುಟ
ಲೇದು ಸುಮೀ ಸತುಲ ವಲಪು ಲೇಶಮು ಸುಮತೀ

ಅನುವಾದ : ತರವಲ್ಲವು ದುಸ್ಸಂಗತಿ
ತೊರೆಯದಿಹಳು ಕೀರ್ತಿಕಾಂತೆ ಪಡೆದಾ ನಂತರ
ವಿರಸವು ಸಾಲವ ನೀಡಲು
ಬರಿದೈ ಕಾಂತೆಯರ ಒಲವು ತಿಳಿಯೈ ಸುಮತೀ

ತಾತ್ಪರ್ಯ : ಕೆಟ್ಟವರ ಸಹವಾಸ ಒಳ್ಳೆಯದಲ್ಲ. ಒಂದು ಸಲ ಕೀರ್ತಿಯನ್ನು ಹೊಂದಿದ ನಂತರ ಅದು ಬಿಟ್ಟು ಹೋಗುವುದಿಲ್ಲ. ಸಾಲವನ್ನು ಕೊಟ್ಟರೆ ಮುಂದೆ ವಿರಸಕ್ಕೆ ಕಾರಣ. ಅದೇ ರೀತಿ ವನಿತೆಯರು ನಿಜವಾಗಿ ಪ್ರೀತಿಸುತ್ತಾರೆ ಎಂದು ನಂಬಬಾರದು.

35. ಮೂಲ : ಕಾಮುಕುಡು ತನಿಸಿ ವಿಡಚಿನ
ಕೋಮಲಿ ಪರವಿಟುಡು ಕವಯ ಗೋರುಟಯೆಲ್ಲನ್
ಪ್ರೇಮಮುನ ಜೆರುಕು ಪಿಪ್ಪಿಕಿ
ಚೀಮಲು ವೆಸಮೂಗಿನಟ್ಲು ಸಿದ್ಧಮು ಸುಮತೀ

ಅನುವಾದ : ಕಾಮುಕ ತಾರಮಿಸಿ ತೊರೆದ
ಕೋಮಲಿಯು ಪರವಿಟರಮಿಸೆ ಬಯಸುವುದೆಲ್ಲವು
ಪ್ರೇಮದಿ ಕಬ್ಬಿನ ಸಿಪ್ಪೆಗೆ
ನಿಮಿಷದಿ ಇರುವೆಯು ಮುಸುಕುವ ತೆರನದು ಸುಮತೀ

ತಾತ್ಪರ್ಯ : ಒಬ್ಬ ವಿಟನು ಅನುಭವಿಸಿದ ಹೆಂಗಸನ್ನು ಮತ್ತೊಬ್ಬ ವಿಟನು ಬಹು ಆಸೆಯಿಂದ ರಮಿಸಲು ಬಯಸುವ ರೀತಿ ಕಬ್ಬಿನ ಸಿಪ್ಪೆಗೆ ಇರುವೆಗಳು ಬಹು ಪ್ರೀತಿಯಿಂದ ಮುತ್ತುವಂತೆ ಸಾರವಿಲ್ಲದ ವಸ್ತುವಿಗೆ ಆಸೆ ಪಟ್ಟಂತೆ ಆಗುತ್ತದೆ.

36. ಮೂಲ : ಕಾರಣಮು ಲೇನಿ ನಗವುನು
ಚೀರಣಮು ಲೇನಿ ಲೇಮ ಪೃಥವೀ ಸ್ಥಲಿಲೋ
ಬೂರಣಮು ಲೇನಿ ಬೂರೆಯು
ವೀರಣಮುಲು ಲೇನಿ ಪೆಂಡ್ಲಿ ವೃಥರಾ ಸುಮತೀ

ಅನುವಾದ : ಕಾರಣವಿಲ್ಲದೆ ನಗುವುದು
ವಸ್ತ್ರವನು ತೊಡದ ಮಹಿಳೆಯು ಪೃಥವೀ ಸ್ಥಳದೊಳ್
ಹೂರಣವಿಲ್ಲದ ಹೋಳಿಗೆ
ವೀರಣವಿಲ್ಲದ ಮದುವೆಯು ವೃಥವೈ ಸುಮತೀ

ತಾತ್ಪರ್ಯ : ಯಾವ ಕಾರಣವೂ ಇಲ್ಲದೆ ನಗುವುದು ಒಳ್ಳೆಯದಲ್ಲ. ವಸ್ತ್ರ ಧರಿಸದೆ ಇರುವ ಮಹಿಳೆಯು, ಹೂರಣವಿಲ್ಲದೆ ಮಾಡಿದ ಹೋಳಿಗೆ, ಡೋಲು ವಾದ್ಯವಿಲ್ಲದ ಮದುವೆ, ಪ್ರಪಂಚದಲ್ಲಿ ವ್ಯರ್ಥವಾದವುಗಳು.

37. ಮೂಲ : ಕುಲಕಾಂತ ತೋಡ ನೆಪ್ಪುಡು
ಗಲ ಹಿಂಪಕು ವಟ್ಟಿತಪ್ಪುಘಟಿಯಿಂಪಕು ಮಾ
ಕಲಕಂಠ ಕಂಟಿ ಕನ್ನೀ
ರೊಲಕಿನ ಸಿರಿಯಿಂಟನುಂಡ ನೊಲ್ಲದು ಸುಮತೀ

ಅನುವಾದ : ಕುಲಕಾಂತೆಯು ಜತೆ ನಿತ್ಯವು
ಕಲಹಿಸದಿರು ಹುಡುಕಿ ತಪ್ಪು ಹೊರಿಸದಿರೈ
ಲಲನೆಯು ಕಣ್ಣೀರು ಸುರಿಸ
ಲು ಲಕ್ಷ್ಮಿಯು ಗೃಹವ ತೊರೆವಳು ತಿಳಿಯೈ ಸುಮತೀ

ತಾತ್ಪರ್ಯ : ಒಂದಲ್ಲಾ ಒಂದು ತಪ್ಪು ಹುಡುಕಿ ಅದನ್ನು ಹೆಂಡತಿಯ ಮೇಲೆ ಹೊರಿಸಿ, ಅವಳ ಜತೆ ನಿತ್ಯ ಜಗಳ ಮಾಡಬಾರದು. ಮನೆಯಲ್ಲಿ ಸ್ತ್ರೀ ಕಣ್ಣೀರು ಸುರಿಸಿದರೆ ಲಕ್ಷ್ಮಿಯು ಆ ಮನೆಯನ್ನು ಬಿಟ್ಟು ಹೋಗುವಳು.

38. ಮೂಲ : ಕೂರಿಮಿಗಲ ದಿನಮುಲಲೋ
ನೇರಮು ಲೆನ್ನಡುನು ಗಲುಗ ನೇರವು ಮರಿಯಾ
ಕೂರಿಮಿ ವಿರಸಂಬೈನನು
ನೇರಮುಲೇ ತೋಚುಚುಂಡು ನಿಕ್ಕಮು ಸುಮತೀ

ಅನುವಾದ : ಸಂಪ್ರೀತಿಯಿಂದಿರುವವರೆಗು
ತಪ್ಪುಗಳು ಘಟಿಸುವುದಿಲ್ಲ ತದನಂತರ ವಾ
ಸಂಪ್ರೀತಿ ವಿರಸವಾದೊಡೆ
ತಪ್ಪುಗಳೇ ಕಾಣಬರುವುವು ತಥ್ಯವು ಸುಮತೀ

ತಾತ್ಪರ್ಯ : ಯಾರೇ ಆಗಲಿ, ಒಬ್ಬರಲ್ಲಿ ಒಬ್ಬರಿಗೆ ಪ್ರೀತಿ ಇರುವವರೆಗೆ ಯಾವ ತಪ್ಪು ಗೋಚರಿಸುವುದಿಲ್ಲ. ಆ ಪ್ರೀತಿ ಬರಿಗಿ ವಿರಸವಾದ ಕ್ಷಣದಿಂದ ಬರಿ ತಪ್ಪುಗಳೆ ಕಣ್ಣಿಗೆ ಕಾಣುತ್ತವೆ. ಇದು ಪ್ರಪಂಚದಲ್ಲಿ ಸತ್ಯ ಸಂಗತಿ.

39. ಮೂಲ : ಕೊಂಚೆಮು ನರು ಸಂಗತಿಚೇ
ಸಂಚಿತಮುಗ ಗೀಡು ವಚ್ಚು ನದಿ ಯೆಟ್ಲನ್ನನ್
ಗಿಂಚಿತ್ತು ನಲ್ಲಿ ಕುಟ್ಟಿನ
ಮಂಚಮುನಕು ಬೆಟ್ಲುವಚ್ಚು ಮಹಿಲೋ ಸುಮತೀ

ಅನುವಾದ : ಕೊಂಚದ ನರ ಸಹವಾಸದಿ
ಸಂಚಿತ ಕೇಡನು ತರುವುದು ಅದಾವ ವಿಧವೆನೆ
ಕಿಂಚಿತ್ತು ತಿಗಣೆ ಕಚ್ಚಲು
ಮಂಚಕ್ಕೆ ತಪ್ಪದು ಹೊಡೆತವು ತಥ್ಯವು ಸುಮತೀ

ತಾತ್ಪರ್ಯ : ಮಂಚದಲ್ಲಿ ಸೇರಿರುವ ತಿಗಣೆ ಕಚ್ಚಿದರೆ ಅದನ್ನು ಸಾಯಿಸಲು ಮಂಚಕ್ಕೆ ಹೊಡೆತಗಳು ಬೀಳುತ್ತವೆ. ಅದೇ ರೀತಿ ದುರ್ಜನ ಸಹವಾಸದಿಂದ ಕಷ್ಟ ನಷ್ಟಗಳು ತಪ್ಪುವುದಿಲ್ಲ. ಇದು ಸತ್ಯ ಸಂಗತಿ.

40. ಮೂಲ : ಕೊಕ್ಕೋಕಮೆಲ್ಲ ಚಿದಿವಿನ
ಜಕ್ಕನಿ ವಾಡೈನ ರಾಜ ಚಂದ್ರುಂಡೈನನ್
ಮಿಕ್ಕಿಲಿ ರೊಕ್ಕಮು ಲಿಯ್ಯಕ
ಚಿಕ್ಕದುರಾ ವಾರಕಾಂತ ಸಿದ್ಧಮು ಸುಮತೀ

ಅನುವಾದ : ಕಾಮಕಲೆಯನರಿತರೇನು
ಕೋಮಲ ಸುಕುಮಾರ ರಾಜ ಚಂದ್ರನೆ ಇರಲೇಂ
ಇಮ್ಮಡಿ ರೊಕ್ಕವ ನೀಯದೆ
ಸುಮ್ಮನೆ ಬರುವಳೆ ಗಣಿಕೆಯು ಸತ್ಯವೊ ಸುಮತೀ

ತಾತ್ಪರ್ಯ : ಕಾಮಕಲೆಯಲ್ಲಿ ಪಂಡಿತನೇ ಆಗಿರಲಿ, ಅವನು ಮನ್ಮಥ ಸುಂದರನೇ ಇರಲಿ, ರಾಜ ಚಂದ್ರನೇ ಆದರೂ ಸಹ, ಸೂಳೆಯು ಮಾತ್ರ ಸಾಕಷ್ಟು ಹಣ ಕೊಡದಿದ್ದರೆ ಹತ್ತಿರ ಬರುವುದಿಲ್ಲ. ಇದು ಪ್ರಪಂಚದ ಒಂದು ಸತ್ಯ ಸಂಗತಿ.

41. ಮೂಲ : ಕೊರಗಾನಿ ಕೊಡಕು ಪುಟ್ಟಿನ
ಗೊರಗಾಮಿಯೆಕಾದು ತಂಡ್ರಿಗುಣಮುಲ ಜೆರಚುನ್
ಜೆರುಕುತುದ ವೆನ್ನು ಪುಟ್ಟಿನ
ಜೆರುಕುನ ದೀಪೆಲ್ಲ ಜೆರುಚು ಸಿದ್ಧಮು ಸುಮತೀ

ಅನುವಾದ : ಮೂರ್ಖನವ ಕುವರ ಜನಿಸಲು
ಮೂರ್ಖನವನಲ್ಲದೆ ತಂದೆ ಗುಣಗಳ ಕೆಡಿಸುವ
ಕರ್ವದ ತೆನೆತಾ ಹೊರಡಲು
ಕರ್ವದ ಸಿಹಿಯೆಲ್ಲ ಕೆಡುಗು ಖಂಡಿತ ಸುಮತೀ

ತಾತ್ಪರ್ಯ : ಕಬ್ಬಿನಲ್ಲಿ ತೆನೆ ಹೊರಡಲು ಅದರ ಸಿಹಿ ಕೆಡುವಂತೆ, ಮೂರ್ಖನಾದ ಮಗನು ಹುಟ್ಟಿದರೆ, ಅವನು ಮೂರ್ಖನೆ ಆಗುವುದಲ್ಲದೆ ತಂದೆಯ ಒಳ್ಳೆಯ ಹೆಸರನ್ನು ಕೆಡಿಸುವನು.

42. ಮೂಲ : ಕೋಮಲಿ ವಿಶ್ವಾಸಂಬುನು
ಬಾಮುಲ ತೋ ಚೆಲಿಮಿ ಯನ್ಯ ಭಾಮಲ ವಲಪುನ್
ವೇಮುಲ ತಿಯ್ಯದನಂಬುನು
ಭೂಮೀಶುಲನಮ್ಮಿಕಯುನು ಬೊಂಕುರ ಸುಮತೀ

ಅನುವಾದ : ನಾರಿಯ ವಿಶ್ವಾಸವದುಂ
ಉರಗನ ಸಂಗ ಪರನಾರಿ ಸಂಪ್ರೀತಿಯು ಬೇ
ವುರಸದಲಿ ಸಿಹಿ ರುಚಿಯದುಂ
ಭೂರಮಣರ ನಂಬುಗೆಯದು ಬೊಂಕೆಲೊ ಸುಮತೀ

ತಾತ್ಪರ್ಯ : ನಾರಿಯ ಮಾತಿನಲ್ಲಿ ವಿಶ್ವಾಸ, ಪರಸ್ತ್ರೀಯ ಪ್ರೀತಿ, ಹಾವಿನ ಸ್ನೇಹ, ಬೇವುರಸದಲ್ಲಿ ಸಿಹಿ ಅಧಿಕಾರಿಗಳ ಭರವಸೆ, ಬರಿ ಸುಳ್ಳು.

43. ಮೂಲ : ಗಡನಗಲ ಮಗನಿ ಜೂಚಿನ
ನಡುಗುಲಕುನು ಮಡುಗು ಲಿಡುದುರತಿವಲು ತಮಲೋ
ಗಡನ ನುಡುಗು ಮಗನಿ ಜೂಚಿನ
ನಡಪೀನುಗುವಚ್ಚೆನನುಚು ನಗುದುರು ಸುಮತೀ

ಅನುವಾದ : ಅರ್ಜಿಸುವ ಪತಿಯು ಕಂಡೊಡೆ
ಹೆಜ್ಜೆಜ್ಜೆಗು ಬಾಗಿ ಸತಿಯು ಉಪಚರಿಸುವಳ್ಳೆ
ಅರ್ಜಿಸದ ಪತಿಯು ಕಂಡೊಡೆ
ಅಜಶವ ಬಂತೆನುತ ನೋಡಿ ನಗುವಳು ಸುಮತೀ

ತಾತ್ಪರ್ಯ : ಕೈತುಂಬ ಸಂಪಾದಿಸಿ ತಂದು ಹಾಕುವ ಗಂಡನನ್ನು ಕಂಡರೆ ಹೆಂಡತಿಯು ಬಹು ವಿನಯದಿಂದ ಉಪಚಾರ ಮಾಡುತ್ತಾಳೆ. ಸಂಪಾದನೆ ಇಲ್ಲದ ಗಂಡನನ್ನು ನೋಡಿದರೆ ಜೀವಂತ ಶವ ಬಂತೆನುತ ತಿರಸ್ಕಾರದಿಂದ ನಗುತ್ತಾಳೆ.

44. ಮೂಲ : ಚಿಂತಿಂಪಕು ಗಡಚಿನ ಪನಿ
ಕಿಂತುಲು ವಲತುರನಿ ನಮ್ಮ ಕೆಂತಯು ಮದಿಲೋ
ನಂತಃಪುರ ಕಾಂತಲ ತೋ
ಮಂತನಮುಲು ಮಾನುಮಿದಿಯೆ ಮತಮುರ ಸುಮತೀ

ಅನುವಾದ : ಚಿಂತಿಸಿದೆ ಮುಗಿದ ಕಾರ್ಯಕೆ
ಕಾಂತೆಯರು ಒಲಿಯುವರೆಂದು ನಂಬದೆ ಮನದೊಳ್
ಅಂತಃಪುರ ಕಾಂತೆಯರೊಳ್
ಮಂತನ ಮಾಡದೆ ಇರುವುದೆ ಮತವೈ ಸುಮತೀ

ತಾತ್ಪರ್ಯ : ನಡೆದು ಹೋದ ಕಾರ್ಯಕ್ಕೆ ಚಿಂತಿಸಿ ಪ್ರಯೋಜನವಿಲ್ಲ; ನಾರಿಯು ಒಲಿಯುವಳೆಂದು ನಂಬಬಾರದು. ಅಂತಃಪುರ ದಲ್ಲಿರುವ ನಾರಿಯರಲ್ಲಿ ಸಮಾಲೋಚನೆ ನಡೆಸಬಾರದು.

45. ಮೂಲ : ಚೀಮಲು ಪೆಟ್ಟಿನ ಪುಟ್ಟಲು
ಪಾಮುಲಕಿರವೈನಯುಟ್ಲು ಪಾಮರುಡು ತಗನ್
ಹೇಮಂಬು ಗೂಡಬೆಟ್ಟಿನ
ಭೂಮೀಶುಲ ಪಾಲು ಜೇರು ಭುವಿಲೋ ಸುಮತೀ

ಅನುವಾದ : ಇರುವೆಯು ಕಟ್ಟಿದ ಹುತ್ತವು
ಉರಗನ ವಾಸ ಗೃಹದಂತೆ ದಡ್ಡನು ಬಹು ಬಂ
ಗಾರವ ಶೇಖರಿಸಿಟ್ಟರೆ
ಧರಣೀಶ್ವರನ ವಶವಹುದು ಧರೆಯೊಳ್ ಸುಮತೀ

ತಾತ್ಪರ್ಯ : ಇರುವೆಗಳು ಕಷ್ಟಪಟ್ಟು ಹುತ್ತವನ್ನು ಕಟ್ಟುತ್ತವೆ. ಆ ಹುತ್ತ ಹಾವಿನ ವಾಸಸ್ಥಾನವಾಗುತ್ತದೆ. ಅದರಂತೆ ದಡ್ಡನು ಶೇಖರಿಸಿದ ಹೆಚ್ಚಾದ ಬಂಗಾರವು ಸರ್ಕಾರದ ವಶವಾಗುವುದು.

46. ಮೂಲ : ಚುಟ್ಟಮುಲುಗಾನಿ ವಾರಲು
ಚುಟ್ಟಮುಲಮು ನೀಕಟಂಚು ಸೊಂಪುದಲಿರ್ಪನ್
ನೆಟ್ಟುಕೊನಿ ಯಾಶ್ರಯಿಂತುರು
ಗಟ್ಟಿಗ ದ್ರವ್ಯಂಬು ಗಲುಗ ಗದರಾ ಸುಮತೀ

ಅನುವಾದ : ನೆಂಟರೆ ಅಲ್ಲದ ಜನಗಳು
ನೆಂಟರು ತಾವು ನಿಮಗೆನುತ ನಂಬುಗೆ ಗೊಳಿಸುತ
ಅಂಟಿಕೊಳುತ ಸೇರುವುದು
ನೀಟಾದ ದ್ರವ್ಯ ಲಭ್ಯದಿಂದೆಲೊ ಸುಮತೀ

ತಾತ್ಪರ್ಯ : ಹೇರಳವಾಗಿ ಧನವಿರುವಾಗ, ನೆಂಟರೆ ಅಲ್ಲದ ಜನರೂ ಸಹ ತಾವು ನೆಂಟರು ಎಂದು ಹೇಳಿ ನಂಬಿಸಿ ಬಿಡದೆ ಅಂಟಿಕೊಂಡು ಬಿಡುತ್ತಾರೆ.

47. ಮೂಲ : ಚೇತುಲಕು ದೊಡವು ದಾನಮು
ಭೂತನಾಥುಲಕು ದೊಡವು ಬೊಂಕಮಿ ಧರಲೋ
ನೀತಿಯೆ ತೊಡನೆವ್ವಾರಿಕಿ
ನಾತಿಕಿ ಮಾನಂಬುತೊಡವು ನಯಮುಗ ಸುಮತೀ

ಅನುವಾದ : ಕೊಡುವುದೆ ಕರಗಳಿಗೆ ಸೊಬಗು
ನಾಡೊಡೆಯಂಗೆ ಬೊಂಕದಿಹುದೆ ಸೊಬಗದು ಭುವಿಯೊಳ್
ನಡತೆಯೆ ಸಕಲರಿಗೆ ಸೊಬಗು
ಹೆಂಡತಿಗೆ ಮಾನವೆ ಸೊಬಗು ನಯದೊಳ್ ಸುಮತೀ

ತಾತ್ಪರ್ಯ : ದಾನ ಮಾಡುವುದು ಕೈಗಳಿಗೆ ಅಲಂಕಾರ. ಅಧಿಕಾರಿಗೆ ಸುಳ್ಳು ಹೇಳದಿರುವುದು ಅಲಂಕಾರ. ಒಳ್ಳೆಯ ನಡತೆಯು ಎಲ್ಲರಿಗೂ ಶೋಭಾಯಮಾನ. ಹೆಂಗಸಿಗೆ ಮಾನ ಅತಿ ಹೆಚ್ಚಿನ ಅಲಂಕಾರ.

48. ಮೂಲ : ತಡನೋರ್ವಕ ಯೊಡಲೋರ್ವಕ
ಕಡುವೇಗಂ ಬಡಚಿ ಪಡಿನ ಗಾರ್ಯಂಬಗುನೇ
ತಡವೋರ್ಚಿನ ನೊಡಲೋರ್ಚಿನ
ಜೆಡಿ ಪೋಯಿನ ಕಾರ್ಯಮೆಲ್ಲ ಜೇಕುರು ಸುಮತೀ

ಅನುವಾದ : ಸಹನೆಯು ಬಳಲಿಕೆ ಇಲ್ಲದೆ
ಬಹು ಬೇಗನೆ ಉರಿದು ಬೀಳೆ ಕೆಲಸವು ಕೆಡುವುದು
ಸಹನೆಯು ಸ್ಥೈರಣೆ ಇರುವೆಡೆ
ರಹಣಾದ ಕೆಲಸವು ಸಿದ್ಧಿ ಆಹುದೈ ಸುಮತೀ

ತಾತ್ಪರ್ಯ : ಸಹನೆ ಬಹಳ ಮುಖ್ಯ. ಸಹನೆ ಇಲ್ಲದೆ ಬಹು ಬೇಗನೆ ಇತರರ ಮೇಲೆ ಎರಗಿದರೆ ಜನ ದೂರ ಸರಿಯುತ್ತಾರೆ. ಆಗಬೇಕಾದ ಕೆಲಸವು ಕೆಟ್ಟುಹೋಗುತ್ತದೆ. ಸಹನೆಯಿಂದ ವರ್ತಿಸಿದರೆ ಕೆಟ್ಟುಹೋದ ಕೆಲಸವೂ ಸಹ ಕೈಗೂಡಿ ಬರುತ್ತದೆ.

49. ಮೂಲ : ತನಕೋಪಮೆ ತನ ಶತ್ರುವು
ತನ ಶಾಂತಮೆ ತನಕು ರಕ್ಷ ದಯು ಚುಟ್ಟಂಬೌ
ತನ ಸಂತೋಷಮೆ ಸ್ವರ್ಗಮು
ತನ ದುಃಖಮೆ ನರಕ ಮಂಡ್ರು ತಥ್ಯಮು ಸುಮತೀ

ಅನುವಾದ : ತನ್ನಯ ಕೋಪ ತನಗೆ ಶತ್ರು
ತನ್ನಯ ಶಾಂತವೆ ಪೊರೆವುದು ಕರುಣೆಯೆ ಸಖ್ಯ
ತನ್ನಯ ಸಂತಸ ಸಗ್ಗವು
ತನ್ನಯ ದುಃಖವೆ ನರಕವು ನಿಜದೊಳು ಸುಮತೀ

ತಾತ್ಪರ್ಯ : ವಿಮರ್ಶೆ ಮಾಡಿನೋಡಿದರೆ ತನ್ನ ಕೋಪವೇ ತನಗೆ ಶತ್ರು. ತನ್ನ ಕೋಪದಿಂದ ಇತರರು ಶತ್ರುಗಳಾಗುತ್ತಾರೆ. ಶಾಂತವು ಕಾಪಾಡುತ್ತದೆ. ಕರುಣೆ, ಒಬ್ಬ ಸ್ನೇಹಿತನ ಹಾಗೆ ಸಹಾಯ ಮಾಡುತ್ತದೆ. ತನ್ನ ಸಂತೋಷವೇ ಸ್ವರ್ಗ ಸುಖವು. ತನ್ನ ದುಃಖವೇ ತನಗೆ ನರಕಯಾತನೆ.

50. ಮೂಲ : ತನಯೂರಿ ತಪಸಿ ತನಮುನು
ದನ ಪುತ್ರು ನಿ ವಿದ್ಯಪೆಂಪು ದನ ಸತಿ ರೂಪುನ್
ದನ ಪೆರಟಿ ಚೆಟ್ಟು ಮಂದುನು
ಮನಸುನ ವರ್ಣಿಂಪರೆಟ್ಟಿ ಮನುಜುಲು ಸುಮತೀ

ಅನುವಾದ : ತನ್ನೂರ ತಪಸಿತನವನು
ತನ್ನ ಮಗನ ವಿದ್ಯೆ ತನ್ನ ಸತಿ ಸೌಂದರ್ಯವ
ತನ್ನಯ ಹಿತ್ತಿಲ ಔಷಧಿ
ಮನಸಿಂ ವರ್ಣಿಸರು ಯಾರೆ ಇರಲುಂ ಸುಮತೀ

ತಾತ್ಪರ್ಯ : ತನ್ನ ಸ್ವಂತ ಊರಿನ ತಪಸ್ವಿಯ ಹಿರಿಮೆಯನ್ನಾಗಲಿ ತನ್ನ ಮಗನ ವಿದ್ಯೆಯನ್ನಾಗಲಿ, ತನ್ನ ಹೆಂಡತಿಯ ಅಂದ ವನ್ನಾಗಲಿ, ತನ್ನ ಹಿತ್ತಿಲ ಗಿಡದ ಔಷಧಿಯನ್ನಾಗಲಿ ಯಾರೂ ಮನಬಿಚ್ಚಿ ವಿವರಿಸುವುದಿಲ್ಲ.

51. ಮೂಲ : ತನಕಲಿಮಿ ಇಂದ್ರಭೋಗಮು
ತನಲೇಮಿಯೆ ಸಕಲ ಲೋಕ ದಾರಿದ್ರ್ಯಂಬುನ್
ತನ ಚಾವು ಜಗತ್ ಪ್ರಳಯಮು
ತನು ವಲಚಿನಯದಿಯೆ ರಂಭ ತಥ್ಯಮು ಸುಮತೀ

ಅನುವಾದ : ತನ್ನಯ ಸಿರಿ ಇಂದ್ರಭೋಗ,
ತನಗಿಲ್ಲದಿರುವುದೆ ಸಕಲ ಲೋಕ ದರಿದ್ರವು
ತನ ಸಾವು ಜಗತ್ ಪ್ರಳಯವು
ತನ್ನ ಪ್ರಿಯತಮೆಯೆ ರಂಭೆ ತಿಳಿಯೈ ಸುಮತೀ

ತಾತ್ಪರ್ಯ : ತನಗೆ ಸಿರಿ ಸಂಪದಗಳಿರುವಾಗ, ಇಂದ್ರನಂತೆ ಸುಖವನ್ನು ಅನುಭವಿಸಿ ಎಲ್ಲರಿಂದಲೂ ಮನ್ನಣೆ ಗಳಿಸುತ್ತಾನೆ. ತನಗಿಲ್ಲದಿರುವಾಗ ಲೋಕವೆಲ್ಲವೂ ದರಿದ್ರಾವಸ್ಥೆಯಲ್ಲಿ ಇದ್ದ ಹಾಗೆ ಕಾಣುತ್ತದೆ. ತನಗೆ ಸಾವು ಬಂದಾಗ, ಜಗತ್ತಿಗೂ ತನಗೂ ಸಂಬಂಧ ಕಡಿದು ಹೋಗುವುದರಿಂದ ಅದು ಪ್ರಳಯವಿದ್ದಂತೆ ಇರುತ್ತದೆ. ತಾನು ಪ್ರೀತಿಸಿದ ವನಿತೆಯು ರಂಭೆಯಂತೆ ಗೋಚರಿಸುತ್ತಾಳೆ.

52. ಮೂಲ : ತನವಾರುಲೇನಿ ಚೋಟನು
ಜನವಿಂಚುಕ ಲೇನಿ ಚೋಟ ಜಗಡಮು ಚೋಟನ್
ಅನುಮಾನವೈನ ಚೋಟನು
ಮನುಜುನಕುನು ನಿಲುವದಗದು ಮಹಿಲೋ ಸುಮತೀ

ಅನುವಾದ : ಬಂಧುಗಳಿಲ್ಲದ ಊರಲಿ
ಆದರ ತೋರದ ಎಡೆಯಲಿ ಕಲಹದೆಡೆಯೊಳುಂ
ಸಂದೇಹ ಬರುವ ತಾಣದಿ
ನಿಂದು ಉಳಿಯುವುದೊಳಿತಲ್ಲ ಭುವಿಯೊಳ್ ಸುಮತೀ

ತಾತ್ಪರ್ಯ : ಬಂಧು ಜನರಿಲ್ಲದ ಊರಿನಲ್ಲಿಯೂ, ತನಗೆ ಪ್ರೀತಿ, ಆದರ ತೋರದ ಸ್ಥಳದಲ್ಲಿಯೂ ಸದಾ ಕಲಹವಾಡುವ ಜಾಗದಲ್ಲಿಯೂ, ಸಂದೇಹ ಬರುವ ಸ್ಥಳದಲ್ಲಿಯೂ ವಾಸಿಸಬಾರದು.

53. ಮೂಲ : ತಮಲಮು ವೇಯನಿ ನೋರುನು
ರಮಣುಲ ಚನುವೊನಲಮೀದ ರಾಯನಿ ಮೇನುನ್
ಕಮಲಮುಲು ಲೇನಿ ಕೊಲಕುನು
ಹಿಮಧಾಮುಡುಲೇನಿರಾತ್ರಿ ಹೀನಮು ಸುಮತೀ

ಅನುವಾದ : ಎಲೆ ಅಡಿಕೆ ಜಗಿಯದ ಬಾಯಿ
ಬಾಲೆಯರ ಉರಗಳ ಮೇಲೆ ಒರಗದ ತನುವುಂ
ಜಲಜಗಳಿಲ್ಲದ ಕೊಳವುಂ
ಬೆಳದಿಂಗಳಿಲ್ಲದ ರಾತ್ರಿ ಬೋಳೈ ಸುಮತೀ

ತಾತ್ಪರ್ಯ : ವೀಳಯ ಮಾಡದ ಬಾಯಿ, ವನಿತೆಯರ ಉರಗಳ ಮೇಲೆ ಒರಗದ ಒಡಲು, ಕಮಲಗಳೆ ಇಲ್ಲದ ಕೆರೆಯು, ಚಂದ್ರನಿಲ್ಲದ ರಾತ್ರಿ ಇದ್ದೂ ಇಲ್ಲದ ಹಾಗೆ ಪ್ರಯೋಜನವಿಲ್ಲ.

54. ಮೂಲ : ತಲನುಂಡು ವಿಷಮು ಫಣಿಕಿನಿ
ವೆಲಯಂಗಾ ದೋಕನುಂಡು ವೃಶ್ಚಿಕ ಮುನಕುನ್
ತಲತೋಕಯನಕ ಯುಂಡುನು
ಖಲುನಕು ನಿಲುವೆಲ್ಲ ವಿಷಮು ಗದರಾ ಸುಮತೀ

ಅನುವಾದ : ತಲೆಯೊಳಿಹುದು ವಿಷವು ಫಣಿಗೆ
ಬಾಲದಲಿ ನೆಲೆಸಿಹುದು ವಿಷ ವಾವೃಶ್ಚಿಕಂಗೆ
ತಲೆ ಬಾಲ ಎನದೆ ಇರುವುದು
ಖಳನಿಗೆ ತನುವೆಲ್ಲ ವಿಷವು ಖರೆಯಿದು ಸುಮತೀ

ತಾತ್ಪರ್ಯ : ವಿಷವು ಹಾವಿಗೆ ತಲೆಯಲ್ಲಿಯೂ, ಚೇಳಿಗೆ ಬಾಲದಲ್ಲಿಯೂ ಇರುತ್ತದೆ. ಆದರೆ ದುರುಳನಿಗೆ ತಲೆ, ಬಾಲ ಎಂಬ ನಿಯಮವಿಲ್ಲದೆ ದೇಹವೆಲ್ಲಾ ವಿಷದಿಂದ ತುಂಬಿ ಹೋಗಿರುತ್ತದೆ.

55. ಮೂಲ : ತಲಪ್ರೊಡುವು ధనము ಪೋಸಿನ
వెలియాలికి నిజము లేదు వివరింపంగా
తలదడవి బాసజేసిన
వెలియాలిని నమ్మరాదు వినురా సుమతీ

ಅನುವಾದ : ತಲೆಯುದ್ದ ಹಣವ ಸುರಿಯಲು
ಬೆಲೆ ವೆಣ್ಣಿಗೆ ನಿಜವೆ ಇಲ್ಲ ವಿವರಿಸಲದನುಂ
ತಲೆ ತಡವಿ ಭಾಷೆ ಕೊಟ್ಟರು
ಬೆಲೆ ವೆಣ್ಣನು ನಂಬಬೇಡ ಕೇಳೈ ಸುಮತೀ

ತಾತ್ಪರ್ಯ : ಸೂಳೆಗೆ ತಲೆಯುದ್ದ ಹಣವ ಸುರಿದರು ಸಹ ಅವಳು ನಿಜವನ್ನು ಹೇಳುವುದಿಲ್ಲ. ವಿವರಿಸಿ ಹೇಳುವುದಾದರೆ ತಲೆಯ ಮೇಲೆ ಕೈ ಇಟ್ಟುಕೊಂಡು ಭಾಷೆ ಕೊಟ್ಟರೂ ಸಹ ಅವಳನ್ನು ನಂಬಬಾರದು.

56. ಮೂಲ : తలమాసిన వొలు మాసిన
వలువలు మాసినను బ్రాణ వల్లభునైనన్
కులకాంతలైన రోతురు
తిలకింపంగ భూమిలోన దిరముగ సుమతీ

ಅನುವಾದ : ತಲೆ ಮಾಸಲು ತನುಮಾಸಲು
ಮೇಲುಡುಪು ಮಾಸಲು ತನ್ನ ಪತಿಯೇ ಆದರು
ಕುಲಸತಿ ಇರಲುಂ ಸಹಿಸಳು
ಇಳೆಯೊಳ್ ನಿಜವಿದು ಪರಿಕಿಸಿ ತಿಳಿಯೈ ಸುಮತೀ

ತಾತ್ಪರ್ಯ : ತಲೆ ನಿಲುವಂಗಿ ದೋತರ ಇವು ಕೊಳಕಾಗಿದ್ದರೆ, ತನ್ನ ಪತಿಯೇ ಆಗಿರಲಿ, ಕುಲಸತಿ (ಪತಿವ್ರತೆ) ಯಾದರೂ ಸಹ ಅಸಹ್ಯ ಪಡುತ್ತಾಳೆ. ನಿಜಾಂಶವನ್ನು ಪರೀಕ್ಷಿಸಿ ತಿಳಿಯ ಬಹುದು.

57. ಮೂಲ : ತಾನನುಭವಿಂಪನರ್ಥವು
ಮಾನವ ಪತಿ ಜೇರು ಗೊಂತ ಮರಿ ಭೂಗತ ಮೌ
ಗಾನಲ ನೀಗಲು ಗೂರ್ಚಿನ
ತೇನಿಯ ಯೊರಿ ಜೇರುನಟ್ಲು ತಿರಮುಗ ಸುಮತೀ

ಅನುವಾದ : ತಾನನುಭವಿಸದ ಅರ್ಥವು
ಮಾನವ ಪತಿ ವಶವು ಮಿಕ್ಕ ಭೂಗತವಹುದೈ
ವನದಲಿ ನೊಣ ಶೇಖರಿಸಿದ
ಜೇನು ಪರರಿಗೆ ಸಿಗುವಂತೆ ನಿಜವಿದು ಸುಮತೀ

ತಾತ್ಪರ್ಯ : ಕಾಡಿನಲ್ಲಿ ಜೇನುನೊಣಗಳು ಕಷ್ಟಪಟ್ಟು ಜೇನು ಶೇಖರಿಸುತ್ತವೆ. ಆ ಜೇನು ಇತರರ ಪಾಲಾಗುತ್ತದೆ. ಅದೇ ರೀತಿ ತಾನು ಸಂಪಾದಿಸಿ ಅನುಭವಿಸದೆ ಕೂಡಿಟ್ಟ ಹಣ ಸರ್ಕಾರದ ವಶವಾಗುತ್ತದೆ. ಮಿಕ್ಕಷ್ಟು ಭೂಗತವಾಗುತ್ತದೆ.

58. ಮೂಲ : ದಗ್ಗರ ಕೊಂಡೆಮು ಜಪ್ಪೆಡು
ಪ್ರೆಗ್ಗಡ ಪಲುಕುಲಕುರಾಜು ಪ್ರಿಯುಡೈಮರಿ ತಾ
ನೆಗ್ಗು ಪ್ರಜಕಾಚರಿಂಚುಟ
ಬೊಗ್ಗುಲಕೈಕಲ್ಪತರುವು ಬೊಡುಚುಟ ಸುಮತೀ

ಅನುವಾದ : ಸಮ್ಮುಖ ಚಾಡಿಯ ಹೇಳುವ
ಅಮಾತ್ಯನ ಮಾತಿಗರಸನು ಸಂಪ್ರೀತಿ ಹೊಂದಿ
ಅಮಲು ಗೊಳಿಸಲಾಚರಣೆಗೆ
ಭ್ರಮಿಸಿ ಕರಿಗೆ ಮರವ ಕಡಿವ, ಪರಿಯಿದು ಸುಮತೀ

ತಾತ್ಪರ್ಯ ; ಹತ್ತಿರವಿದ್ದು ಚಾಡಿ ಹೇಳುವ, ಮಂತ್ರಿಯ ಮಾತಿಗೆ ಸಂತಸಗೊಂಡು, ಅರಸನು ಅದನ್ನು ಆಚರಣೆಗೆ ತಂದರೆ, ಇದ್ದಲಿಗೋಸ್ಕರ ಫಲಭರಿತ ಮರಗಳನ್ನು ಕಡಿದು ಸುಡುವಂತೆ, ಪ್ರಜೆಗಳಿಗೆ ತೊಂದರೆಯಾಗುತ್ತದೆ.

59. ಮೂಲ : ಧನಪತಿ ಸಖಿಡೈಯುಂಡಿನ
ನೆನೆಯಂಗಾಶಿವುಡು ಭಿಕ್ಷ ಮೆತ್ತಗ ವಲಸೆನ್
ತನವಾರಿಕೆಂತ ಗಲಿಗಿನ
ದನ ಭಾಗ್ಯಮೆ ತನಕುಗಾಕ ತಥ್ಯಮು ಸುಮತೀ

ಅನುವಾದ : ಧನಪತಿ ಸಖನವನಾದರು
ಅನ್ನವನುಪರ ಶಿವ ಭಿಕ್ಷೆ ಬೇಡಿದ ನೇತಕೆ
ತನ್ನವರಿಗೆ ಎಷ್ಟೆ ಇರಲಿ
ತನ್ನಯ ಭಾಗ್ಯವೆ ತನಗದು ತಥ್ಯವು ಸುಮತೀ

ತಾತ್ಪರ್ಯ : ಕುಬೇರನು ಮಿತ್ರನಾಗಿದ್ದರೂ ಸಹ, ಶಿವನು ಭಿಕ್ಷೆಯನ್ನು ಬೇಡಬೇಕಾಯಿತು. ಹಾಗಿರುವಾಗ ಬಂಧು ಮಿತ್ರರಿಗೆ, ಎಷ್ಟೇ ಸಂಪತ್ತಿದ್ದರೂ ಸಹ, ಅವರವರ ಅದೃಷ್ಟಕ್ಕೆ ತಕ್ಕಂತೆ ಅವರವರಿಗೆ ಪ್ರಾಪ್ತಿಯಾಗುತ್ತದೆ.

60. ಮೂಲ : ಧೀರುಲಕು ಜೇಯು ಮೇಲದಿ
ಸಾರಂಬಗು ನಾರಿಕೇಳ ಸಲಿಲಮು ಭಂಗಿನ್
ಗೌರಮು ದೆಚ್ಚು ಮೀದಟ
ಭೂರಿ ಸುಖಾವಹಮುನಗುನು ಭುವಿಲೋ ಸುಮತೀ

ಅನುವಾದ : ಧೀರರಿಗೆಸಗುವ ನೆರವದು
ಸಾರಾಂಶವು ನಾರಿಕೇಳ ಸಲಿಲದ ತೆರದೊಳ್
ಗೌರವ ತರುವುದು ನಂತರ
ಭೂರಿ ಸುಖ ಸಂತಸ ಒದಗು ಭುವಿಯೊಳ್ ಸುಮತೀ

ತಾತ್ಪರ್ಯ : ಯಾವ ರೀತಿ ತೆಂಗಿನ ಗಿಡಕ್ಕೆ ನೀರು ಹಾಕಿ ಬೆಳೆಸಿದರೆ ಅದು ಮುಂದೆ ಫಲ ಕೊಡುತ್ತದೆಯೋ, ಅದೇ ರೀತಿ ಧೀರರಿಗೆ ನಾವು ಮಾಡುವ ಸಹಾಯವು ವ್ಯರ್ಥವಾಗುವುದಿಲ್ಲ. ಇದರಿಂದ ಸುಖ ಸಂತಸ ಗೌರವವು ಉಂಟಾಗುತ್ತದೆ.

61. ಮೂಲ : ನಡುವಕುಮೀ ತೆರು ವೊಕ್ಕಟಿ
ಗುಡುವಕುಮೀ ಶತ್ರುನಿಂಟ ಗೂರಿಮಿ ತೋಡನ್
ಮುಡುವಕುಮೀ ಪರಧನಮುಲ
ನುಡುವಕುಮೀ ಯೊರುಲಮನಸು ನೊವ್ವಗ ಸುಮತೀ

ಅನುವಾದ : ನಡೆಯದೆ ದಾರಿಯ ಒಬ್ಬನೆ
ಮಾಡದೆ ಭೋಜನ ಶತ್ರುಮನೆ ಅನುರಾಗದೊಳುಂ
ಗುಡಿಸದೆ ಪರರ ದ್ರವ್ಯವ
ನುಡಿಯದೆ ಘಾಸಿಸೆ ಇತರರ ಮನವನು ಸುಮತೀ

ತಾತ್ಪರ್ಯ : ಪ್ರಯಾಣ ಮಾಡುವಾಗ ಒಂಟಿಯಾಗಿ ಹೋಗಬಾರದು. ಶತ್ರು ಎಷ್ಟೇ ಪ್ರೀತಿ ತೋರಿಸಿ ಊಟಕ್ಕೆ ಕರೆದರೂ ಅವನ ಮನೆಯಲ್ಲಿ ಊಟ ಮಾಡಬಾರದು. ಇತರರ ಹಣವನ್ನು ಅಪಹರಿಸಬಾರದು. ತಾವು ಮಾತನಾಡುವಾಗ ಇತರರ ಮನಸ್ಸನ್ನು ನೋಯಿಸಬಾರದು.

62. ಮೂಲ : ನಮ್ಮಕು ಸುಂಖರಿ ಜೂದರಿ
ನಮ್ಮಕು ಮಗಸಾಲಿವಾನಿ ನಟುವೆಲಿಯಾಲಿನ್
ನಮ್ಮಕು ಮಂಗಡಿವಾನಿನಿ
ನಮ್ಮಕು ಮೀ ವಾಮಹಸ್ತು ನವನಿನಿ ಸುಮತೀ

ಅನುವಾದ : ನಂಬದೆ ಸುಂಕಗ ಜೂಜುಗ
ನಂಬದಿರ್ಕೆ ಅಕ್ಕಸಾಲಿ ಬೆಲೆವೆಣ್ಣುಗಳಂ
ನಂಬದಿರ್ಕೆ ವ್ಯಾಪಾರಿಯು
ನಂಬದೆ ಎಡಗೈಯುವವನನು ಭುವಿಯೊಳ್ ಸುಮತೀ

ತಾತ್ಪರ್ಯ : ಸುಂಕದ ಅಧಿಕಾರಿಯನ್ನು ನಂಬಿ ಅವನಿಗೆ ತಮ್ಮ ವ್ಯವಹಾರವನ್ನೆಲ್ಲಾ ತಿಳಿಸಿದರೆ ಅವನಿಂದ ಕಿರುಕುಳ ತಪ್ಪಿದ್ದಲ್ಲ. ಜೂಜುಕೋರನನ್ನು ನಂಬಬಾರದು. ಅಕ್ಕಸಾಲಿಗನನ್ನು ನಂಬಿ ಅವನಿಗೆ ಒಡವೆಯನ್ನು ಮಾಡಲು ಬಂಗಾರವನ್ನು ಕೊಟ್ಟರೆ ಅವನು ಕದಿಯದೆ ಇರುವುದಿಲ್ಲ. ಅಂತೆಯೇ ಸೂಳೆಯನ್ನು , ವ್ಯಾಪಾರಿಯನ್ನು ನಂಬಬಾರದು. ಎಡಗೈಯುವವನನ್ನೂ ನಂಬಬಾರದು.

63. ಮೂಲ : ನಯಮುನ ಪಾಲುಂದ್ರಾವರು
ಭಯಮುನ ವಿಷಮ್ಮುನೈನ ಭಕ್ಷಿಂತುರು ಗಾ
ನಯಮೆಂತ ದೋಸ ಕಾರಿಯೊ
ಭಯಮೇ ಚೂಪಂಗ ವಲಯು ಬಾಗುಗ ಸುಮತೀ

ಅನುವಾದ : ನಯದೊಳ್ ಹಾಲನು ಕುಡಿಯರು
ಭಯಪಡಿಸಲು ವಿಷವೆ ಇರಲಿ ಕುಡಿಯುವರವರುಂ
ನಯವೆಷ್ಟು ದೋಷಕಾರಿಯೊ
ಭಯವನ್ನೇ ತೋರಬೇಕು ಬಹುವಿಧ ಸುಮತೀ

ತಾತ್ಪರ್ಯ : ಒಳ್ಳೆಯ ಮಾತಿನಲ್ಲಿ ಕುಡಿಯಲು ಹಾಲನ್ನು ಕೊಟ್ಟರೆ ಜನ ಕುಡಿಯುವುದಿಲ್ಲ. ಭಯಪಡಿಸಿದರೆ ವಿಷವನ್ನಾದರೂ ಕುಡಿಯುತ್ತಾರೆ. ನಯವಾದ ಮಾತು ಅಷ್ಟು ದೋಷ ಕಾರಿಯೇ ? ಆದ್ದರಿಂದ ಚೆನ್ನಾಗಿ ಭಯವನ್ನೇ ತೋರಬೇಕು.

64. ಮೂಲ : ನರಪತುಲು ಮೇರ ದಪ್ಪಿನ
ದಿರವೊಪ್ಪಗ ವಿಧವಯಿಂಟ ದೀರ್ಪರಿಯ್ಯೆನನ್
ಗರಣಮು ವೈದಿಕುಡ್ಡೆನನು
ಮರಣಾಂತಕ ಮೌನುಗಾನಿ ಮಾನದು ಸುಮತೀ

ಅನುವಾದ : ನರಪತಿಯು ಹದ್ದುಮೀರಲು
ತಿರದಿ ವಿಧವೆಯ ಮನೆಯಲ್ಲಿ ನ್ಯಾಯವನೆಸಗಲ್
ಕರಣಿಕ ವೈದಿಕ ನಾದರು
ಮರಣಾಂತಕ ವಾಗದಿರದು ಖಂಡಿತ ಸುಮತೀ

ತಾತ್ಪರ್ಯ : ಅಧಿಕಾರಿ ಹದ್ದುಮೀರಿ ಮನಬಂದಂತೆ ವರ್ತಿಸಿದರೆ, ಸದಾ ವಿಧವೆಯ ಮನೆಯಲ್ಲಿ ನ್ಯಾಯ ತೀರ್ಮಾನವಾಗುತ್ತಿದ್ದರೆ, ಕರಣಿಕನು (ಶ್ಯಾನುಭೋಗ) ವೈದಿಕನಾದರೆ ಪರಿಣಾಮ ಮರಣಾಂತಕವಾಗದಿರದು.

65. ಮೂಲ : ನವರಸ ಭಾವಾಲಂಕೃತ
ಕವಿತಾಗೋಷ್ಠಿಯುನು ಮಧುರ ಗಾನಂಬುನು ದಾ
ನವಿವೇಕಿ ಕೆಂತ ಜೆಪ್ಪಿನ
ಚೆವಿಟಕಿ ಶಂಕೂದಿನಟ್ಲು ಸಿದ್ಧಮು ಸುಮತೀ

ಅನುವಾದ : ನವರಸ ಭಾವಾಲಂಕೃತ
ಕವಿತಾಗೋಷ್ಠಿಯದು ಮಧುರ ಗಾನವೆ ಇರಲುಂ
ಅವಿವೇಕಿಗೆನಿತು ಹೇಳಲು
ಕಿವುಡಗೆ ಶಂಕೂದಿದ ತೆರ ಸಿದ್ಧವೊ ಸುಮತೀ

ತಾತ್ಪರ್ಯ : ನವರಸ ಭಾವಗಳಿಂದ ಶೋಭಿಸುವ ಕವಿತಾಗೋಷ್ಠಿಯೋ ಇರಲಿ, ಮಧುರವಾದ ಸಂಗೀತವೇ ಆಗಿರಲಿ, ಕಿವುಡನ ಮುಂದೆ ಶಂಕವ ಊದಿದ ಹಾಗೆ, ತಿಳಿವಳಿಕೆ ಇಲ್ಲದವನಿಗೆ ಎಷ್ಟೇ ಹೇಳಿದರೂ ತಿಳಿಯುವುದಿಲ್ಲ.

66. ಮೂಲ : ನವ್ವಕುಮೀ ಸಭಲೋಪಲ
ನವ್ವಕುಮೀ ತಲ್ಲಿ ದಂಡ್ರಿ ನಾಥುಲ ತೋಡನ್
ನವ್ವಕುಮೀ ಪರಸತಿತೋ
ನವ್ವಕುಮೀ ವಿಪ್ರವರುಲ ನಯಮಿದಿ ಸುಮತೀ

ಅನುವಾದ : ಅಣಕಿಸದಿರು ನೀ ಸಭೆಯೊಳ್
ಅಣಕಿಸದಿರು ತಾಯಿ ತಂದೆ ಪ್ರಭುಗಳ ನಂತೆಯೆ
ಅಣಕಿಸದಿರು ಪರಸತಿಯರ
ಅಣಕಿಸದಿರು ವಿಪ್ರವರ್ಗ ಒಳಿತದು ಸುಮತೀ

ತಾತ್ಪರ್ಯ : ತುಂಬಿದ ಸಭೆಯಲ್ಲಿ, ತಾಯಿ ತಂದೆಯರ ಸಮಕ್ಷಮ, ರಾಜರ ಆಸ್ಥಾನದಲ್ಲಿಯೂ, ಪರಸತಿಯರಲ್ಲಿಯೂ, ವಿಪ್ರರಲ್ಲಿಯೂ ಪರಿಹಾಸ್ಯ ಮಾಡಬಾರದು. ವಿನಯದಿಂದ ಇರಬೇಕು.

**67.** ಮೂಲ : ನೀರೇ ಪ್ರಾಣಾಧಾರಮು
ನೋರೇ ರಸಭರಿತ ಮೈನ ನುಡುವುಲ ಕೆಲ್ಲನ್
ನಾರಿಯೆ ನರುಲಕು ರತ್ನಮು
ಚೀರಯೆ ಶೃಂಗಾರ ಮಂಡ್ರು ಸಿದ್ಧಮು ಸುಮತೀ

ಅನುವಾದ : ಉದಕವೆ ಪ್ರಾಣಾಧಾರವು
ಮೋದಕ ರಸಭರಿತ ನುಡಿಯು ನುಡಿಯಲು ಬಾಯಿಯು
ಸುದತಿಯೆ ನರರಿಗೆ ರತ್ನವು
ಉಡುವುದೆ ಸೀರೆಯು ವನಿತೆಗೆ ಸೊಬಗ್ಗೆ ಸುಮತೀ

ತಾತ್ಪರ್ಯ : ನೀರು ಪ್ರಾಣಕ್ಕೆ ಆಧಾರ. ಪ್ರಿಯವಾದ ಮಧುರ ನುಡಿಗಳನ್ನಾಡುವುದಕ್ಕೆ ಬಾಯಿ ಆಧಾರ. ಪತಿವ್ರತೆಯೇ ನರರಿಗೆ ರತ್ನವು. ನಾರಿಗೆ ಸೀರೆ ಉಡುವುದೇ ಭೂಷಣವು.

**68.** ಮೂಲ : ಪಗವಲದೆವ್ವರಿ ತೋಡನು
ವಗವಂಗಾ ವಲದು ಲೇಮಿ ವಚ್ಚಿನ ಪಿದಪನ್
ದೆಗನಾಡ ವಲದು ಸಭಲನು
ಮಗುವಕು ಮನಸೀಯವಲದು ಮಹಿಲೋ ಸುಮತೀ

ಅನುವಾದ : ಹಗೆಗೊಳದಿರು ಯಾರೊಡನೆಯು
ಮಿಗೆ ಚಿಂತಿಸದಿರು ಬಡತನ ಬಂದರೆ ನುಡಿಯದೆ
ತೆಗಳು ನುಡಿಗಳನು ಸಭೆಯೊಳ್
ಅಂಗನೆಗೆ ಮನವ ಕೊಡದಿರು ಭುವಿಯೊಳ್ ಸುಮತೀ

ತಾತ್ಪರ್ಯ : ಯಾರೆ ಇರಲಿ ಹಗೆ ಸಾಧಿಸಬಾರದು. ಬಡತನ ಬಂದಾಗ ಅತಿಯಾಗಿ ಚಿಂತಿಸಬಾರದು. ಹೆಂಗಸಿನ ಸಂಗಡ ಮನಬಿಚ್ಚಿ ಮಾತನಾಡಬಾರದು. ಸಭೆಯಲ್ಲಿ ಬಿರುಸಾದ ತೆಗಳು ಮಾತುಗಳನ್ನಾಡಬಾರದು.

69. ಮೂಲ : ಪತಿಕಡಕುದನ್ನು ಗೂರ್ಚಿನ
ಸತಿಕಡಕುನು ವೇಲ್ಪುಕಡಕು ಸದ್ಗುರು ಕಡಕುನ್
ಸುತುಕಡಕು ರಿಕ್ತ ಚೇತುಲ
ಮತಿಮಂತುಲು ಜನರು ನೀತಿ ಮಾರ್ಗಮು ಸುಮತೀ

ಅನುವಾದ : ಪತಿ ಬಳಿ ತನ್ನ ಪ್ರೀತಿಯು
ಸತಿಯು ಬಳಿ ದೇವರ ಬಳಿಗು ಸದ್ಗುರು ಬಳಿಗಂ
ಸುತನ ಬಳಿಗೆ ಬರಿ ಕೈಯೊಳ್
ಮತಿವಂತರು ಹೋಗರವರು ನೀತಿಯು ಸುಮತೀ

ತಾತ್ಪರ್ಯ : ಅಧಿಕಾರಿಗಳ ಹತ್ತಿರ ತನ್ನ ಪ್ರೀತಿಯ ಹೆಂಡತಿ ಹತ್ತಿರ ದೇವಸ್ಥಾನಕ್ಕೆ ಗುರುವಿನ ಬಳಿಗೆ ಮಗನನ್ನು ನೋಡಲು ಹೋಗುವಾಗ ಬುದ್ಧಿವಂತರು ಬರಿ ಕೈಯಲ್ಲಿ ಹೋಗುವುದಿಲ್ಲ. ಇದು ನೀತಿ ಮಾರ್ಗವು.

70. ಮೂಲ : ಪನಿಚೇಯುನೆಡಲ ದಾಸಿಯು
ನನುಭವಮುನ ರಂಭ ಮಂತ್ರಿ ಯಾಲೋಚನಲನ್
ದನ ಭುಕ್ತಿಯೆಡಲ ತಲ್ಲಿಯು
ನನದಗು ಕುಲಕಾಂತ ಯುಂಡ ನಗುನುರ ಸುಮತೀ

ಅನುವಾದ : ಕೆಲಸವ ಮಾಡುವೆಡೆ ದಾಸಿ
ಕೆಲವಾಲೋಚನೆಗೆ ಮಂತ್ರಿ ಅನುಭವಿಸೆ ರಂಭೆ
ಮೆಲ್ಲುವ ಕಾಲಕೆ ತಾಯಿಯು
ಕುಲಕಾಂತೆ ಆ ತೆರನಿರುವಳು ತಿಳಿಯೈ ಸುಮತೀ

ತಾತ್ಪರ್ಯ : ಮನೆಯ ಕೆಲಸಗಳನ್ನು ಮಾಡುವಾಗ, ಸೇವಕಿಯಂತೆಯೂ, ಸಂಸಾರಿಕ ವಿಷಯಗಳನ್ನು ಆಲೋಚಿಸುವಾಗ ಮಂತ್ರಿಯಂತೆಯೂ, ಶಯ್ಯಾಗೃಹದಲ್ಲಿ ರಂಭೆಯಂತೆಯೂ, ಊಟ ಬಡಿಸುವ ಕಾಲಕ್ಕೆ ತಾಯಿಯಂತೆಯೂ, ಹೆಂಡತಿಯು ಸಹಕರಿಸುತ್ತಾಳೆ.

71. ಮೂಲ : ಪರನಾರೀ ಸೋದರುಡ್ಡೈ
ಪರಧನಮುಲ ಕಾಸಪಡಕ ಪರುಲಕು ಹಿತುಡ್ಡೈ
ಪರುಲು ತನಬೊಗಡ ನೆಗಡಕ
ಪರುಲಲಗಿನ ನಲುಗನತಡು ಪರಮುಡು ಸುಮತೀ

ಅನುವಾದ : ಪರನಾರಿ, ಸೋದರ ನೆನಿಸಿ
ಪರಧನಕೆ ಆಸೆ ಪಡದೆಲೆ ಪರಹಿತವ ಬಯಸಿ
ಪರರ ಹೊಗಳಿಕೆಗೆ ಹಿಗ್ಗದೆ
ಪರರು ಮುನಿದರೆ ಮುನಿಯದವ ಪರಮನು ಸುಮತೀ

ತಾತ್ಪರ್ಯ : ಪರನಾರಿಯನ್ನು ತನ್ನ ಸೋದರಿಯಂತೆ ಕಂಡು, ಪರರ ಹಣಕ್ಕೆ ಆಸೆ ಪಡದೆ, ಇತರರಿಗೆ ಒಳ್ಳೆಯದನ್ನು ಬಯಸಿ, ಇತರರು ತನ್ನನ್ನು ಹೊಗಳಿದರೆ ಅದಕ್ಕೆ ಹಿಗ್ಗದೆ, ಇತರರು ಮುನಿದರೆ ತಾನು ಕೋಪಗೊಳ್ಳದೆ ನಡೆಯುವವನು ಪರಮ ಜ್ಞಾನಿ.

72. ಮೂಲ : ಪರಸತುಲ ಗೋಷ್ಠಿನುಂಡಿನ
ಪುರುಷುಡು ಗಾಂಗೇಯುಡ್ಡೈನ ಭುವಿನಿಂದ ಪಡುನ್
ಪರಸತಿ ಸುಶೀಲ ಯ್ಯೈನನು
ಒರು ಸಂಗತಿಯುನ್ನನಿಂದ ಪಾಲಗು ಸುಮತೀ

ಅನುವಾದ : ಪರ ಸತಿಯು ಗೋಷ್ಠಿಯೊಳಿರೆ
ಪುರುಷ ಗಾಂಗೇಯನಿರಲಿ ಭುವಿನಿಂದೆಗೊಳುವ
ಪರಸತಿ ಸುಶೀಲೆಯಾದರು
ಪರ ಪುರುಷನ ಸಂಗದೊಳಿರೆ ನಿಂದೆಯೆ ಸುಮತೀ

ತಾತ್ಪರ್ಯ : ಸದಾ ಇತರೆ ಹೆಂಗಸರ ಸಂಗದಲ್ಲಿದ್ದರೆ ಅವನು ಭೀಷ್ಮನಂತವನಾದರೂ ನಿಂದೆಯ ಪಾಲಾಗುತ್ತಾನೆ. ಅಂತೆಯೇ ಒಬ್ಬರ ಹೆಂಡತಿ ಸುಶೀಲೆಯಾಗಿದ್ದರೂ ಪರ ಪುರುಷನ ಜತೆಯಲ್ಲಿದ್ದರೆ ನಿಂದೆಗೆ ಗುರಿಯಾಗುತ್ತಾಳೆ.

73. ಮೂಲ : ಪರುನಾತ್ಮದಲಚು ಸತಿವಿಡು
ಮರುಮಾಟಲು ಪಲುಕು ಸುತುಲ ಮನ್ನಿಂಪಕುಮೀ
ವೆರಸೆರುಗನಿ ಭಟುನೇಲಕು
ತರಚುಗ ಸತಿ ಗವಯುಬೋಕು ತಗದುರ ಸುಮತೀ

ಅನುವಾದ : ಪರರ ನೆನೆವ ಸತಿಯನು ತೊರೆ
ಮರುಮಾತ ನುಡಿವ ಸುತರನು ಮನ್ನಿಸದಿರು ನೀ
ಪೊರೆಯದೆ ಹೆದರದ ಭಂಟನ
ಮೀರಿಮಿತಿ ಸತಿಯಲಿ ಕೂಟ ತಗದೈ ಸುಮತೀ

ತಾತ್ಪರ್ಯ : ಸದಾ ಇತರರ ಚಿಂತೆ ಮಾಡುವ ಹೆಂಡತಿಯನ್ನು ಬಿಡುವುದು ಒಳ್ಳೆಯದು. ಇದಿರು ಮಾತನಾಡುವ ಮಕ್ಕಳನ್ನು ದಂಡಿಸದೆ ಇರಬಾರದು. ಧಣಿಗೆ ಹೆದರದ ಸೇವಕನನ್ನು ಇರಿಸಿಕೊಳ್ಳಬಾರದು. ಅತಿಯಾಗಿ ಹೆಂಡತಿಯನ್ನು ಸೇರಬಾರದು.

74. ಮೂಲ : ಪರುಲಕು ನಿಷ್ಟಮು ಚೆಪ್ಪಕು
ಪೊರುಗಿಂಡ್ಲಕು ಪನುಲುಲೇಕ ಪೋವಕು ಎಪ್ಪುಡುನ್
ಒರುಗದಿಸಿನ ಸತಿಗವಯಕು
ವೆರಿಗಿಯು ಬಿರುಸೈನಹಯಮು ನೆಕ್ಕಕು ಸುಮತೀ

ಅನುವಾದ : ಪರರಿಗೆ ಇಷ್ಟವ ಅರುಹದೆ
ಪರರ ಮನೆಗೆ ಕೆಲಸವಿಲ್ಲದೆ ಹೋಗದಿರು ಸದಾ
ಪರರು ಪಡೆದ ಸತಿ ಪಡೆಯದೆ
ಅರಿತು ಬಿರುಸಾದ ಕುದುರೆಯ ಏರದೆ ಸುಮತೀ

ತಾತ್ಪರ್ಯ : ತನ್ನ ಮನೋ ಇಂಗಿತವನ್ನು ಇತರರಿಗೆ ತಿಳಿಸಬಾರದು. ಕೆಲಸವಿಲ್ಲದೆ ಇತರರ ಮನೆಗೆ ಹೋಗಬಾರದು. ಪರರು ಹೊಂದಿದ ಹೆಂಡತಿಯನ್ನು ಹೊಂದಬಾರದು. ತಿಳಿದೂ ತಿಳಿದೂ ಬಿರುಸಾದ ಕುದುರೆಯ ಸವಾರಿ ಮಾಡಬಾರದು.

75. ಮೂಲ : ಪರ್ವಮುಲ ಸತುಲ ಗವಯಕು
ಊರ್ವೀಶ್ವರು ಕರುಣ ನಮ್ಮಿ ಯುಬ್ಬಕು ಮದಿಲೋ
ಗರ್ವಿಂಪ ನಾಲಿ ಬೆಂಚಕು
ನಿರ್ವಹಣಮು ಲೇನಿ ಚೋಟ ನಿಲುವಕು ಸುಮತೀ

ಅನುವಾದ : ಪರ್ವದಲಿ ಸತಿಯ ಹೊಂದದೆ
ಊರ್ವೀಶ್ವರ ಕರುಣೆ ನಂಬಿ ಹಿಗ್ಗದೆ ಮನದೊಳ್
ಗರ್ವಿಸೆ ಸತಿಯ ಬೆಳಸದಿರು
ನಿರ್ವಹಣವಿಲ್ಲದೆಡೆಯಲಿ ನಿಲ್ಲದೆ ಸುಮತೀ

ತಾತ್ಪರ್ಯ : ಪರ್ವಕಾಲಗಳಲ್ಲಿ ಸತಿಯನ್ನು ಹೊಂದಬಾರದು. ಪರಮಾತ್ಮನ ಕರುಣೆ ತನಗಿದೆ ಎಂದು ಗರ್ವಿಸಬಾರದು. ಹೆಂಡತಿಯನ್ನು ಗರ್ವ ಪಡುವಂತೆ ಬೆಳೆಸಬಾರದು. ಜೀವನ ಸಾಗಿಸಲಾಗದ ಸ್ಥಳದಲ್ಲಿ ವಾಸ ಮಾಡಬಾರದು.

76. ಮೂಲ : ಪಲುದೋಮಿ ಸೇಮು ವಿಡಿಯಮು
ತಲಗಡಿಗಿನ ನಾಟನಿದ್ರ ತರುಣುಲ ತೋಡನ್
ಬೊಲಯಲುಕನಾಟಿ ಕೂಟಮಿ
ವೆಲಯಂತನಿ ಚೆಪ್ಪರಾದು ವಿನರಾ ಸುಮತೀ

ಅನುವಾದ : ಹಲ್ಲುಜ್ಜಿ ಜಗಿದ ವೀಳಯ
ತಲೆತೊಳೆದ ದಿನದ ನಿದ್ರೆ ತರುಣಿಯ ಸಂಗಡ
ಬಲು ಪ್ರಣಯ ಕಲಹ ರಮಿಸು
ಬೆಲೆ ಇಷ್ಟೆಂದು ಅರುಹಬರದು ಕೇಳೈ ಸುಮತೀ

ತಾತ್ಪರ್ಯ : ಹಲ್ಲುಜ್ಜಿ ಬಾಯಿ ತೊಳೆದು ಜಗಿವ ತಾಂಬೂಲ, ತಲೆಗೆ ಸ್ನಾನ ಮಾಡಿದ ದಿನದ ನಿದ್ರೆ, ತರುಣಿಯಲ್ಲಿ ಅತಿಯಾದ ಪ್ರಣಯ ಕಲಹದಿಂದ ರಮಿಸುವುದು, ಇವುಗಳ ಬೆಲೆಯನ್ನು ಇಷ್ಟೆಂದು ಹೇಳಲಾಗದು.

77. ಮೂಲ : ಪಾಟಿರುಗನಿ ಪತಿಕೊಲುವುನು
ಕೂಟಂಬುನ ಕೆರುಕಪಡನಿ ಕೋಮಲಿ ರತಿಯುನ್
ಬೇಟಿತ್ತುಜೇಯಬು ಜೆಲಿಮಿಯು
ನೇಟಿಕಿನೆದುರೀದಿನಟ್ಟು ಲೆನ್ನರ ಸುಮತೀ

ಅನುವಾದ : ಕಷ್ಟವ ನರಿಯದ ಧಣಿ ಸೇವೆ
ಕೂಟವನು ಅರಿಯದೆ ಇರುವ ಕೋಮಲೆ ರತಿಯು
ಕೆಟ್ಟವನ ಜತೆ ಸ್ನೇಹವು
ಓಟದ ಹೊಳೆಯಲ್ಲಿ ಇದಿರು ಈಸದು ಸುಮತೀ

ತಾತ್ಪರ್ಯ : ಸೇವಕನ ಕಷ್ಟವನ್ನು ಅರ್ಥಮಾಡಿಕೊಳ್ಳದ ಧಣಿಯ ಸೇವೆ, ಕೂಟವನ್ನು ತಿಳಿದು ಸಹಕರಿಸದ ಕೋಮಲೆಯಲ್ಲಿ ರತಿಯು, ಕೆಟ್ಟವನ ಸ್ನೇಹ, ಇವು ಪ್ರವಾಹದಲ್ಲಿ ಇದಿರು ಈಜಿನಂತೆ ಕಷ್ಟತರವಾದವುಗಳು.

78. ಮೂಲ : ಪಾಲನುಗಲಸಿನ ಜಲಮುನು
ಪಾಲ ವಿಧಂಬುನನೆಯುಂಡು ಬರಿಕಿಂಪಂಗಾ
ಪಾಲ ಚೆವಿ ಜೆರಚುಗಾವುನ
ಬಾಲಸುಡಗುವಾನಿ ಬೊಂದು ವಲದುರ ಸುಮತೀ

ಅನುವಾದ : ಹಾಲಿನಲಿ ಕಲೆತ ಜಲವದು
ಹಾಲನೆ ಹೋಲುತ ಇರುವುದು ಆದರೆ ಪರಿಕಿಸೆ
ಹಾಲಿನ ರುಚಿಯು ಕೆಡಿಸಿಪುದು,
ಬಾಲಿಶ ನೊಡನಾಟ ತಗದು ತಿಳಿಯ್ಯ ಸುಮತೀ

ತಾತ್ಪರ್ಯ : ಹಾಲಿನಲ್ಲಿ ಕಲೆತ ನೀರು, ಹಾಲಿನಂತೆಯೆ ಕಂಡರೂ ಪರೀಕ್ಷಿಸಿದಾಗ ಹಾಲಿನ ರುಚಿ ಕೆಟ್ಟುಹೋಗಿರುತ್ತದೆ. ಅದರಂತೆ ಕೆಟ್ಟವರ ಸಹವಾಸದಿಂದ ಒಳ್ಳೆಯವರ ಗುಣ ಕೆಡುತ್ತದೆ ಯಾದ್ದರಿಂದ, ಕೆಟ್ಟವರ ಸಹವಾಸ ಮಾಡಬಾರದು.

79. ಮೂಲ : ಪಾಲಶುನಕೈನ ಯಾಪದ
ಜಾಲಿಂಬಡಿ ತೀರ್ಪದಗದು ಸರ್ವಜ್ಞನಕುನ್
ತೇಲಗ್ನಿಬಡಗ ಬಟ್ಟಿನ
ಮೇಲೆರುಗನೆ ಮೀಟುಗಾಕ ಮೋದಿನಿ ಸುಮತೀ

ಅನುವಾದ : ಮೂರ್ಖಂಗೊದಗಿದ ಕಷ್ಟವ
ಮರುಕದಿ ಸಲಹದಿರಬೇಕು ಸರ್ವಜ್ಞನಿಗಂ
ಚೇಳ್ ಅಗ್ನಿಯಿಂದ ರಕ್ಷಿಸೆ
ಸ್ಮರಿಸದುಪಕೃತಿ ಕುಟುಕುವುದು ಧರೆಯಲಿ ಸುಮತೀ

ತಾತ್ಪರ್ಯ : ಸರ್ವಜ್ಞನೆ ಆಗಲಿ ಮೂರ್ಖನಿಗೆ ಕಷ್ಟ ಬಂದಾಗ ಮರುಕಗೊಂಡು ಅವನ ಸಹಾಯಕ್ಕೆ ಹೋಗಬಾರದು. ಅದು ಹೇಗೆಂದರೆ, ಬೆಂಕಿಯಲ್ಲಿ ಬಿದ್ದ ಚೇಳನ್ನು ಹಿಡಿದು ರಕ್ಷಿಸಿದರೆ, ಅದು ತನಗಾದ ಉಪಕಾರವನ್ನು ಸ್ಮರಿಸದೆ ಮರುಕ್ಷಣವೇ ಕುಟುಕುವುದು. ಆದ್ದರಿಂದ ಮೂರ್ಖನಿಗೆ ಒಳ್ಳೆಯದನ್ನು ಮಾಡಿದರೂ, ಅವನಿಂದ ಕೇಡು ತಪ್ಪದು.

80. ಮೂಲ : ಪಿಲುವನಿ ಪನುಲಕು ಬೋವುಟ
ಕಲಯನಿ ಸತಿರತಿಯು ರಾಜು ಗಾನನಿ ಕೊಲುವುನ್
ಬಿಲುವನಿ ಪೇರಂಟಂಬುನು
ವಲವನಿ ಚೆಲಿಮಿಯುನುಚೇಯ ವಲದುರ ಸುಮತೀ

ಅನುವಾದ : ಕರೆಯದ ಕೆಲಸಕೆ ನಡೆವುದು
ಬೆರೆಯದ ಸತಿರತಿ ಅರಸನು ಕಾಣದ ಓಲಗ
ಕರೆಯದೆ ಹೋಗುವ ಮದುವೆಯು
ಬೆರೆಯದ ನೇಹವದು ಬೇಡ ನಿಜದೊಳು ಸುಮತೀ

ತಾತ್ಪರ್ಯ : ಕರೆಯದೆ ಕೆಲಸ ಕಾರ್ಯಗಳಿಗೆ ಹೋಗಬಾರದು. ಸಹಕರಿಸದ ರತಿಕೂಟ ಸುಖವಿಲ್ಲ. ಅರಸನ ವೀಕ್ಷಣೆ ಇಲ್ಲದ ಸೇವೆಗೆ ಹೋಗಬಾರದು. ಕರೆಯದೆ ಮದುವೆಗೆ ಹೋಗಬಾರದು. ಹೊಂದಾಣಿಕೆ ಇಲ್ಲದೆ ಸ್ನೇಹ ಮಾಡಬಾರದು.

81. ಮೂಲ : ಪುತ್ರೋತ್ಸಾಹಮು ತಂಡ್ರಿಕಿ
ಪುತ್ರುಡು ಜನ್ಮಿಂಚಿನಪುಡೆ ಪುಟ್ಟದು ಜನು ಲಾ
ಪುತ್ರುನಿ ಕನುಗೊನಿ ಪೊಗಡಗ
ಬುತ್ರೋತ್ಸಾಹಂಬು ನಾಡು ಪೊಂದುರ ಸುಮತೀ

ಅನುವಾದ : ಪುತ್ರೋತ್ಸಾಹವು ತಂದೆಗೆ
ಪುತ್ರನು ಜನಿಸಿದ ಸಮಯವೆ ಬಾರದು ಜನರಾ
ಪುತ್ರನ ಕಾಣುತೆ ಹೊಗಳಲು
ಪುತ್ರೋತ್ಸಾಹವನು ಅಂದು ಹೊಂದುವ ಸುಮತೀ

ತಾತ್ಪರ್ಯ : ತಂದೆಗೆ ಮಗನು ಹುಟ್ಟಿದ ಸಂದರ್ಭದಲ್ಲಿ ಆಗುವ ಸಂತೋಷಕ್ಕಿಂತ ಜನರು ಆ ಪುತ್ರನನ್ನು ನೋಡಿ ಹೊಗಳುವುದನ್ನು ಕಂಡಾಗ ತಂದೆಗೆ ನಿಜವಾದ ಆನಂದ ಉಂಟಾಗುತ್ತದೆ. ಅದುವೆ ನಿಜವಾದ ಪುತ್ರೋತ್ಸಾಹ.

82. ಮೂಲ : ಪುರಿಕನಿ ಪ್ರಾಣಮು ಕೋಮಟಿ
ವರಿಕಿನಿ ಪ್ರಾಣಂಬು ನೀರು ವಸುಮತಿ ಲೋನನ್
ಗರಿಕಿನಿ ಪ್ರಾಣಮು ತೊಂಡಮು
ಸಿರಿಕಿನಿ ಪ್ರಾಣಂಬು ಮಗುವ ಸಿದ್ಧಮು ಸುಮತೀ

ಅನುವಾದ : ಪುರಿಗೆ ಪ್ರಾಣವು ಕೋಮಟಿ
ತರಿಗೆ ಪ್ರಾಣವದು ಜಲವು ವಸುಧೆಯೊಳಗುಂ
ಕರಿಗೆ ಪ್ರಾಣವು ಸೊಂಡಿಲು
ಸಿರಿಗೆ ಪ್ರಾಣವು ವನಿತೆಯು ಸಿದ್ಧವೊ ಸುಮತೀ

ತಾತ್ಪರ್ಯ : ಊರಿಗೆ ವ್ಯಾಪಾರಿ ಪ್ರಾಣವಿದ್ದಂತೆ. ತರಿಪೈರಿಗೆ ನೀರು ಪ್ರಾಣಾಧಾರ. ಆನೆಗೆ ಸೊಂಡಿಲು ಪ್ರಾಣಕ್ಕೆ ಸಮಾನ. ಅದರಂತೆ ಸ್ತ್ರೀಯು ಐಶ್ವರ್ಯಕ್ಕೆ ಪ್ರಾಣ ಸಮಾನಳು.

83. ಮೂಲ : ಪುಲಿಪಾಲುದೆಚ್ಚಿ ಇಚ್ಚಿನ
ನಲವಡಗಾ ಗುಂಡೆ ಕೋಸಿ ಯರಚೇ ನಿಡಿನನ್
ದಲಪೊಡುಗು ಧನಮು ಪೋಸಿನ
ಪೆಲಿಯಾಲಿಕಿಗೂರ್ಮಿಲೇದು ವಿನುರಾ ಸುಮತೀ

ಅನುವಾದ : ಹುಲಿ ಹಾಲನು ತಂದೀಯಲು
ಒಲವಿಂದ ಹೃದಯವ ಕಡಿದು ಕೈಯೊಳ್ ಇಡಲುಂ
ತಲೆಯುದ್ದ ಹಣವ ಸುರಿಯಲು
ಬೆಲೆವೆಣ್ಣಿಗೆ ಒಲವೆ ಇಲ್ಲ ಕೇಳೆಲೊ ಸುಮತೀ

ತಾತ್ಪರ್ಯ : ಸೂಳೆಯು ಹುಲಿಯ ಹಾಲನ್ನು ಕೇಳಿದಾಗ ಕಷ್ಟನಷ್ಟಗಳನ್ನೆದುರಿಸಿ ಆಕೆಗೆ ಹುಲಿಯ ಹಾಲನ್ನು ತಂದು ಕೊಟ್ಟರೂ ಪ್ರೀತಿಯಿಂದ ತನ್ನ ಹೃದಯವನ್ನು ಕಡಿದು ಅವಳ ಕೈಯಲ್ಲಿ ಇಟ್ಟರೂ, ಅವಳ ಎತ್ತರ ಹಣ ಸುರಿದರೂ ಅವಳಿಗೆ ನಿಜವಾದ ಪ್ರೀತಿ ಇರುವುದಿಲ್ಲ.

84. ಮೂಲ : ಪೆಟ್ಟಿನ ದಿನಮುಲ ಲೋಪಲ
ನಟ್ಟಡವುಲಕೈನವಚ್ಚು ನಾನಾರ್ಥಮುಲುನ್
ಬೆಟ್ಟನಿದಿನಮುಲ ಕನಕಪು
ಗಟ್ಟೆಕ್ಕಿನ ನೇಮಿಲೇದು ಗದರಾ ಸುಮತೀ

ಅನುವಾದ : ಇಟ್ಟಾದಾನದ ದೆಸೆಯಿಂ
ದಟ್ಟಡವಿ ಹೊಕ್ಕರು ಸಿಕ್ಕು ನಾನಾರ್ಥಗಳುಂ
ಕೊಟ್ಟಿಟ್ಟಿರದೆ ಕನಕಮಯ
ಬೆಟ್ಟವ ಹತ್ತಲುಸಿಗದದು ತೃಣಮುಂ ಸುಮತೀ

ತಾತ್ಪರ್ಯ : ದಾನವು ಪುಣ್ಯ ಸಂಪಾದನೆಗೆ ಮೂಲ. ಪುಣ್ಯವಿದ್ದರೆ ಕಾಡಿಗೆ ಹೋಗಿ ನೆಲೆಸಿದರೂ ಸುಖ ಸೌಖ್ಯ ಸಿಗುವುವು. ಆದರೆ ದಾನ ಮಾಡಿ ಪುಣ್ಯ ಸಂಪಾದಿಸದಿದ್ದರೆ, ಬಂಗಾರದ ಬೆಟ್ಟವನ್ನು ಹತ್ತಿದರೂ ಸಹ ಏನೇನೂ ಸಿಗುವುದಿಲ್ಲ.

85. ಮೂಲ : ಪೊರುಗುನ ಪಗವಾಡುಂಡಿನ
ನಿರವೊಂದಗವ್ರಾತಕಾಡೆ ಯೇಲಿನ ಯ್ಯೆನನ್
ಧರಕಾಪು ಕೊಂಡೆಮಾಡಿನ
ಗರಣಾಲಕು ಬ್ರತುಕುಲೇದು ಗದರಾ ಸುಮತೀ

ಅನುವಾದ : ನೆರೆಯುಲಿ ವೈರಿಯು ಇದ್ದರೆ
ಸ್ಥಿರದಲಿ ಬರಹಗಾರನರಸ ತಾನೇ ಆದೊಡೆ
ಧರೆ ರೈತ ಚಾಡಿ ಹೇಳಲು
ಕರಣಿಕ ಜೀವಿಸುವುದೆಂತು ಹೇಳೈ ಸುಮತೀ

ತಾತ್ಪರ್ಯ : ಕರಣಿಕನಿಗೆ (ಗ್ರಾಮಲೆಕ್ಕಿಗನಿಗೆ) ನೆರೆಯುಲ್ಲಿ ವೈರಿ ಇದ್ದರೆ, ಅಧಿಕಾರಿಯು ತಾನೇ ಬರಹಗಾರನಾದರೆ, ರೈತನು ಗ್ರಾಮ ಲೆಕ್ಕಿಗನ ಮೇಲೆ ಚಾಡಿಯನ್ನು ಹೇಳಿದರೆ, ಅವನು (ಲೆಕ್ಕಿಗನು) ಜೀವನ ಸಾಗಿಸುವ ಬಗೆ ಹೇಗೆ ?

86. ಮೂಲ : ಬಂಗಾರು ಕುದುವ ಬೆಟ್ಟಕು
ಸಂಗರಮುನ ಪಾರಿ ಬೋಕು ಸರಸುಡವ್ವೆನನ್
ಅಂಗಡಿ ವೆಚ್ಚಮುಲಾಡಕು
ವೆಂಗಲಿ ತೋ ಚೆಲಿಮಿ ವಲದು ವಿನುರಾ ಸುಮತೀ

ಅನುವಾದ : ಬಂಗಾರವ ಅಡವಿಡದಿರು
ಸಂಗರದಲಿ ಓಡಬೇಡ ಸರಸನೆ ಆದೊಡೆ
ಅಂಗಡಿ ಸಾಲವ ಮಾಡದೆ
ಪೆಂಗನ ನೇಹವ ಬಯಸದೆ ಕೇಳೈ ಸುಮತೀ

ತಾತ್ಪರ್ಯ : ಬಂಗಾರವನ್ನು ಅಡವಿಡಬಾರದು. ಆದರಿಂದ ಬಡ್ಡಿಯು ಬೆಳೆದು ಬಂಗಾರ ಕೈ ಬಿಟ್ಟು ಹೋಗುತ್ತದೆ. ಸಂಗ್ರಾಮದಲ್ಲಿ ಓಡಿಹೋಗಬಾರದು. ಬುದ್ಧಿವಂತನಾದರೆ ಅಂಗಡಿಯಲ್ಲಿ ಸಾಲ ಮಾಡಬಾರದು. ಅಂತೆಯೇ ಮೂರ್ಖನಲ್ಲಿ ಸ್ನೇಹ ಬಯಸಬಾರದು.

87. ಮೂಲ : ಬಲವಂತುಡ ನಾಕೇಮನಿ
ಪಲುವುರತೊ ನಿಗ್ರಹಿಂಚಿ ಪಲುಕುಟ ಮೇಲಾ
ಬಲವಂತಮೈನ ಸರ್ಪಮು
ಚಲಿ ಚೀಮಲ ಚೇತಜಿಕ್ಕಿ ಚಾವದೆ ಸುಮತೀ

ಅನುವಾದ : ಬಲ್ಲಿದ ತನಗೇನೆನುತಲಿ
ಬಲುಗರ್ವಿಸಿ ಪರರ ತೆಗಳಿ ನುಡಿಯುವುದೇತಕೆ
ಬಲವಂತವಾದ ಸರ್ಪವು
ಕೊಳ್ಳಿರುವೆಗೆ ಸಿಕ್ಕಿಬಿದ್ದು ಸಾಯದೆ ಸುಮತೀ

ತಾತ್ಪರ್ಯ : ಶಕ್ತಿವಂತ ತಾನು, ತನಗೇನು ಎನ್ನುತ ಗರ್ವದಿಂದ ಇತರರನ್ನು ಧಿಕ್ಕರಿಸಿ ಮಾತನಾಡಬಾರದು. ಬಲಯುತವಾದ ಸರ್ಪವು ಕೊಳ್ಳಿರುವೆಗಳಿಗೆ ಸಿಕ್ಕಿ ಅವುಗಳ ಕಡಿತದಿಂದ ಸಾಯುವುದಿಲ್ಲವೆ.

88. ಮೂಲ : ಮಂಡಲಪತಿ ಸಮುಖಂಬುನ
ಮೆಂಡೈನ ಪ್ರಧಾನಿಲೇಕ ಮೆಲಗುಟಯೆಲ್ಲನ್
ಗೊಂಡಂತ ಮದಪುಟೇನುಗು
ತೊಂಡಮು ಲೇಕುಂಡಿನಟ್ಲು ದೋಚುರ ಸುಮತೀ

ಅನುವಾದ : ಮಂಡಲಪತಿ ಸಮ್ಮುಖದಿ
ಗಂಡು ಪ್ರಧಾನಿ ಇರದಿರೆ ನಡೆಯುವುದೆಲ್ಲವು
ಗುಡ್ಡದ ಗಾತ್ರದ ಮದಕರಿಗೆ
ಸೊಂಡಿಲು ಇಲ್ಲದಿರುವಂತೆ ತೋರ್ಪುದು ಸುಮತೀ

ತಾತ್ಪರ್ಯ : ಬೆಟ್ಟದ ಗಾತ್ರದ ಮದಿಸಿದ ಆನೆಗೆ ಸೊಂಡಲು ಇಲ್ಲದಿದ್ದರೆ, ಹೇಗೆ ಶೋಭಿಸುವುದಿಲ್ಲವೋ, ಅದೇ ರೀತಿ ಮಂಡಲಾಧಿಕಾರಿಯು ಹತ್ತಿರ ಸಮರ್ಥನಾದ ಪ್ರಧಾನಿ ಇಲ್ಲದಿದ್ದರೆ ಕೆಲಸಗಳೆಲ್ಲವೂ ಸರಿಯಾಗಿ ನಡೆಯುವುದಿಲ್ಲ.

89. ಮೂಲ : ಮಂತ್ರಿಗಲವಾನಿ ರಾಜ್ಯಮು
ತಂತ್ರಮುಚಡಕುಂಡನಿಲುಚು ಧರಚಾಗ ಧರಲೋ
ಮಂತ್ರಿ ವಿಹೀನುನಿ ರಾಜ್ಯಮು
ಜಂತ್ರಮು ಕೀಲೂಡಿನಟ್ಲು ಜರುಗದು ಸುಮತೀ

ಅನುವಾದ : ಮಂತ್ರಿ ಇರುವವನ ರಾಜ್ಯವು
ತಂತ್ರ ಕೆಡದಂತೆ ನಡೆವುದು ವಿಶೇಷ ಭುವಿಯೊಳ್
ಮಂತ್ರಿ ವಿಹೀನನ ರಾಜ್ಯವು
ಯಂತ್ರದ ಬೆಣೆ ಕಳಚಿದಂತೆ ನಡೆಯದು ಸುಮತೀ

ತಾತ್ಪರ್ಯ : ಮಂತ್ರಿಯನ್ನು ಹೊಂದಿರುವ ಅರಸನ ರಾಜ್ಯದಲ್ಲಿ ರಾಜ ಕಾರ್ಯಗಳು ಕೆಡದಂತೆ ಸರಿಯಾಗಿ ನಡೆಯುತ್ತವೆ. ಮಂತ್ರಿಯೆ ಇಲ್ಲದ ಅರಸದ ರಾಜ್ಯದಲ್ಲಿ, ಯಂತ್ರದಲ್ಲಿ ಕೀಲು ಕಳಚಿಕೊಂಡು ಯಂತ್ರವು ನಡೆಯದೆ ನಿಂತ ಹಾಗೆ, ಯಾವ ಕೆಲಸವೂ ಸರಿಯಾಗಿ ನಡೆಯುವುದಿಲ್ಲ.

90. ಮೂಲ : ಮದಿನೊಕನಿ ವಲಚಿಯುಂಡಗ
ಮದಿ ಚೆಡಿಯೊಕ ಕ್ರೂರವಿಟುಡು ಮಾನಕ ತಿರುಗುನ್
ಅದಿ ಚಿಲುಕ ಪಿಲ್ಲಿಪಟ್ಟಿನ
ಚದುವುನೆ ಯಾ ಪಂಜರಮುನ ಜಗತಿನಿ ಸುಮತೀ

ಅನುವಾದ : ಮಂಡೆಯಲೊಬ್ಬನ ನೆನೆದಿರೆ
ಬಿಡದೆಲೆ ಮತ್ತೊಬ್ಬವಿಟ ಹಿಂದೆ ತಿರುಗುವನು
ಬಿಡದೆ ಗಿಳಿಯು ಬೆಕ್ಕುಹಿಡಿಯೆ
ನುಡಿವುದೆ ಪಂಜರದೊಳಿರುತ ಧರೆಯೊಳ್ ಸುಮತೀ

ತಾತ್ಪರ್ಯ : ಪಂಜರದಲ್ಲಿರುವ ಗಿಳಿಯುನ್ನು ಬೆಕ್ಕು ಹಿಡಿದಾಗ ಅದು ಮಾತನಾಡಲಾಗದು. ಅದೇ ರೀತಿ ಹೆಂಗಸು ಒಬ್ಬ ಗಂಡಸನ್ನು ಮನಸ್ಸಿನಲ್ಲಿ ಸದಾ ಚಿಂತಿಸುತ್ತಿರಲು, ಮತ್ತೊಬ್ಬ ವಿಟನು ಹಿಂದಿಂದೆ ತಿರುಗಿದರೂ ಸಹ ಅವಳು ವಶವಾಗುವುದಿಲ್ಲ.

91. ಮೂಲ : ಮಾಟಕು ಪ್ರಾಣಮು ಸತ್ಯಮು
ಕೋಟಕು ಪ್ರಾಣಂಬುಸುಭಟ ಕೋಟಿಧರಿತ್ರಿನ್
ಬೋಟಿಕಿ ಪ್ರಾಣಮು ಮಾನಮು
ಚೀಟಿಕಿ ಪ್ರಾಣಂಬುವ್ರಾಲು ಸಿದ್ಧಮು ಸುಮತೀ

ಅನುವಾದ : ಮಾತಿಗೆ ಜೀವವು ಸತ್ಯವು
ಬತ್ತೇರಿಗೆ ಜೀವವು ಸುಭಟ ಕೋಟಿಯು ಭುವಿಯೊಳ್
ಸತಿಗದು ಜೀವವು ಮಾನವು
ಪತ್ರಕೆ ಜೀವವು ಸಹಿಯದು ಸಿದ್ಧವೊ ಸುಮತೀ

ತಾತ್ಪರ್ಯ : ಆಡುವ ಮಾತಿನಲ್ಲಿ ಸತ್ಯಾಂಶವಿದ್ದರೆ ಅದಕ್ಕೆ ಪ್ರಾಣ ಬಂದಂತಿರುತ್ತದೆ. ಕೋಟಿ ಕೊತ್ತಲಗಳಿಗೆ ಸುಸಜ್ಜಿತವಾದ ಸೈನಿಕರು ಪ್ರಾಣದಂತೆ ಇರುತ್ತಾರೆ. ನಾರಿಗೆ ಮಾನವು ಪ್ರಾಣಕ್ಕೆ ಸಮಾನ. ಪತ್ರಕ್ಕೆ ಸಹಿ ಹಾಕದಿದ್ದರೆ ಅದಕ್ಕೆ ಬೆಲೆಯಿಲ್ಲ. ಆದ್ದರಿಂದ ಸಹಿಯೇ ಪತ್ರಕ್ಕೆ ಪ್ರಾಣವು.

92. ಮೂಲ : ಮಾನಘನುಡಾತ್ಮಧೃತಿಚೆಡಿ
ಹೀನುಂಡಗುವಾನಿನಾಶ್ರ ಯಿಂಚುಟ ಯೆಲ್ಲನ್
ಮಾನೆಡು ಜಲಮುಲ ಲೋಪಲ
ನೇನುಗು ಮಯಿದಾಚಿನಟ್ಟು ಲೆರುಗುಮು ಸುಮತೀ

ಅನುವಾದ : ಮಾನಘನನಾತ್ಮಧೃತಿಗೆಡೆ
ಹೀನನ ಆಶ್ರಯ ಪಡೆಯುವ ಪರಿಯದು ಎಲ್ಲವು
ಮಾನದಲಿಹ ಜಲದೊಳಗಡೆ
ಆನೆಯು ಕಾಯ ಮುಳುಗಿಸುವ ತೆರನದು ಸುಮತೀ

ತಾತ್ಪರ್ಯ : ಮರ್ಯಾದಸ್ಥರು ಅಧೈರ್ಯ ಹೊಂದಿ ಹೀನ ಮನುಷ್ಯರ ಆಶ್ರಯ ಪಡೆದರೆ, ಒಂದು ಸೇರು ನೀರಿನಲ್ಲಿ ಆನೆಯು ಮುಳುಗು ಹಾಕುವಂತೆ ಮಾನಭಂಗವಾಗುತ್ತದೆ.

93. ಮೂಲ : ವೆಲಿಯಾಲು ಸೇಯು ಬಾಸಲು
ವೆಲಿಯುಗ ನಗಸಾಲಿಪೊಂದು ವೆಲಮಾಲ ಚೆಲಿಮಿನ್
ಕಲಲೋನಗನ್ನ ಕಲಿಮಿಯು
ವಿಲಿಸಿತಮುಗ ನಮ್ಮರಾದು ವಿನುರಾ ಸುಮತೀ

ಅನುವಾದ : ಗಣಿಕೆಯು ನೀಡುವ ಭಾಷೆಯು
ಗಣಿನಲ್ ಸೊನ್ನಾರಿನೇಹ ವೆಲಮನ ಗೆಳೆತನ
ಕನಸಿನಲಿ ಕಂಡ ಸಿರಿತನ
ವ ನಂಬಬಾರದು ನಿಜದೊಳು ಆಲಿಸು ಸುಮತೀ

ತಾತ್ಪರ್ಯ : ಸೂಳೆಯು ನೀಡುವ ಭಾಷೆ, ಅಕ್ಕಸಾಲಿಗ ಮತ್ತು ವೆಲಮ ಜಾತಿಯುವರ ಸ್ನೇಹ ಕನಸಿನಲ್ಲಿ ಕಂಡ ಐಶ್ವರ್ಯ, ಇವನ್ನು ನಂಬಬಾರದು.

94. ಮೂಲ : ರಾ, ಪೊಮ್ಮನಿ ಪಿಲುವನಿಯಾ
ಭೂಪಾಲುನಿ ಗೊಲ್ವಭುಕ್ತಿ ಮುಕ್ತುಲುಗಲವೇ
ದೀಪಂಬು ಲೇನಿ ಇಂಟನು
ಚೇಪುಡಿ ಕೀಳ್ಳಾಡಿನಟ್ಲು ಸಿದ್ಧಮು ಸುಮತೀ

ಅನುವಾದ : ಬಾ ಪೋ ಗೆಂದು ಕರೆಯದಾ
ಭೂಪಾಲ ಸೇವಿಸೆ ಭುಕ್ತಿ ಮುಕ್ತಿಯು ಇಹುದೇ
ದೀಪವೇ ಇಲ್ಲದ ಮನೆಯೊಳು
ಚಪ್ಪಾಳೆಯು ಆಟದಂತೆ ತಿಳಿಯೈ ಸುಮತೀ

ತಾತ್ಪರ್ಯ : ಬಾ ಹೋಗೆಂದು ಕರೆಯದ ಧಣಿ ಸೇವೆ ಮಾಡುವುದರಿಂದ ಊಟಕ್ಕೆ ತೊಂದರೆ. ಅಲ್ಲಿಂದ ಬಿಡುಗಡೆಯಾಗುವುದಕ್ಕೂ ತೊಂದರೆ. ಅವನ ಪರಿಸ್ಥಿತಿ ಕತ್ತಲಲ್ಲಿ ಒಬ್ಬರಿಗೊಬ್ಬರು ಕೈತಟ್ಟಿ ಆಡುವ ಚಪ್ಪಾಳೆ ಆಟದಂತೆ ದಿಕ್ಕುತೋಚದೆ ಇರುತ್ತಾನೆ.

95. ಮೂಲ : ರೂಪಿಂಚಿ ಪಲಿಕಿ ಬೊಂಕಕು
ಪ್ರಾಪಗು ಚುಟ್ಟಂಬು ಕೆಗ್ಗು ಪಲುಕಕು ಮದಿಲೋ
ಗೋಪಿಂಚು ರಾಜು ಗೊಲ್ವಕು
ಪಾಪವು ದೇಶಂಬು ಸೊರಕು ಪದಿಲಮು ಸುಮತೀ

ಅನುವಾದ : ಆಧಾರ ನುಡಿಗೆ ತಪ್ಪುವೆ
ಆಧಾರ ಬಂಧುವಿಗೆ ಕೇಡು ಬಗೆಯುದೆ ಮನದೊಳ್
ರೌದ್ರ, ಅರಸನನುಪಚರಿಸದೆ
ಕ್ಷುದ್ರ, ಪ್ರದೇಶ ಸರಿಯುದೆ ಭದ್ರವೊ ಸುಮತೀ

ತಾತ್ಪರ್ಯ : ಭಾಷೆ ಕೊಟ್ಟು ಅದಕ್ಕೆ ತಪ್ಪಬಾರದು. ಆಧಾರವಾಗಿರುವ ನೆಂಟನಿಗೆ ಕೇಡನ್ನು ಬಯಸಬಾರದು. ಕೋಪಿಷ್ಠನಾದ ಅರಸನಲ್ಲಿ ಸೇವೆ ಮಾಡಬಾರದು. ಅಲ್ಪರಿರುವ ಸ್ಥಳಕ್ಕೆ ಹೋಗದೆ ಭದ್ರವಾಗಿರಬೇಕು.

96. ಮೂಲ : ಲಾವುಗಲ ವಾನಿಕಂಟೆನು
ಭಾವಿಂಪಗ ನೀತಿಪರುಡು ಬಲವಂತುಂಡೌ
ಗ್ರಾವಂಬಂತ ಗಜಂಬುನು
ಮಾವಟಿವಾಡೆಕ್ಕಿನಟ್ಲು ಮಹಿಲೋ ಸುಮತೀ

ಅನುವಾದ : ಯಾವ ಟೊಣೆಯನಿಗಿಂತ
ಭಾವಿಸಿದೊಡೆ ನೀತಿಪರನು ಬಲವಂತನವಂ
ಪರ್ವತದಂತಹ ಗಜವನು
ಮಾವಟಿಗ ನೇರುವತೆರದಿ ಮೇಧಿನಿ ಸುಮತೀ

ತಾತ್ಪರ್ಯ : ಬೆಟ್ಟದಂತಹ ಆನೆಯನ್ನು ಮಾವಟಿಗನು ಹತ್ತಿ ಕುಳಿತು ಕೊಳ್ಳುವ ಹಾಗೆ, ಕಾಯದಲ್ಲಿ ದೊಡ್ಡದಾದ ಶರೀರ ವುಳ್ಳವನಿಗಿಂತ ನೀತಿಪರನಾದವನು ಬಲವುಳ್ಳವನು.

97. ಮೂಲ : ವರದೈನ ಚೇನು ದುನ್ನಕು
ಕರುವೈನನು ಬಂಧುಜನಾಲ ಕಡಕೇಗಕುಮೀ
ಪರುಲಕು ಮರ್ಮಮುಚೆಪ್ಪಕು
ಪಿರಿಕಿಕಿ ದಳವಾಯಿ ತನಮು ಬೆಟ್ಟಕು ಸುಮತೀ

ಅನುವಾದ : ನೀರು ನಿಲುವ ಹೊಲ ಉಳದಿರು
ಬರ ಬಂದಿರೆ ಬಂಧು ಜನರ ಆಶ್ರಯಿಸದಿರೈ
ಪರರಿಗೆ ಮರ್ಮವ ಅರುಹದೆ
ಇರಿಸದೆ ದಳವಾಯಿತನವ ಹೇಡಿಗೆ ಸುಮತೀ

ತಾತ್ಪರ್ಯ : ನೀರು ನಿಲ್ಲುವಂತ ಜಾಗದಲ್ಲಿ ಉತ್ತು ಬೆಳೆ ಇಡಬಾರದು. ಬರ ಬಂದ ಕಾಲಕ್ಕೆ ಬಂಧುಗಳನ್ನು ಆಶ್ರಯಿಸಬಾರದು. ತನ್ನ ಮನೋ ಇಂಗಿತವನ್ನು ಇತರರಿಗೆ ತಿಳಿಸಬಾರದು. ಹೇಡಿಯನ್ನು ಸೇನಾಧಿಪತಿಯಾಗಿ ನಿಯಮಿಸಬಾರದು.

98. ಮೂಲ : ವರಿಪಂಟ ಲೇನಿ ಯೂರುನು
ದೊರಯುಂಡನಿಯೂರು ತೋಡು ದೊರಕನಿ ತೆರುವುನ್
ಧರನು ಪತಿಲೇನಿ ಗೃಹಮುನು
ನರಯಂಗಾ ರುದ್ರಭೂಮಿ ಯನದಗು ಸುಮತೀ

ಅನುವಾದ : ತರಿಬೆಳೆ ಇಲ್ಲದ ಊರದು
ಅರಸನೆ ಇಲ್ಲದ ಪುರವದು ಜತೆ ಸಿಗದ ಮಾರ್ಗವು
ಧರೆಯಲಿ ಪತಿ ಇಲ್ಲದ ಗೃಹ
ಪರಿಗಣಿಸಲು ರುದ್ರಭೂಮಿ ಅದುವೈ ಸುಮತೀ

ತಾತ್ಪರ್ಯ : ಬತ್ತ ಬೆಳೆಯದ ಊರು, ಅರಸನಿಲ್ಲದ ರಾಜ್ಯ, ಜತೆಯಿಲ್ಲದೆ ನಡೆಯುವ ಮಾರ್ಗ, ಗಂಡನಿಲ್ಲದ ಮನೆ, ಇವುಗಳು ಸ್ಮಶಾನದಂತೆ ಕಾಣುತ್ತವೆ.

99. ಮೂಲ : ವಲರಸಮು ಸತಿಕಿ ಬುಟ್ಟಕ
ಒಲಿಮಿನಿದಮುಕಿಂಚಿವಿಟುಡು ಪೈಕೊನುಟೆಲ್ಲನ್
ಮುಲಯುಜಮುಸಾನಮೀದನು
ಜಲಮುಂಚಕತೀಸಿನಟ್ಟೆ ಚೆಂದಮು ಸುಮತೀ

ಅನುವಾದ : ಒಲರಸವು ಸತಿಗೆ ಒಸರದೆ
ಬಲಕರಿಸಿ ವಿಟ ಅವಸರದಿ ರತಿಕೊಟ ಸಲಿಸೆ
ಮಲಯುಜವ ಸಾಣೆಯ ಮೇಲೆ
ಜಲವನು ಬಿಡದೆಲೆ ತೆಗೆಯುವ ತೆರನದು ಸುಮತೀ

ತಾತ್ಪರ್ಯ : ಸ್ಮರಮಂದಿರದಲ್ಲಿ ಸತಿಗೆ, ಒಲುರಸ ಜಿನುಗದೆ ಬಲಾತ್ಕಾರದಿಂದ ವಿಟನು ಅವಸರದಲ್ಲಿ ರತಿ ಮಾಡುವುದು ಸಾಣೆಯ ಕಲ್ಲಿನ ಮೇಲೆ ನೀರನ್ನು ಬಿಡದೆ ಗಂಧ ತೆಗೆದ ಹಾಗೆ ಸುಖವೀಯದು.

100. ಮೂಲ : ವಿನದಗುನೆವ್ವರು ಚೆಪ್ಪಿನ
ವಿನಿನಂತನೆ ವೇಗಪಡಕ ವಿವರಿಂಪದಗುನ್
ಗನಿಕಲ್ಲನಿಜಮುದೆಲಿಸಿನ
ಮನುಜುಡೆ ಪೋ ನೀತಿಪರುಡು ಮಹಿಲೋ ಸುಮತೀ

ಅನುವಾದ : ಆಲಿಸು ಯಾರೇ ಹೇಳಲಿ
ಆಲಿಸಿ ರಭಸದಿ ಅವಸರ ಪಡದೆ ವಿಚಾರಿಸಿ
ಸುಳ್ಳು ನಿಜವ ಕಂಡು ತಿಳಿವ
ಕಲೆಯುಳ್ಳವ ನೀತಿಪರನು ಧರೆಯಲಿ ಸುಮತೀ

ತಾತ್ಪರ್ಯ : ಯಾರು ಏನೇ ಹೇಳಲಿ ಅವರ ಮಾತನ್ನು ಆಲಿಸಬೇಕು. ಹೇಳಿದ ಮಾತ್ರಕ್ಕೆ ತಕ್ಷಣ ಅವಸರಪಟ್ಟು ಪ್ರತಿಕ್ರಿಯೆ ವ್ಯಕ್ತಪಡಿಸಬಾರದು. ನಿಧಾನವಾಗಿ ವಿಚಾರಿಸಿ ಸುಳ್ಳು ನಿಜವ ಕಂಡುಕೊಳ್ಳುವ ಕಲೆಯುಳ್ಳವನು ನೀತಿಪರನು.

101. ಮೂಲ : ವೀಡೆಮು ಚೇಯುನಿ ನೋರುನು
ಜೇಡಿಲ ಯುಧರಾಮೃತಂಬು ಚೆಂದನಿ ನೋರುನ್
ಪಾಡಂಗ ರಾನಿ ನೋರುನು
ಬೂಡಿದ ಕಿರವೈನಪಾಡು ಬೊಂದರ ಸುಮತೀ

ಅನುವಾದ : ವೀಳೆಯ ಜಗಿಯದ ಬಾಯಿಯು
ಬಾಲೆಯರದರಾಮೃತವನು ಸವಿಯದ ಬಾಯಿಯು
ಒಲವಿಂ ಹಾಡದ ಬಾಯಿಯು
ಹಾಳು ಬಿದ್ದ ಗುಳಿಯದು ಬೂದಿ ಸುರಿಯಲ್ ಸುಮತೀ

ತಾತ್ಪರ್ಯ : ತಾಂಬೂಲವನ್ನು ಜಗಿಯದ ಬಾಯಿ, ತರುಣಿಯರ ತುಟಿಗಳ ಅಮೃತವನ್ನು ಸವಿಯದ ಬಾಯಿ, ಪ್ರೀತಿಯಿಂದ ಹಾಡದ ಬಾಯಿ ಬೂದಿ ಸುರಿಯುವ ಹಾಳುಗುಳಿ ಇದ್ದಂತೆ.

102. ಮೂಲ : ವೆಲಿಯಾಲಿವಲನೆ ಗೂರಿಮಿ
ಕಲುಗದು ಮರಿಗಲಿಗೆನೇನಿ ಕಡತೇರದುಗಾ
ಪಲುವುರು ನಡಿಚೆಡುತೆರುವುನ
ಪುಲು ಮೊಲವದು ಮೊಲಚೆನೇಸಿ ಪೊದಲದು ಸುಮತೀ

ಅನುವಾದ : ಬೆಲೆವೆಣ್ಣಿನಿಂದ ಒಲುಮೆಯು
ದುಲಭಿಸದು ಲಭಿಸಿದರು ಸಹ ಬಹುಕಾಲವಿರದು
ಪಲವರು ನಡೆಯುವ ಮಾರ್ಗದಿ
ಹುಲ್ಲದು ಬೆಳೆಯದು ಬೆಳೆದರು ಬದುಕದು ಸುಮತೀ

ತಾತ್ಪರ್ಯ : ಅನೇಕರು ಓಡಾಡುವ ಸ್ಥಳದಲ್ಲಿ ಹುಲ್ಲು ಬೆಳೆಯುವುದಿಲ್ಲ. ಒಂದು ಸಮಯ ಬೆಳೆದರೂ ಸಹ, ಬಹುಕಾಲ ಜೀವಿಸದು. ಅದರಂತೆಯೇ ಸೂಳೆಯಿಂದ ಪ್ರೀತಿ ಸಿಗುವುದಿಲ್ಲ, ಸಿಕ್ಕಿದರೂ ಅದು ಬಹುಕಾಲವಿರುವುದಿಲ್ಲ.

103. ಮೂಲ : ಮೇಂಲೆಂಚನಿ ಮಾಲಿನ್ಯುನಿ
ಮಾಲನು, ನಗಸಾಲಿವಾನಿ ಮಂಗಲಿ ಹಿತುಗಾ
ನೇಲಿನ ನರಪತಿ ರಾಜ್ಯಮು
ನೇಲಗಲಸಿ ಪೋವುನಾನಿ ನೆಗಡದು ಸುಮತೀ

ಅನುವಾದ : ಒಳ್ಳೆಯುದೆಣಿಸದ ಮಲಿನನ
ಹೊಲೆಯ ಅಕ್ಕಸಾಲಿ ಹಜಾಮ ಇವರನುರಾಗದಿ
ಆಳಿದ ನರಪತಿ ರಾಜ್ಯವು
ಅಳಿದು ಧರೆಗಿಳಿವುದು ವೃದ್ಧಿಯಾಗದು ಸುಮತೀ

ತಾತ್ಪರ್ಯ : ಇತರರಿಗೆ ಒಳ್ಳೆಯುದನ್ನು ಬಯಸದ ಕೆಟ್ಟ ಮನಸ್ಸಿನವನನ್ನು, ಹೊಲೆಯ, ಅಕ್ಕಸಾಲಿ, ಹಜಾಮ ಈ ಗುಣಗಳಿರುವವರನ್ನು ಬಹಳ ಪ್ರೀತಿಯಿಂದ ಕಂಡು ರಾಜ್ಯವಾಳುವ ಅರಸನ ರಾಜ್ಯವು ಕೆಟ್ಟು ನೆಲಸಮವಾಗುವುದು. ಅದು ವೃದ್ಧಿಯಾಗದು.

104. ಮೂಲ : ವೇಸರಪು ಜಾತಿ ಕಾನೀ
ವೀಸಮು ದಾ ಚೇಯುನಟ್ಟಿ ವ್ಯರ್ಥುಡು ಗಾನೀ
ದಾಸಿ ಕೊಡಕೈನ ಗಾನೀ
ಕಾಸುಲು ಗಲವಾಡೆ ರಾಜು ಗದರಾ ಸುಮತೀ

ಅನುವಾದ : ತುಸ ಜಾತಿಯವನೆ ಇರಲುಂ
ಕಸುಬೊಂದನು ನಿರ್ವಹಿಸಿದ ವ್ಯರ್ಥನೆ ಇರಲುಂ
ದಾಸಿಯ ಪುತ್ರನೆ ಇರಲುಂ
ಕಾಸುಂಗಳುಳ್ಳವನೆ ರಾಜ ಅಲ್ಲವೆ ಸುಮತೀ

ತಾತ್ಪರ್ಯ : ಕೀಳು ಜಾತಿಯಲ್ಲಿ ಜನಿಸಿದವನೆ ಆಗಿರಲಿ, ಕೆಲಸ ಕಾರ್ಯಗಳನ್ನು ಮಾಡದೆ ವ್ಯರ್ಥವಾಗಿ ಕಾಲಹರಣ ಮಾಡುವವನೆ ಆಗಿರಲಿ, ಸೇವಕಿಯ ಮಗನೆ ಆಗಿರಲಿ, ಅವನಲ್ಲಿ ಹಣವಿದ್ದರೆ ಅವನು ರಾಜನಿಗೆ ಸಮಾನ.

105. ಮೂಲ : ಶುಭಮುಲನೊಂದನಿ ಚಿದುವನು
ನಭಿನಯಮುಗ ರಾಗ ರಸಮು ನಂದನಿ ಪಾಟಲೆ
ಗುಬ ಗುಬಲು ಲೇನಿ ಕೂಟಮಿ
ಸಭ ಮೆಚ್ಚನಿ ಮಾಟಲೆಲ್ಲ ಜಪ್ಪನ ಸುಮತೀ

ಅನುವಾದ : ಶುಭವನು ಹೊಂದದ ಓದದು
ಅಭಿನಯದೊಳುರಾಗರಸವ ಹೊಂದದ ಗಾನವು
ಬೊಬ್ಬೆ ಇರದ ಜನ ಸಂದಣಿ
ಸಭೆ ಮೆಚ್ಚದ ನುಡಿಗಳೆಲ್ಲ ಸಪ್ಪೆಯೊ ಸುಮತೀ

ತಾತ್ಪರ್ಯ : ಓದುವುದರಿಂದ ಯಶಸ್ಸು ಸಿಗಬೇಕು, ಹಾಡುವಾಗ ಅಭಿನಯ, ರಾಗರಸವು ಹೊಂದಿರಬೇಕು. ಗದ್ದಲದಿಂದ ಕೂಡಿದ ಜನ ಸಮೂಹ, ಸಭೆಗೆ ಮೆಚ್ಚುಗೆಯಾಗತಕ್ಕ ಮಾತುಗಳು ಇರಬೇಕು. ಇವಿಲ್ಲದಿದ್ದರೆ ಒಹು ಸಪ್ಪೆಯಾಗಿ ಕಾಣಬರುತ್ತವೆ.

106. ಮೂಲ : ಸರಸಮು ವಿರಸಮು ಕೊರ ಕೇ
ಪರಿಪೂರ್ಣ ಸುಖಂಬು ಅಧಿಕ ಬಾಧಲ ಕೊರಕೇ
ಪೆರುಗುಟ ವಿರುಗುಟ ಕೊರಕೇ
ಧರ ತಗ್ಗುಟ ಹೆಚ್ಚುಕೊರಕೆ ತಥ್ಯಮು ಸುಮತೀ

ಅನುವಾದ : ಸರಸವು ವಿರಸದ ಸಲುವೇ
ಪರಿಪೂರ್ಣ ಸುಖವದು ಅಧಿಕ ತೊಂದರೆಗಳಿಗೇ
ಮೆರೆವುದು ಮುರಿಯುವ ಸಲುವೇ
ಧಾರಣೆ ಇಳಿಯುವುದು ಅಧಿಕ ಗೊಳಲಿಕೆ ಸುಮತೀ

ತಾತ್ಪರ್ಯ : ಹೆಚ್ಚಿನ ಸರಸವು ವಿರಸದಲ್ಲಿ ಕೊನೆಗೊಳ್ಳುವುದು. ಪೂರ್ಣ ಸುಖದ ಆಸೆಯು ಹೆಚ್ಚಿನ ತೊಂದರೆಗಳನ್ನು ಅನುಭವಿಸುವುದಕ್ಕಾಗಿ ಬರುತ್ತದೆ. ಹೆಚ್ಚಾಗಿ ಮೆರೆಯುವುದು ಮುರಿದು ಬೀಳುವುದಕ್ಕಾಗಿಯೆ. ಧಾರಣೆ ಇಳಿದರೆ ಅದು ಮುಂದೆ ಹೆಚ್ಚಾಗುತ್ತದೆ.

107. ಮೂಲ : ಸ್ತ್ರೀಲಯೆಡವಾದುಲಾಡಕು
ಬಾಲುರತೋ ಜೆಲಿಮಿ ಜೇಸಿ ಭಾಷಿಂಪಕುಮೀ
ಮೇಲ್ಶೈನ ಗುಣಮು ವಿಡುವಕು
ಯೇಲಿನ ಪತಿನಿಂದ ಸೇಯು ಕೆನ್ನಡು ಸುಮತೀ

ಅನುವಾದ : ಲಲನೆಯರೊಳು ವಾದ ತಗೆದು
ಬಾಲರಲಿ ಸ್ನೇಹಗಳಿಸಿ ಮಾತಾಡದಿರೈ
ಒಳ್ಳೆಯ ಗುಣವನು ಬಿಡದಿರು
ಆಳುವ ಅರಸನ ತೆಗಳದೆ ತಿಳಿಯಿತೆ ಸುಮತೀ

ತಾತ್ಪರ್ಯ : ಹೆಂಗಸರಲ್ಲಿ ವಾದ ಮಾಡಬಾರದು. ಮಕ್ಕಳ ಜತೆ ಸ್ನೇಹ ಗಳಿಸಿ ಅವರಲ್ಲಿ ಸಮಾನತೆಯಿಂದ ಮಾತನಾಡಬಾರದು. ಒಳ್ಳೆಯ ಗುಣಗಳನ್ನು ಎಂದಿಗೂ ಬಿಡಬಾರದು. ಅಧಿಕಾರಿ ಗಳನ್ನು ಯಾವ ಕಾರಣಕ್ಕೆ ಆಗಲಿ ನಿಂದಿಸಬಾರದು.

108. ಮೂಲ : ಸಿರಿತಾ ವಚ್ಚಿನ ವಚ್ಚುನು
ಸಲಲಿತಮುಗನಾರಿಕೇಳ ಸಲಿಲಮು ಭಂಗಿನ್
ಸಿರಿತಾ ಬೋಯಿಸಿ ಬೋವುನು
ಗರಿ ಮ್ರಿಂಗಿನ ವೆಲಗಪಂಡು ಕರಣಿನಿ ಸುಮತೀ

ಅನುವಾದ : ಸಿರಿತಾ ಬಂದರೆ ಬರುವುದು
ಸಲಲಿತದೊಳು ನಾರಿ ಕೇಳ ಸಲಿಲದ ತೆರದೊಳ್
ಸಿರಿತಾ ಹೋದರೆ ಹೋಗ್ವುದು
ಕರಿನುಂಗಿದ ಬೇಲದ ಫಲ ದಂತೆಲೊ ಸುಮತೀ

ತಾತ್ಪರ್ಯ : ಐಶ್ವರ್ಯವು ಕೈ ಸೇರುವಾಗ, ತೆಂಗಿನಕಾಯಿಗೆ ಯಾವ ರೀತಿ ನೀರು ಬಂದು ಸೇರುತ್ತದೆಯೋ ಅದೇ ರೀತಿ, ಗೊತ್ತಿಲ್ಲದೆ ಬಂದು ಸೇರುತ್ತದೆ. ಆನೆಯು ನುಂಗಿದ ಬೇಲದಹಣ್ಣು ಅದರ ಲದ್ದಿಯಲ್ಲಿ ಹೊರಬಂದಾಗ ಅದು ಪೂರ್ಣವಾಗಿ ಮೊದಲಿನಂತೆಯೇ ಇರುತ್ತದೆ. ಆದರೆ ಒಳಗಡೆ ಏನೂ ಇರುವುದಿಲ್ಲ. ಎಲ್ಲವೂ ಜೀರ್ಣವಾಗಿರು ತ್ತದೆ. ಅದೇ ರೀತಿ ಐಶ್ವರ್ಯ ಹೋಗುವಾಗ ಗೊತ್ತಿಲ್ಲ ದೆಯೇ ಕರಗಿ ಹೋಗುತ್ತದೆ.

# ನರಸಿಂಹ ಶತಕ

ನರಸಿಂಹ ಶತಕ ತೆಲುಗಿನಲ್ಲಿದೆ. ಈ ಶತಕವನ್ನು ಬರೆದ ಶೇಷಪ್ಪ ಕವಿ ಅಷ್ಟೇನು ಹೆಚ್ಚಿನ ವಿದ್ವಾಂಸರಲ್ಲದಿದ್ದರೂ ಈ ಶ್ರೇಷ್ಠ ಕೃತಿಯನ್ನು ರಚಿಸಿದ್ದಾರೆ. ತಾನು ಶಾಸ್ತ್ರೀಯ ಗ್ರಂಥಗಳನ್ನು ಓದಲಿಲ್ಲ. ಅಮರಕಾಂಡ ತ್ರಯವನ್ನು ಅರಸಿ ನೋಡಲಿಲ್ಲ, ಆದರೂ ಪರಮಾತ್ಮನ ಕಟಾಕ್ಷದಿಂದ ತಾನು ಪರಮಾತ್ಮನ ಮೇಲೆ ಸೀಸ ಪದ್ಯಗಳನ್ನು ರಚಿಸುತ್ತೇನೆ ಎಂಬುದಾಗಿ ಹೇಳಿದ್ದಾನೆ. ಈತನು ಮಹಾಭಕ್ತ. ಈತನ ಭಾಷೆ, ಶೈಲಿ ಸಂಪದ್ಭರಿತವಾಗಿ, ಆಕರ್ಷಕವಾಗಿದೆ. ಅಡಿಗಡಿಗೂ ಈತನು ತನ್ನನ್ನು ತಾನು ಪರಮಾತ್ಮನಿಗೆ ಸಮರ್ಪಿಸಿಕೊಂಡಿದ್ದಾನೆ. ಚಿತ್ತ ಶುದ್ಧಿಯಿಂದ ಪರಮಾತ್ಮನ ಸೇವೆ ಮಾಡುತ್ತೇನಲ್ಲದೆ, ಜನರ ಮೆಚ್ಚುಗೆಗಲ್ಲ, ಪರಮಾತ್ಮನ ಸ್ಮರಣೆ ಜನ್ಮ ಪಾವನತೆಗಲ್ಲದೆ ಸರಿಸಮಾನರಲ್ಲಿ ಘನತೆ ಗಳಿಸುವುದಕ್ಕಲ್ಲ, ವಿದ್ಯೆಯನ್ನು ಕಲಿತದ್ದು ಪರಮಾತ್ಮನ ಚಿಂತನೆಗಲ್ಲದೆ ಉದರ ಪೋಷಣೆಗಲ್ಲ ಎಂಬುದಾಗಿ ಪರಮಾತ್ಮನಲ್ಲಿ ನಿವೇದಿಸಿಕೊಂಡಿದ್ದಾನೆ.

ಶೇಷಪ್ಪ ಕವಿ ವೈರಾಗ್ಯಸಂಪನ್ನ, ಹುಟ್ಟಿದಾಗ ತಾಯಿಯ ಗರ್ಭದಿಂದ ಯಾರೂ ಹಣ ತರುವುದಿಲ್ಲ. ಮಧ್ಯೆ ಲಕ್ಷಾಧಿಕಾರಿಯಾದರೂ ಲವಣ ಅನ್ನವನ್ನಲ್ಲದೆ ಹೊಳೆವ ಬಂಗಾರವನ್ನು ನುಂಗಲಾರರು. ಕಷ್ಟಪಟ್ಟು ಹಣ ಕೂಡಿಟ್ಟು ಕೊನೆಗೆ ಜೇನು ನೊಣಗಳು ಜೇನನ್ನು ಕೂಡಿಸಿ ಪರರಿಗೆ ಕೊಡುವಂತೆ, ಇತರರಿಗೆ ಬಿಟ್ಟು ಹೋಗುತ್ತಾರೆ. ಈ ರೀತಿ ಕೂಡಿಟ್ಟು ಅನ್ಯರಿಗೆ ಬಿಟ್ಟು ಹೋಗುವುದಕ್ಕಿಂತ ದಾನ ಧರ್ಮಗಳನ್ನು ಮಾಡಬೇಕೆಂದು ಕವಿ ಹೇಳುತ್ತಾನೆ.

ಕವಿಗೆ ದೇಹಾಭಿಮಾನ ಸಂಪೂರ್ಣ ಕಡಿದು ಹೋಗಿತ್ತು. ಮಾನವನ ಆಯುಸ್ಸು ಶತಸಂವತ್ಸರಗಳೆಂದು ಹೇಳಿದ್ದರೂ, ಆ ಮಾತನ್ನು ನಂಬಲಾಗದು. ಈ ಶರೀರ ಪಂಚಭೂತಗಳಿಂದ ಮಾಡಲ್ಪಟ್ಟಿದ್ದು, ಬಾಲ್ಯದಲ್ಲಿಯೋ, ಯೌವನದಲ್ಲಿಯೋ, ವಯಸ್ಸಿನಲ್ಲಿಯೋ, ಮುದಿತನದಲ್ಲಿಯೋ, ಕಾಡಿನಲ್ಲೋ, ಊರಿನಲ್ಲೋ, ನೀರಿನಲ್ಲೋ ನಾಶ ಹೊಂದುವುದು ನಿಜ. ದೇಹವಿರುವಷ್ಟರಲ್ಲಿ ಪರಮಾತ್ಮನನ್ನು ಧ್ಯಾನಿಸಬೇಕು ಎಂದಿದ್ದಾನೆ. (ಪದ್ಯ 20)

ದೀನತ್ವವನ್ನು ಅನುಭವಿಸಿ, ಶೂರತ್ವವನ್ನು ತ್ಯಜಿಸಿದ ಧೀಮಂತ ಶೇಷಪ್ಪ, ಭಕ್ತಿ ಪರವಶತೆಯಿಂದ ತನ್ನನ್ನು ಪರಮಾತ್ಮನಿಗೆ ಅರ್ಪಿಸಿಕೊಂಡ ಭಾವನಾ ಲಹರಿಯೇ ಈ ಶತಕ.

ಈಗ ನಾವು ಕಾಣುವ ಹದಗೆಟ್ಟ ಸಮಾಜದ ಬಗ್ಗೆ ಬಹಳ ಹಿಂದೆಯೇ ಈ ಕವಿ ಸ್ವಾರಸ್ಯವಾಗಿ ನುಡಿದಿದ್ದಾನೆ. ಅಧಿಕ ವಿದ್ಯಾವಂತರು ಅಪ್ರಯೋಜಕರಾದರು, ಮೂರ್ಖರು ಸಭಾ ಪೂಜ್ಯರಾದರು, ಸತ್ಯವಂತರ ಮಾತಿಗೆ ಜನ ವಿರೋಧವಾಯಿತು. ಧರ್ಮಪರಾಯಣರಿಗೆ ದಾರಿದ್ರ್ಯ, ಲೋಭಿಗಳಿಗೆ ಧನಪ್ರಾಪ್ತಿ, ಪುಣ್ಯವಂತರಿಗೆ ಅನಾರೋಗ್ಯ, ದುಷ್ಟರಿಗೆ ಏಳಿಗೆ ಹೀಗಿರುವಾಗ ಒಳ್ಳೆಯವರಿಗೆ, ದಾಸ ಜನಕ್ಕೆ, ಭಕ್ತರಿಗೆ, ಪರಮಾತ್ಮನೆ ! ನೀನೇ ದಿಕ್ಕು ಎಂದಿದ್ದಾನೆ. (ಪದ್ಯ 26)

ನಿಜಭಕ್ತಿಭಾವದಿಂದ ಸದಾ ಕಾಲ ಪರಮಾತ್ಮನ ಚಿಂತೆಯಲ್ಲಿಯೇ ಕಾಲ ಕಳೆಯುತ್ತ ಪಂಚೇಂದ್ರಿಯಗಳನ್ನು ಪರಮಾತ್ಮನ ಸ್ಮರಣೆಯಲ್ಲಿ ತೊಡಗಿಸಿದ್ದಾನೆ. ಸದಾಕಾಲ, ಮನಸ್ಸು, ಪರಮಾತ್ಮನ ಭಜನೆ ಮಾಡಲು, ಕೈಗಳು ಪೂಜಿಸಲು, ನಾಲಿಗೆ ಪರಮಾತ್ಮನನ್ನು ಕುರಿತು ಹಾಡಲು, ಕಿವಿಗಳು ಪರಮಾತ್ಮನ ಕೀರ್ತನೆಗಳನ್ನು ಆಲಿಸಲು, ಕಣ್ಣುಗಳಾದರೋ ಸದಾ ಪರಮಾತ್ಮನ ದರ್ಶನವನ್ನು ಬಯಸುತ್ತವೆ ಎಂಬುದಾಗಿ ಹೇಳಿ, ತನ್ನನ್ನು ತಾನು ಸಂಪೂರ್ಣವಾಗಿ ಪರಮಾತ್ಮನಲ್ಲಿ ಸಮರ್ಪಿಸಿಕೊಂಡಿದ್ದಾನೆ. (ಪದ್ಯ 81)

ಪರಮಾತ್ಮನ ಕೃಪೆಗೆ ಜಾತಿ ಭೇದಗಳಿಲ್ಲ, ವೃತ್ತಿ ವ್ಯತ್ಯಾಸವಿಲ್ಲ, ಸದಾಕಾಲ ಯಾವನು ಪರಮಾತ್ಮನನ್ನು ಕೊಂಡಾಡುತ್ತಿರುವನೋ ಅವನೆ ಮೋಕ್ಷಾಧಿಕಾರಿ, ವೇದಗಳನ್ನು ಪಠಿಸುವ ಬ್ರಾಹ್ಮಣನಿರಲಿ, ರಣದಲ್ಲಿ ಹೋರಾಡುವ ರಾಜನಿರಲಿ, ವರ್ತಕ ಮಾಡುವ ವೈಶ್ಯನಿರಲಿ, ಭೂಮಿ ಉಳುವ ಶೂದ್ರನಿರಲಿ, ಹೊಳೆಯುವ ಖಡ್ಗ ಪಿಡಿದು ಜಳಪಿಸುವ ಚಂಡಾಲನಿರಲಿ, ಪ್ರಜೆಗಳಿಗೆ ಮಡಿ ಮಾಡುವ ಮಡಿವಾಳನಿರಲಿ, ಚರ್ಮ ಮಾರುವ ನೀಚನಿರಲಿ, ಸದಾ ಪರಮಾತ್ಮನನ್ನು ಕೊಂಡಾಡುತ್ತಿದ್ದರೆ ಅಂಥವನು ಮೋಕ್ಷಾಧಿಕಾರಿ. (ಪದ್ಯ 67)

ಮನೋ ನಿಗ್ರಹ ಬಹು ಕಷ್ಟ ಸಾಧ್ಯ. ಪ್ರಪಂಚದಲ್ಲಿ ತೀರ್ಥಯಾತ್ರೆಗಳನ್ನು ಮಾಡಬಹುದು, ಸಂಧ್ಯಾವಂದನೆ ಜಪ ಮುಂತಾದ ಸತ್ಕ್ರಿಯೆಗಳನ್ನು ಮಾಡಬಹುದು, ವೇದಗಳಿಗೆ ಅರ್ಥವನ್ನು ಬಿಡಿಸಿ ಹೇಳಬಹುದು, ಯಾಗಗಳನ್ನು ದಾನಗಳನ್ನು ಮಾಡಬಹುದು. ಆದರೆ ಮನಸ್ಸು ಅನ್ಯ ಸ್ಥಳದಲ್ಲಿ ಹರಿಯದೆ, ಪರಮಾತ್ಮನ ಚಿಂತನೆಯಲ್ಲಿ ನಿಲ್ಲಿಸುವುದು ಮಾತ್ರ ಬಹು ಕಷ್ಟ ಎಂದಿದ್ದಾನೆ. (ಪದ್ಯ 28)

ದುಷ್ಟರಿಗೆ ಜ್ಞಾನ ಬೋಧೆ ಮಾಡುವುದು ಎಂತ ಚತುರರಾದ ಪಂಡಿತರಿಗೂ ಸಾಧ್ಯವಾಗದು. ಅವರು ತಮ್ಮ ಬುದ್ಧಿಯನ್ನು ಸುಲಭವಾಗಿ ತಿದ್ದಿಕೊಳ್ಳಲಾರರು.

ಅವರಿಂದ ಅವರಿಗೆ ಜ್ಞಾನ ಬೋಧೆ ಬಹು ಕಷ್ಟ. ದೈಹಿಕ ಶಕ್ತಿಯಿಂದ ಬುದ್ಧಿಶಕ್ತಿಯಿಂದ ಹುಲಿಯನ್ನು ಕೊಲ್ಲಬಹುದು, ಹಾವಿನ ಹೆಡೆಯನ್ನು ಕೈಯಿಂದ ಹಿಡಿಯಬಹುದು, ಭ್ರಷ್ಟ ರಾಕ್ಷಸರನ್ನು ದೂರ ಓಡಿಸಬಹುದು, ಘನವಾದ ರೋಗಗಳನ್ನು ಔಷಧಿಗಳಿಂದ ಗುಣಪಡಿಸಬಹುದು, ಆದರೆ ಮೂರ್ಖರಿಗೆ, ದುಷ್ಟರಿಗೆ, ಜ್ಞಾನಬೋಧೆ ಮಾಡಿ ಒಳ್ಳೆಯವರನ್ನಾಗಿಸುವುದು ಮಾತ್ರ ಕಷ್ಟ ಸಾಧ್ಯ. (ಪದ್ಯ 27)

ಶೇಷಪ್ಪ ಕವಿ ನರಸಿಂಹಸ್ವಾಮಿಯ ಆರಾಧಕ. ನರಸಿಂಹಸ್ವಾಮಿಯ ಅನನ್ಯ ಭಕ್ತ. ಕಡುಬಡತನದಲ್ಲಿ ಭಿಕ್ಷೆಯಿಂದಲೂ ಜೀವನ ಸಾಗಿಸಿದಂತೆ ಕಾಣುತ್ತದೆ. "ಐಶ್ವರ್ಯ ನೀಡದಿದ್ದರೂ ಉದರ ಪೋಷಣೆಗಾದರೂ ಕೊಡಬಾರದೆ! ಕೊಡಲಾರದೆ ಈ ರೀತಿ ಎನ್ನಿಂದ ಭಿಕ್ಷೆ ಎತ್ತುವಂತೆ ಮಾಡಿದೆ" ಎಂಬುದಾಗಿ ತಮ್ಮ ಕಾಯ ಪೋಷಣ ಕಷ್ಟವನ್ನು ತೋಡಿಕೊಂಡಿದ್ದಾರೆ. ತನ್ನನ್ನು ಸಲಹಬೇಕೆಂದು ಪರಮಾತ್ಮನನ್ನು ಯಾಚಿಸಿ, ಒಂದು ಸಮಯ ಪರಮಾತ್ಮ ಅನುಗ್ರಹಿಸದೆ ಎದ್ದು ಹೋಗುವುದೇ ಆದರೆ, ಪರಮಾತ್ಮನ ಸೆರಗು ಎಳೆದು ಕೂರಿಸಿ ಪಡೆಯುವೆ ಎಂಬ ಆತ್ಮವಿಶ್ವಾಸದಿಂದ ದೃಢ ಭಕ್ತಿಯನ್ನು ವ್ಯಕ್ತಪಡಿಸಿದ್ದಾನೆ. ಭಕ್ತಿ, ವೈರಾಗ್ಯ ತುಂಬಿ ಹರಿಯುವ ಈ ಶತಕವನ್ನು ಓದಿಯೇ ಆನಂದ ಪಡಬೇಕು.

ಪರಮಾತ್ಮನನ್ನು ಭಕ್ತಿಯಿಂದಲೇ ಅಣಕ ಮಾಡಿದ್ದಾನೆ ಶೇಷಪ್ಪ ಕವಿ. "ಬಯಕೆಯಿಂದ ಬಲಿಚಕ್ರವರ್ತಿಯಲ್ಲಿ ಭಿಕ್ಷೆ ಬೇಡಿದೆ, ನಾಚಿಕೆಯಿಲ್ಲದೆ ಶಬರಿ ಕೊಟ್ಟ ಹಣ್ಣಿಗೆ ಕೈ ಚಾಚಿದೆ, ವಿದುರನ ಮನೆಗೆ ಊಟಕ್ಕೆ ನಡೆದೆ, ಕುಚೇಲನು ನೀಡಿದ ಹಿಡಿ ಅವಲಕ್ಕಿಗೆ ಕೈ ನೀಡಿದೆ" ಎಂಬುದಾಗಿ ಪರಮಾತ್ಮನನ್ನು ಅಣಕಮಾಡಿ, ಕೊನೆಗೆ ಈ ನಾಟಕಗಳೆಲ್ಲವೂ, ಪರಮಾತ್ಮನು ಭಕ್ತರಿಗೆ ಕರುಣಿಸುವ ಭಾಗ್ಯವೇನೋ! ಎಂದಿದ್ದಾರೆ. ಇಂತಹ ಒಂದು ಅಮೂಲ್ಯ ಕೃತಿಯನ್ನು ಕನ್ನಡ ಬಂಧುಗಳಿಗೆ ಒದಗಿಸಲು, ಎನ್ನ ಯತಾಶಕ್ತಿ ಕನ್ನಡಿಸಿ ಅವರ ಮಡಿಲಿಗೆ ಹಾಕಿದ್ದೇನೆ.

—ಎಂ. ದೇವರಕೊಂಡಪ್ಪ

# ನರಸಿಂಹ ಶತಕ

1\. ಸೀಸ : ಶ್ರೀ ಮನೋಹರ ಸುರಾರ್ಚಿತ ಸಿಂದು ಗಂಭೀರ
ಭಕ್ತವತ್ಸಲ ಕೋಟಿ ಭಾನು ತೇಜ
ಕಂಜನೇತ್ರ ಹಿರಣ್ಯ ಕಶ್ಯಪಾಂತಕ ಶೂರ
ಸಾಧು ರಕ್ಷಣ ಶಂಖ ಚಕ್ರಹಸ್ತ
ಪ್ರಹ್ಲಾದ ವರದ ಪಾಪಧ್ವಂಸ ಸರ್ವೇಶ
ಕ್ಷೀರ ಸಾಗರ ಶಾಯಿ ಕೃಷ್ಣವರ್ಣ
ಪಕ್ಷಿವಾಹನ ನೀಲ ಭ್ರಮರ ಕುಂತಲ ಜಾಲ
ಪಲ್ಲವಾರುಣ ಪಾದ ಪದ್ಮಯುಗಳ

ತೇಟಗೀತೆ : ಚಾರು ಶ್ರೀ ಚಂದನಾಗರು ಚರ್ಚಿತಾಂಗ
ಕುಂದಕುಟ್ಮಲದಂತ ವೈಕುಂಠಧಾಮ
ಭೂಷಣ ವಿಕಾಸ ಶ್ರೀ ಧರ್ಮಪುರನಿವಾಸ
ದುಷ್ಟ ಸಂಹಾರ ನರಸಿಂಹ ದುರಿತ ದೂರ

ಅನುವಾದ : ಮೂಲದ ಭಾಷೆ ಸುಮಧುರ. ಉಭಯ ಭಾಷೆಗಳಲ್ಲೂ ಉಪಯೋಗಿಸುವ ಪದಗಳಿಂದ ಕೂಡಿದೆ. ಇದರ ಅನುವಾದ ಕೈ ಬಿಟ್ಟಿದೆ.

ತಾತ್ಪರ್ಯ : ಶ್ರೀ ಲಕ್ಷ್ಮೀರಮಣನೆ, ಸುರರಿಂದ ಪೂಜೆಗೊಂಡು ಸಮುದ್ರದಂತೆ ಗಂಭೀರನೆ, ಭಕ್ತರನ್ನು ಸಲಹುವವನೆ, ಕೋಟಿ ಸೂರ್ಯರ ಪ್ರಕಾಶ ಉಳ್ಳವನೆ, ಪದ್ಮಾಕ್ಷ, ರಕ್ಕಸರ ಕೊಂದ ಶೂರನೆ, ಸಾಧು ಸಜ್ಜ ರಕ್ಷಕ, ಶಂಕು ಚಕ್ರ ಧರಿಸಿ, ಪ್ರಹ್ಲಾದನ ಸಲಹಿದವನೆ, ಪಾಪ ಧ್ವಂಸನೆ, ಸರ್ವೇಶ, ಕ್ಷೀರ ಸಾಗರ ಶಯನನೆ, ಗರುಡವಾಹನನೆ ಭ್ರಮರದಂತ ಮುಂಗುರುಳು, ನಸುಗೆಂಪುಪಾದಗಳುಳ್ಳವನೆ, ಶ್ರೀಗಂಧ ಅಗರುಗಳನ್ನು ಲೇಪಿಸಿಕೊಂಡವನೆ, ಮಲ್ಲಿಗೆಯಂತೆ ದಂತಗಳುಳ್ಳವನೆ, ದುರಿತಗಳ ದೂರವಿಡುವವನೆ, ಶ್ರೀಯೊಡನೆ ಧರ್ಮಪುರಿ ವಾಸ, ನರಸಿಂಹನೆ (ನಿನಗೆ ನಮಸ್ಕರಿಸುವೆನು).

2. ಸೀಸ : ಪದ್ಮಲೋಚನ ಸೀಸ ಪದ್ಯಮುಲ್ ನೀಮೀದ
ಚೆಪ್ಪಬೂನಿತಿನಯ್ಯ ಚಿತ್ತಗಿಂಪು
ಯತಿ ಗಣ ಪ್ರಾಸ ಲಕ್ಷಣಮು ಚೂಡಗಲೇದು
ಪಂಚಕಾವ್ಯ ಶ್ಲೋಕ ಪಠನ ಲೇದು
ಅಮರ ಕಾಂಡ ತ್ರಯಂ ಬರಸಿ ಚೂಡಗ ಲೇದು
ಶಾಸ್ತ್ರೀಯ ಗ್ರಂಥಮುಲ್ ಚದುವ ಲೇದು
ನೀಕಟಾಕ್ಷಂಬುನ ನೇ ರಚಿಂಚೆದಗಾನಿ
ಪ್ರಜ್ಞನಾಯದಿಕಾದು ಪ್ರಸ್ತುತಿಂಪ

ತೇಟಗೀತೆ : ದಪ್ಪುಗಲಿಗಿನ ಸದ್ಭಕ್ತಿ ತಕ್ಕುವೌನೆ
ಚಿರುಕುನಕು ವಂಕ ಬೋತೇಮಿ ಚೆಡುನೆತೀಪು ॥ಭೂ॥

ಅನುವಾದ : ಪದ್ಮಲೋಚನ ಸೀಸ ಪದ್ಯಗಳ ನಿನ್ಮೇಲೆ
ಹೇಳ ಹೊರಟಿಹೆ ನಾನು ಆಲಿಸಯ್ಯ
ಯತಿಗಣ ಪ್ರಾಸದಾ ಲಕ್ಷಣ ಶೋಧಿಸಲಿಲ್ಲ
ಪಂಚಕಾವ್ಯ ಶ್ಲೋಕ ಪಠಿಸಲಿಲ್ಲ
ಅಮರ ಕಾಂಡತ್ರಯ ವರಸಿ ನೋಡಲೆ ಇಲ್ಲ
ಶಾಸ್ತ್ರೀಯ ಗ್ರಂಥವ ಓದಲಿಲ್ಲ
ನಿಮ್ಮ ಕಟಾಕ್ಷದಿಂ ರಚಿಸುವೆನೆ ಹೊರತು
ಪ್ರಜ್ಞೆ ಎನ್ನದುಮಲ್ಲ ಕೀರ್ತಿ ಪಡೆಯೆ

ತೇಟಗೀತೆ : ತಪ್ಪುತಲೆದೋರೆ ಸದ್ಭಕ್ತಿ ಕಡಿಮೆ ಯಹುದೆ
ಕರ್ವದಲಿ ಡೊಂಕು ತಾನಿರೆ ಕೆಡುಗೆಸಿಹಿಯು ॥ಭೂ॥

ತಾತ್ಪರ್ಯ : "ಕಮಲಕಣ್ಣನೆ, ನಿನ್ನನ್ನು ಕುರಿತು ಸೀಸ ಪದ್ಯಗಳನ್ನು ರಚಿಸುತ್ತೇನೆ. ಆಲಿಸು. ಯತಿಗಣ ಪ್ರಾಸ ಲಕ್ಷಣ ಶೋಧಿಸ ಲಿಲ್ಲ. ಪಂಚಕಾವ್ಯ, ಅಮರಕಾಂಡ, ಶಾಸ್ತ್ರೀಯ ಗ್ರಂಥ ಓದಲಿಲ್ಲ. ನಿನ್ನ ಕಟಾಕ್ಷದಿಂದ ಬರೆಯುತ್ತೇನೆ. ಕೀರ್ತಿ ಪ್ರತಿಷ್ಠೆಗಳಿಗಲ್ಲ. ಈ ಪದ್ಯಗಳಲ್ಲಿ ತಪ್ಪು ತಲೆದೋರಿದರೆ, ಕಬ್ಬು ಡೊಂಕಾದರೂ ಸಿಹಿ ಕಡಿಮೆಯಾಗದಂತೆ ಸದ್ಭಕ್ತಿ ಯಿಂದ ಬರೆಯುತ್ತೇನೆ".

3. ಸೀಸ : ನರಸಿಂಹ ನೀ ದಿವ್ಯ ನಾಮ ಮಂತ್ರಮು ಚೇತ
ದುರಿತ ಜಾಲಮುಲೆಲ್ಲ ದೋಲ ವಚ್ಚು
ನರಸಿಂಹ ನೀ ದಿವ್ಯ ನಾಮ ಮಂತ್ರಮು ಚೇತ
ಬಲು ವೈನ ರೋಗಮು ಲ್ಬಾಪವಚ್ಚು
ನರಸಿಂಹ ನೀ ದಿವ್ಯ ನಾಮ ಮಂತ್ರಮು ಚೇತ
ರಿಪು ಸಂಘಮುಲ ಸಂಹ ರಿಂಚವಚ್ಚು
ನರಸಿಂಹ ನೀ ದಿವ್ಯ ನಾಮ ಮಂತ್ರಮು ಚೇತ
ದಂಡ ಹಸ್ತುನಿ ಬಂಟ್ಲ ದರುಮ ವಚ್ಚು

ತೇಟಗೀತೆ : ಭಳಿರ ನೇ ನೀ ಮಹಾಮಂತ್ರ ಬಲಮು ಚೇತ
ದಿವ್ಯ ವೈಕುಂಠ ಪದವಿ ಸಾದಿಂಪವಚ್ಚು ॥ಭೂ॥

ಅನುವಾದ : ನರಸಿಂಹ ನಿನ ದಿವ್ಯ ನಾಮ ಮಂತ್ರ ಬಲದಿ
ದುರಿತ ಜಾಲಗಳನು ದೂಡಬಹುದು
ನರಸಿಂಹ ನಿನ ದಿವ್ಯ ನಾಮ ಮಂತ್ರ ಬಲದಿ
ಬಲವಾದ ರೋಗವ ನೀಗಬಹುದು
ನರಸಿಂಹ ನಿನ ದಿವ್ಯ ನಾಮ ಮಂತ್ರ ಬಲದಿ
ರಿಪುಸಂಘ ಸಂಹಾರ ಮಾಡಬಹುದು
ನರಸಿಂಹ ನಿನ ದಿವ್ಯ ನಾಮ ಮಂತ್ರ ಬಲದಿ
ದಂಡಹಸ್ತ ಭಟರ ಅಟ್ಟಬಹುದು

ತೇಟಗೀತೆ : ಬಲರೆ ನಾ ನಿನ್ನ ದಿವ್ಯ ನಾಮ ಮಂತ್ರ ಬಲದಿ
ದಿವ್ಯ ವೈಕುಂಠ ಪದವಿಯು ಪಡೆಯಬಹುದು ॥ಭೂ॥

ತಾತ್ಪರ್ಯ : ಶ್ರೀ ನರಸಿಂಹ ಮೂರ್ತಿಯ ಪವಿತ್ರ ನಾಮ ಬಲದಿಂದ, ಪಾಪ ಸಮೂಹವನ್ನು ಹೋಗಲಾಡಿಸಬಹುದು. ಬಲವಾದ ರೋಗಗಳನ್ನು ಗುಣ ಮಾಡಬಹುದು. ವೈರಿಗಳನ್ನು ಸಂಹಾರ ಮಾಡಬಹುದು. ಯಮದೂತರನ್ನು ದೂರ ಓಡಿಸಬಹುದು. ಕೊನೆಗೆ ವೈಕುಂಠ ಪದವಿಯನ್ನೂ ಪಡೆಯಬಹುದು.

4. ಸೀಸ : ಆದಿನಾರಾಯಣ ಯನುಚು ನಾಲುಕತೋಡ
ಬಲುಕ ನೇರ್ಚಿನವಾರಿ ಪಾದಮುಲಕು
ಸಾಷ್ಟಾಂಗಮುಗ ನಮಸ್ಕಾರ ಸಮರ್ಪಣ ಚೇಸಿ
ಪ್ರಸ್ತುತಿಸಿಂಚೆದನಯ್ಯ ಬಹು ವಿಧಮುಲ
ಧರಣಿಲೋ ನರುಲೆಂತ ದಂಡಿವಾರೈನನು
ನಿನ್ನುಗಾನನಿವಾರಿ ನೇಸ್ಮರಿಂಚ
ಮೇಮು ಶ್ರೇಷ್ಟುಲ ಮಂಚು ಬಲ್ಕು ಚುಂಡೆಡಿವಾರಿ
ಚೆಂತ ಜೇರಗ ಬೋನು ಶೇಷಶಯನ

ತೇಟಗೀತೆ : ಪರಮ ಸಾತ್ವಿಕುಲೈನ ನೀ ಭಕ್ತ ವರುಲ
ದಾಸುಲಕು ದಾಸುಡನು ಸುಮ್ಮಿ ಧಾತ್ರಿಲೋನ ॥ಭೂ॥

ಅನುವಾದ ಸೀ : ಆದಿನಾರಾಯಣ ಎನುತ ನಾಲಿಗೆಯಿಂದ
ನುಡಿಯೆ ಕಲಿತವರ ಪಾದಗಳಿಗೆ
ಸಾಷ್ಟಾಂಗ ನಮನ ಸಮರ್ಪಣೆಯನು ಮಾಡಿ
ಪ್ರಸ್ತುತಿಸುವೆನಯ್ಯ ಬಹುವಿಧದೊಳು
ಧರಣಿಯೊಳ್ ನರರೆಷ್ಟು ಹಿರಿಯರೆ ಇರಲಿ
ನಿನ್ನ ಭಜಿಸದವರ ಸ್ಮರಿಸೆನಯ್ಯ
ತಾವೆ ಶ್ರೇಷ್ಟರು ಎಂಬ ಗರ್ವಬೀರುಗಳಲ್ಲಿ
ಸಹವಾಸವನು ಮಾಡೆ ಶೇಷಶಯನ

ತೇಟಗೀತೆ : ಪರಮಸಾತ್ವಿಕರಪ್ಪ ನಿನ್ನ ಭಕ್ತ ಜನರ
ದಾಸರಿಗೆ ದಾಸನಾನಯ್ಯ ಧಾತ್ರಿಯೊಳಗೆ ॥ಭೂ॥

ತಾತ್ಪರ್ಯ : "ಆದಿನಾರಾಯಣ" ಎಂಬುದಾಗಿ ನಾಲಿಗೆಯಿಂದ ನುಡಿಯಲು ಕಲಿತ ಭಕ್ತರ ಪಾದಗಳಿಗೆ ನಮಸ್ಕರಿಸಿ, ಕವಿ ಬಹುವಿಧವಾಗಿ ಕೊಂಡಾಡಿದ್ದಾನೆ. ದೊಡ್ಡವರಾದರು, ಪರಮಾತ್ಮನ ಚಿಂತನೆ ಇಲ್ಲದವರನ್ನು ಸೇರುವುದಿಲ್ಲ, ತಾವು ಶ್ರೇಷ್ಠರೆಂದು ಗರ್ವಿಸುವವರ ಸಹವಾಸವನ್ನು ಮಾಡುವುದಿಲ್ಲ. ಪ್ರಪಂಚದಲ್ಲಿ ಪರಮ ಸಾತ್ವಿಕರಾದ ಭಕ್ತ ಜನರಾದ ದಾಸರಿಗೆ ದಾಸ ನಾನು ಎಂಬುದಾಗಿ ಕವಿ ನಮ್ರತೆಯಿಂದ ನುಡಿಯುತ್ತಾನೆ.

5. ಸೀಸ : ಐಶ್ವರ್ಯ ಮುನಕು ನಿನ್ನನುಸರಿಂಪಗಲೇದು
ದ್ರವ್ಯ ಮಿಮ್ಮನಿ ವೆಂಟ ದಗುಲ ಲೇದು
ಕನಕ ಮಿಮ್ಮನಿ ಚಾಲ ಕಷ್ಟಪೆಟ್ಟಗಲೇದು
ಪಲ್ಲಕಿಮ್ಮನಿ ನೋಟ ಬಲುಕಲೇದು
ಸೊಮ್ಮು ಲಿಮ್ಮನಿ ನಿನ್ನು ನಮ್ಮಿ ಕೊಲ್ವಗಲೇದು
ಭೂಮುಲಿಮ್ಮನಿ ಪೇರು ಪೊಗಡಲೇದು
ಬಲಮುಲಿಮ್ಮನಿ ನಿನ್ನು ಬ್ರತಿ ಮಾಲಗಾ ಲೇದು
ಪಸುಲ ನಿಮ್ಮನಿ ಪಟ್ಟು ಪಟ್ಟಲೇದು

ತೇಟಗೀತಿ : ನೇನು ಕೋರಿನದೊಕ್ಕಟೇ ನೀಲವರ್ಣ
ಚಯ್ಯನನು ಮೋಕ್ಷ ಮಿಚ್ಚಿನ ಚಾಲುನಾಕು ॥ಭೂ॥

ಅನುವಾದ : ಐಶ್ವರ್ಯಗಳಿಗಾಗಿ ನಿನ್ನನುಸರಿಸಲಿಲ್ಲ
ದ್ರವ್ಯ ಕೊಡಲಿ ಎಂದು ತಗಲಲಿಲ್ಲ
ಕನಕ ನೀಡಲಿ ಎಂದು ಕಷ್ಟ ಕೊಟ್ಟವನಲ್ಲ
ಪಲ್ಲಕ್ಕಿ ಕೊಡು ಎಂದು ಕೇಳಲಿಲ್ಲ
ಆಭರಣ ಕೊಡೆಂದು ನಿನ್ನಾರಾಧಿಸಲಿಲ್ಲ
ಭೂಮಿಗೋಸ್ಕರ ನಿನ್ನ ಭಜಿಸಲಿಲ್ಲ
ಬಲವ ನೀಯಲಿ ಎಂದು ನಿನ್ನ ಯಾಚಿಸಲಿಲ್ಲ
ಪಶುವ ನೀಯಲಿ ಎಂದು ಪೇಳಲಿಲ್ಲ

ತೇಟಗೀತೆ : ನಾನು ಪ್ರಾರ್ಥಿಸುವುದದೊಂದೆ ನೀಲವರ್ಣ
ಬೇಗ ಮೋಕ್ಷವ ಕರುಣಿಸೆ ಸಾಕು ಎನಗೆ ॥ಭೂ॥

ತಾತ್ಪರ್ಯ : ಐಶ್ವರ್ಯ, ದ್ರವ್ಯ, ಬಂಗಾರ, ಪಲ್ಲಕ್ಕಿ ಆಭರಣ, ಭೂಮಿ, ಬಲ, ಪಸು ಇವು ಯಾವುದನ್ನೂ ಯಾಚಿಸಿ ಪರಮಾತ್ಮನನ್ನು ಆರಾಧಿಸುವುದೆ ಬಹುಬೇಗ ಮೋಕ್ಷವನ್ನು ಕರುಣಿಸಲು ಪರಮಾತ್ಮನಲ್ಲಿ ಕವಿ ಪ್ರಾರ್ಥನೆಯನ್ನು ಸಲ್ಲಿಸುತ್ತಾನೆ.

6. ಸೀಸ : ಮೊಂದುಡನನಿ ನನ್ನು ನಿಂದ ಜೇಸಿನ ನೇಮಿ
ನಾದೀನತ ಜೂಚಿ ನವ್ವನೇಮಿ
ದೂರ ಭಾವಮುಲೇಕ ದೂಲನಾಡಿನ ನೇಮಿ
ಪ್ರೀತಿ ಸೇಯುಕ ವಂಕ ಬೆಟ್ಟನೇಮಿ
ಕಕ್ಕಸಂಬುಲು ಪಲ್ಕಿ ವೆಕ್ಕರಿಂಚಿನ ನೇಮಿ
ತೀವ್ರಕೋಪಮು ಚೇತ ದಿಟ್ಟನೇಮಿ
ಪೆಳುಕು ಮಾಟಲು ಕೊನ್ನಿ ಪಿಮ್ಮ್ಮ ಟಾಡಿನ ನೇಮಿ
ಚೇರಿದಾಪಟ ಗೇಲಿ ಜೇಯು ನೇಮಿ

ತೇಟಗೀತೆ : ಕಲ್ಪವೃಕ್ಷಂಬುವಲೆ ನೀವು ಗಲ್ಗನಿಂಕ
ಪ್ರಜಲ ಲಕ್ಷ್ಯಂಬುನಾಕೇಲ ಪದ್ಮನಾಭ ॥ಭೂ॥

ಅನುವಾದ : ದಡ್ಡನೆಂದೆನುತೆನ್ನ ನಿಂದೆ ಮಾಡಿದರೇನು
ಎನ್ನದೀನತೆ ನೋಡಿ ನಕ್ಕರೇನು
ಗುಣವ ಗಣಿಸದೆಲೆ ಎನ್ನ ದೂರಿದರೇನು
ಪ್ರೀತಿ ತೋರದೆ ಲೋಪ ಗೈದರೇನು
ಚುಚ್ಚು ಮಾತುಗಳಾಡಿ ಹಂಗಿಸಲೇನಂತೆ
ತೀವ್ರ ಕೋಪವ ಬೀರಿ ಬೈದರೇನು
ಹೆಚ್ಚು ಮಾತುಗಳಿಂದ ಹೊಗಳಿದೊಡೇನಂತೆ
ಸನಿಹ ಸೇರುತ ಗೇಲಿ ಮಾಡಲೇನು

ತೇಟಗೀತೆ : ಕಲ್ಪವೃಕ್ಷದ ತೆರದಿ ನೀ ನಿರಲು ಇನ್ನು
ಜನರ ಲಕ್ಷ್ಯವು ಎನಗೇಕೆ ಪದ್ಮನಾಭ ॥ಭೂ॥

ತಾತ್ಪರ್ಯ : ದಡ್ಡನೆಂದು ಗಣಿಸಿ ನಿಂದೆ ಮಾಡಿದರೂ, ಎನ್ನ ದೀನತೆಗೆ ನಕ್ಕರೂ, ಗುಣ ಪರಿಗಣಿಸದೆ ಬೈದರೂ, ಪ್ರೀತಿ ತೋರದೆ ಚುಚ್ಚು ಮಾತುಗಳಾಡಿ ಹಂಗಿಸಿದರೂ, ತೀವ್ರ ಕೋಪದಿಂದ ತೆಗಳಿದರೂ, ಹತ್ತಿರ ಬಂದು ಗೇಲಿ ಮಾಡಿದರೂ, ಜನರ ಗೊಡವೆ ಬೇಡ. ಒಳ್ಳೆ ಮಾತುಗಳಿಂದ ಹೊಗಳಿದರೂ ಜನರ ಸಹವಾಸ ಬೇಡ. ಕಲ್ಪವೃಕ್ಷದಂತೆ ಕರುಣಿಸಲು ಪರಮಾತ್ಮನಿದ್ದಾನೆ.

7. ಸೀಸ : ಚಿತ್ತಶುದ್ಧಿಗ ನೀಕು ಸೇವ ಚೇಸೆದ ಗಾನಿ
ಪುಡಮಿಲೋ ಜನುಲು ಮೆ ಪ್ಪುಲಕು ಗಾದು
ಜನ್ಮಪಾವನತಕೈ ಸ್ಮರಣ ಚೇಸೆದ ಗಾನಿ
ಸಾಟಿ ವಾರಿಲೋ ಬ್ರತಿಷ್ಟಲಕು ಗಾದು
ಮುಕ್ತಿಕೋಸರಮು ನೇಮ್ರೊಕ್ಕಿ ವೇಡೆದ ಗಾನಿ
ದಂಡಿ ಭಾಗ್ಯಮು ನಿಮಿತ್ತಂಬುಗಾದು
ನಿನ್ನು ಬೊಗಡನು ವಿದ್ಯನೇರ್ಚಿತಿನೇ ಗಾನಿ
ಕುಕ್ಷಿನಿಂಡೆಡು ಕೂಟಿ ಕೊರಕುಗಾದು

ತೇಟಗೀತೆ : ಪಾರಮಾರ್ಥಿಕ ಮುನಕುನೇ ಪಾಟು ಬಡಿತಿ
ಕೀರ್ತಿಕಿ ನಪೇಕ್ಷ ಪಡಲೇದು ಕೃಷ್ಣವರ್ಣ ॥ಭೂ॥

ಅನುವಾದ : ಚಿತ್ತ ಶುದ್ಧಿಯೊಳು ನಾ ಸೇವೆ ಸಲ್ಲಿಸುವೆನು
ಇಳೆಯೊಳಿಹ ಜನರು ಮೆಚ್ಚಲಲ್ಲ
ಜನ್ಮಪಾವನತೆಗೆ ಸ್ಮರಣೆ ಗೈವೆನೆ ವಿನಃ
ಸರಿಸಮಾನರೊಳು ಘನತೆಗಲ್ಲ
ಮುಕ್ತಿಗೋಸ್ಕರ ನಾನು ಮುಗಿದು ಬೇಡುವುದೊಂದೆ
ಬಹಳ ಭಾಗ್ಯವ ಕೋರಿ ಬಂದುದಲ್ಲ
ನಿನ್ನ ಸ್ಮರಿಸಲೆಂದೆ ವಿದ್ಯೆಯನು ಕಲಿತೆ
ಕುಕ್ಷಿ ಬಾಧೆಯು ನೀಗುವ ಸಲುವಲ್ಲ

ತೇಟಗೀತೆ : ಪಾರಮಾರ್ಥಿಕಕ್ಕೋಸ್ಕರ ಕಷ್ಟಪಟ್ಟೆ
ಕೀರ್ತಿಗೆ ಅಪೇಕ್ಷೆ ಪಡಲಿಲ್ಲ ಕೃಷ್ಣವರ್ಣ ॥ಭೂ॥

ತಾತ್ಪರ್ಯ : ಚಿತ್ತಶುದ್ಧಿಯಿಂದ ಪರಮಾತ್ಮನ ಸೇವೆ ಮಾಡಬೇಕು. ಜನರು ಮೆಚ್ಚುವುದಕ್ಕಲ್ಲ. ಪರಮಾತ್ಮನ ಸ್ಮರಣೆ, ಜನ್ಮ ಪಾವನವಾಗುವುದಕ್ಕೆ ಹೊರತು ಸರಿಸಮಾನರಲ್ಲಿ ಘನತೆ ಪಡೆಯುವುದಕ್ಕಲ್ಲ. ಪರಮಾತ್ಮನನ್ನು ಕೈ ಮುಗಿದು ಬೇಡುವುದು ಮುಕ್ತಿಗೇ ವಿನಃ ಭಾಗ್ಯಕ್ಕಲ್ಲ. ವಿದ್ಯೆ ಕಲಿಯುವುದು ಪರಮಾತ್ಮನನ್ನು ಆರಾಧಿಸುವುದಕ್ಕೆ ಹೊರತು ಉದರ ಪೋಷಣೆಗಲ್ಲ. ಕಷ್ಟಪಡುವುದು ಪಾರಮಾರ್ಥಿಕಕ್ಕೆ ಹೊರತು ಕೀರ್ತಿ ಪಡೆಯುವುದಕ್ಕಲ್ಲ.

8. ಸೀಸ : ಶ್ರವಣ ರಂಧ್ರಮುಲ ನೀ ಸತ್ಕಥೆಲ್ಪೊಗಡಂಗ
ಲೇಶಮಾನಂದಂಬು ಲೇನಿ ವಾಡು
ಪುಣ್ಯವಂತುಲು ನಿನ್ನು ಪೂಜ ಸೇಯಗ ಚೂಚಿ
ಭಾವ ಮಂದುತ್ಸಾಹ ಪಡನಿ ವಾಡು
ಭಕ್ತವರ್ಯುಲು ನೀ ಪ್ರಭಾವಮು ಲ್ಪೊಗಡಂಗ
ತತ್ಪರತ್ವಮು ಲೇಕ ದಲಗು ವಾಡು
ತನ ಚಿತ್ತ ಮಂದು ನೀ ಧ್ಯಾನಮೊನ್ನಡು ಲೇಕ
ಕಾಲಮಂತಯು ವೃಥಾ ಗಡಪುವಾಡು

ತೇಟಗೀತೆ : ವಸುಧಲೋನೆಲ್ಲ ವ್ಯರ್ಥುಂಡು ವಾಡೆಯಗುನು
ಮರಿಯು ಚೆಡುಗಾಕನೆಪ್ಪುಡು ಮಮತನೊಂದಿ ॥ಭೂ॥

ಅನುವಾದ ಸೀ : ಶ್ರವಣ ರಂಧ್ರಗಳಲ್ಲಿ ನಿನ್ನ ಸತ್ಕಥೆ ಕೇಳಿ
ಲೇಶವಾನಂದವಾ ಹೊಂದದವನು
ಪುಣ್ಯವಂತರು ನಿನ್ನ ಪೂಜೆ ಮಾಡಲು ನೋಡಿ
ಭಾವದೊಳುತ್ಸಾಹ ಹೊಂದದವನು
ಭಕ್ತವರ್ಯರು ನಿನ್ನ ಪ್ರಭಾವಸ್ತುತಿಸಲ್
ಶ್ರದ್ಧೆ ಇಲ್ಲದೆ ದೂರ ಹೋಗುವವನು
ತನ ಚಿತ್ತದೊಳ್ ನಿನ್ನ ಧ್ಯಾನವಂ ಗೈಯದೆ
ಸಮಯವೆಲ್ಲಾ ವೃಥಾ ಕಳೆಯುವವನು

ತೇಟಗೀತೆ : ವ್ಯರ್ಥ ಮಾನವ ನವ ಪೃಥ್ವಿಯೊಳಗೆ ಹುಡುಕೆ
ಮತ್ತೆ ಕೆಡುವನವನು ಸದಾ ಮಮತೆ ತಳೆದು ॥ಭೂ॥

ತಾತ್ಪರ್ಯ : ಕಿವಿಗಳಲ್ಲಿ ಪರಮಾತ್ಮನ ಕಥೆ ಕೇಳಿ ಆನಂದ ಹೊಂದದವ, ಪುಣ್ಯವಂತರ ಪೂಜೆಯನ್ನು ನೋಡಿ ಮನದಲಿ ಉತ್ಸಾಹ ಹೊಂದದವ, ಭಕ್ತರು ಭಜನೆ ಮಾಡುವುದನ್ನು ನೋಡಿಯೂ, ದೂರ ಸರಿಯುವವ, ಚಿತ್ತದೊಳುದ್ದೈವ ಚಿಂತನೆ ಮಾಡದೆ, ವೃಥಾ ಕಾಲ ಕಳೆಯುವ ನರನು ಭುವಿಯಲ್ಲಿ ವ್ಯರ್ಥನು.

9. ಸೀಸ : ಗೌತಮೀಸ್ನಾನಾನ ಕಡತೇರುದಾ ಮಂಟೆ
ಮೊನಸಿ ಚನ್ನೀಳ್ಳ ಲೋ ಮುನುಗ ಲೇನು
ತೀರ್ಥಯಾತ್ರಲಚೇತ ಗೃತಾರ್ಥುಡೌದಾಮಂಟೆ
ಬಡಲಿ ನೇಮಂಬುನೇ ನಡಪ ಲೇನು
ದಾನ ಧರ್ಮಮುಲ ಸದ್ಗತಿ ಜೆಂದು ದಾಮಂಟೆ
ಘನಮುಗಾ ನಾವದ್ದ ಧನಮು ಲೇದು
ತಪಮಾ ಚರಿಂಚಿ ಸಾರ್ಥಿಕಮು ನೊಂದುದ ಮಂಟೆ
ನಿಮಿಷ ಮ್ಯೈನನು ಮನಸು ನಿಲ್ಪಲೇನು

ತೇಟಗೀತೆ : ಕಷ್ಟಮುಲಕೋರ್ವ ನಾ ಚೇತ ಗಾದುನಿನ್ನು
ಸ್ಮರಣ ಜೇಸೆದ ನಾಯಥಾ ಶಕ್ತಿ ಕೊಲದಿ ॥ಭೂ॥

ಅನುವಾದ : ಗೌತಮೀ ಸ್ನಾನದೊಳ್ ಧನ್ಯನಾಗುವೆನೆನೆ
ಧೈರ್ಯದಿಂ ನೀರಲ್ಲಿ ಮುಳುಗಲಾರೆ
ತೀರ್ಥಯಾತ್ರೆಗಳಿಂದ ಕೃತಕೃತ್ಯನೆನಸಲಿಕ್ಕೆ
ಆಯಾಸದಿಂ ನೇಮ ಮಾಡಲರಿಯೆ
ದಾನ ಧರ್ಮವ ಮಾಡಿ ಸ್ವರ್ಗಕೇರುವುದಕ್ಕೆ
ಹೆಚ್ಚಾಗಿ ಎನ್ನಲ್ಲಿ ವಿತ್ತವಿಲ್ಲ
ತಪವನ್ನಾಚರಿಸುತ ಸಾರ್ಥಕ ಹೊಂದಲು
ನಿಮಿಷವೊಂದು ಮನವ ನಿಲಿಸಲರಿಯೆ

ತೇಟಗೀತೆ : ಕಷ್ಟ ಸಹಿಸಲ್ಕೆನ್ನಿಂದಾಗದೈಯ್ಯ ನಿನ್ನ
ಸ್ಮರಣೆ ಮಾಡುವೆ ಎನ್ನಿತಾ ಶಕ್ತಿಯಿಂದ ॥ಭೂ॥

ತಾತ್ಪರ್ಯ : ಗೌತಮೀ ನದಿಯಲ್ಲಿ ಮಿಂದು ಪುಣ್ಯ ಸಂಪಾದಿಸಲು ಧೈರ್ಯ ಸಾಲದು. ತೀರ್ಥಯಾತ್ರೆಗಳನ್ನು ಮಾಡಿ ಕೃತಾರ್ಥನಾಗುವುದಕ್ಕೆ ಆಯಾಸ ಸಹಿಸಲಾಗದು. ದಾನ ಮಾಡಿ ಸ್ವರ್ಗಸುಖ ಪಡೆಯಲು ಧನವಿಲ್ಲ. ತಪಸ್ಸ ಮಾಡಲು ನಿಮಿಷವಾದರೂ ಮನಸ್ಸು ನಿಲ್ಲುತ್ತಿಲ್ಲ. ಆದರೂ ಯಥಾಶಕ್ತಿ ಪರಮಾತ್ಮನನ್ನು ಧ್ಯಾನ ಮಾಡುತ್ತೇನೆ.

10. ಸೀಸ : ಅರ್ಥಿವಾಂಡ್ರಕು ನೀಕ ಹಾನಿ ಚೇಯುಟಕಂಟೆ
ದೆಂಪುತೋ ವಸನಾಭಿ ದಿನುಟ ಮೇಲು
ಅಡಬಿಡ್ಡಲಸೊಮ್ಮು ಲಪಹರಿಂಚುಟಕಂಟೆ
ಬಂಡಕಟ್ಟುಕ ನೂತ ಬಡುಟ ಮೇಲು
ಪರುಲ ಕಾಂತಲ ಬಟ್ಟಿ ಬಲ್ಮಿಚೇಸುಟ ಕಂಟೆ
ಬಡಬಾಗ್ನಿ ಕೀಲಲ ಬಡುಟ ಮೇಲು
ಬ್ರತುಕ ಜಾಲಕ ದೊಂಗ ಪನುಲು ಚೇಯುಟ ಕಂಟೆ
ಕೊಂಗುತೋ ಮುಷ್ಟೆತ್ತಿ ಕೊನುಟಮೇಲು

ತೇಟಗೀತೆ : ಜಲಜದಳನೇತ್ರ ನೀ ಭಕ್ತ ಜನುಲತೋಟಿ
ಜಗಡ ಮಾಡೆಡು ಪನಿಕಂಟೆ ಚಾವುಮೇಲು ॥ಭೂ॥

ಅನುವಾದ : ಯಾಚಕಂಗೀಯದೆ ಹಾನಿಗೈವುದಕಿಂತ
ಮೇಲಾಗಿ ವಿಷನಾಭಿ ಮೆಲ್ಲೆ ಲೇಸು
ಹೆಣ್ಣುಮಕ್ಕಳ ವಿತ್ತ ದೋಚಿಕೊಳ್ಳುವುದಕ್ಕಿಂತ
ಕಲ್ಲು ಬಿಗಿದು ಬಾವಿ ಬೀಳಲೇಸು
ಪರಪೆಣ್ಣ ಳೊತ್ತಂಬ ಕೂಡುವುದಕಿಂತ
ಬಡಬಾಗ್ನಿ ಜ್ವಾಲಿಯೊಳ್ ಜಿಗಿಯೆ ಲೇಸು
ಬದುಕಲಾಗದೆ ಕಳ್ಳತನ ಮಾಡುವುದಕಿಂತ
ಸೆರಗೊಡ್ಡಿ ಭಿಕ್ಷೆಯಾ ಬೇಡೆ ಲೇಸು

ತೇಟಗೀತೆ : ಜಲಜದಳ ನೇತ್ರ ನಿಮ್ಮಯ ಭಕ್ತರಲ್ಲಿ
ಕಲಹವಾಡುವುದಕ್ಕಿಂತ ಸಾವು ಲೇಸು ॥ಭೂ॥

ತಾತ್ಪರ್ಯ : ಭಿಕ್ಷುಕನಿಗೆ ದಾನ ಮಾಡದೆ ವೃಥಾ ವೆಚ್ಚ ಮಾಡುವುದಕ್ಕಿಂತ ವಿಷನಾಭಿಯನ್ನು ತಿನ್ನುವುದು ಮೇಲು. ಹೆಣ್ಣು ಮಕ್ಕಳ ಹಣ ಅಪಹರಿಸುವುದಕ್ಕಿಂತ ಕಲ್ಲು ಕಟ್ಟಿಕೊಂಡು ಬಾವಿಯಲ್ಲಿ ಬೀಳುವುದು ಲೇಸು. ಪರರ ಹೆಣ್ಣುಗಳನ್ನು ಬಲಾತ್ಕರಿಸಿ ಕೂಡುವುದಕ್ಕಿಂತ, ಬೆಂಕಿ ಜ್ವಾಲೆಯಲ್ಲಿ ಬೀಳುವುದು ಮೇಲು. ಕಳ್ಳತನ ಮಾಡುವುದಕ್ಕಿಂತ ಭಿಕ್ಷೆ ಬೇಡುವುದು ಲೇಸು. ಎಲ್ಲಕ್ಕೂ ಮಿಗಿಲಾಗಿ ಹರಿಭಕ್ತರಲ್ಲಿ ಕಲಹ ಮಾಡುವುದಕ್ಕಿಂತ ಸತ್ತುಹೋಗುವುದು ಒಳ್ಳೆಯದು.

11. ಸೀಸ : ಗಾರ್ದಭಂಬುನಕೇಲ ಕಸ್ತೂರಿ ತಿಲಕಂಬು
ಮರ್ಕಟಂಬುನಕೇಲ ಮಲಯಜಂಬು
ಶಾರ್ದೂಲ ಮುನಕೇಲ ಶರ್ಕರಾಪೂಪಂಬು
ಸೂಕರಂಬುನ ಕೇಲ ಚೂತಫಲಮು
ಮಾರ್ಜಾಲಮುನಕೇಲ ಮಲ್ಲೆ ಪುವ್ವುಲ ಬಂತಿ
ಗುಡ್ಲಗೂಬಲಕೇಲ ಕುಂಡಲಮುಲು
ಮಹಿಷಂಬುಕೇಲ ಮೇಲೈನ ವಸ್ತ್ರಮುಲ್
ಬಕ ಸಂತತಿಕಿನೇಲ ಪಂಜರಂಬು.

ತೇಟಗೀತೆ : ದ್ರೋಹ ಚಿಂತನ ಜೇಸೆಡಿ ದುರ್ಜನುಲಕು
ಮಧುರ ಮೈನಟ್ಟಿ ನೀನಾಮ ಮಂತ್ರಮೇಲ ॥ಭೂ॥

ಅನುವಾದ : ಗಾರ್ದಂಬಗೇತಕ್ಕೆ ಕಸ್ತೂರಿ ತಿಲಕವುಂ
ಮರ್ಕಟಂಗೇತಕ್ಕೆ ಮಲಯಜವದು.
ಶಾರ್ದೂಲಗೇತಕ್ಕೆ ಶರ್ಕರಾ ತಿನಿಸುಗಳ್
ಸೂಕರಂಗೇತಕ್ಕೆ ಚೂತ ಫಲವು
ಮಾರ್ಜಾಲಗೇತಕ್ಕೆ ಮಲ್ಲಿ ಹೂ ಹಾರವುಂ
ಗೂಬೆಗದೇತಕ್ಕೆ ಕುಂಡಲಗಳು
ಮಹಿಷಕ್ಕೇತಕ್ಕೆ ನಿರ್ಮಲವಿಪ್ಪ ವಸ್ತ್ರಗಳ್
ಬಕ ಸಂತತಿಗೇಕೆ ಪಂಜರಗಳು

ತೇಟಗೀತೆ : ದ್ರೋಹ ಚಿಂತನೆ ಮಾಡುವಾ ದುರ್ಜನರಿಗೆ
ಮಧುರವಾದಂತ ನಿನನಾಮ ಮಂತ್ರವೇಕೆ ॥ಭೂ॥

ತಾತ್ಪರ್ಯ : ಕತ್ತೆಗೆ ಕಸ್ತೂರಿಯೂ, ಕೋತಿಗೆ ಶ್ರೀಗಂಧವೂ, ಹಾವಿಗೆ ಸಕ್ಕರೆ ತಿನಿಸು, ಹಂದಿಗೆ ಮಾವಿನ ಹಣ್ಣು, ಬೆಕ್ಕಿಗೆ ಮಲ್ಲಿಗೆ ಹೂವು, ಗೂಬೆಗೆ ಆಭರಣವು, ಎಮ್ಮೆಗೆ ಶುಭ್ರವಾದ ವಸ್ತ್ರ ಯಾವ ರೀತಿ ಒಪ್ಪದೋ ಅದೇ ರೀತಿ ದುರ್ಜನರಿಗೆ ಮಧುರವಾದ ಹರಿನಾಮ ರುಚಿಸುವುದಿಲ್ಲ.

**12. ಸೀಸ** : ಪಸರಂಬು ಪಂಜೈನ ಪಸುಲ ಕಾಪರಿತಪ್ಪು
ಪ್ರಜಲು ದುರ್ಜನುಲೈನ ಪ್ರಭುನಿತಪ್ಪು
ಭಾರ್ಯ ಗಯ್ಯಾಳೈನ ಪ್ರಾಣನಾಥುನಿತಪ್ಪು
ತನಯುಂಡು ದುಷ್ಟಯಿನ ತಂಡ್ರಿ ತಪ್ಪು
ಸೈನ್ಯಂಬು ಚೆದರಿನ ಸೈನ್ಯನಾಥುನಿ ತಪ್ಪು
ಕೂತುರು ಚೆಡುಗೈನ ಮಾತ ತಪ್ಪು
ಅಶ್ವಂಬು ದುರುಸೈನ ನಾರೋಹಕುನಿ ತಪ್ಪು
ದಂತಿ ದುಷ್ಟಯಿನ ಮಾವಂತು ತಪ್ಪು

**ತೇಟಗೀತೆ** : ಇಟ್ಟಿ ತಪ್ಪುಲೆರುಂಗಕ ಯಿಚ್ಛವಚ್ಚಿ
ನಟುಲ ಮೆಲುಗುದುರಿಪ್ಪುಡೀ ಯುವನಿಜನುಲು ॥ಭೂ॥

**ಅನುವಾದ** : ಆಕಳು ಕೆಡುಗಾಗೆ ಪಶು ಕಾಯ್ವವನ ತಪ್ಪು
ಪ್ರಜೆ ದುರ್ಗಣೆಗಳಾಗೆ ಪ್ರಭುವ ತಪ್ಪು
ಸತಿ ಧೂರ್ತೆಯಾಗೆ ಪ್ರಾಣನಾಥನ ತಪ್ಪು
ತನಯನು ದುಡುಕಾಗೆ ತಂದೆ ತಪ್ಪು
ಸೈನ್ಯವು ಚದುರಲು ಸೈನ್ಯನಾಥನ ತಪ್ಪು
ಮಗಳು ತಾ ಕೆಟ್ಟರೆ ಮಾತೆ ತಪ್ಪು
ಅಶ್ವವು ಪೊಗರಾಗೆ ಅಶ್ವಾರೋಹಿಯು ತಪ್ಪು
ಗಜ ಮದಿಸಲು ಮಾವಂತನದೆ ತಪ್ಪು.

**ತೇಟಗೀತೆ** : ಈ ರೀತಿಯ ತಪ್ಪು ಅರಿಯದೆ ಸ್ವೇಚ್ಛೆಯಿಂದ
ಮರೆತು ನಡೆಯುತಿರುವರಯ್ಯ ಜಗದಿ ಜನರು ॥ಭೂ॥

**ತಾತ್ಪರ್ಯ** : ಹಸು ಕೆಟ್ಟರೆ ಪಶುಪಾಲಕನೂ, ಪ್ರಜೆಗಳು ತಪ್ಪಿತಸ್ಥರಾದರೆ ರಾಜನೂ, ಸತಿ ಕೆಟ್ಟರೆ ಗಂಡನೂ, ಸೈನ್ಯ ಚದುರಿದರೆ ಸೈನ್ಯಾಧಿಪತಿಯೂ, ಮಗಳು ಕೆಟ್ಟರೆ ತಾಯಿಯೂ, ಕುದುರೆ ಪೊಗರಾದರೆ ಸವಾರನೂ, ಆನೆ ಮದಿಸಿದರೆ ಮಾವಟಿಗನೂ, ತಪ್ಪಿತಸ್ಥರು. ಯಾವುದು ನಿಜವಾದ ತಪ್ಪು ಎಂಬುದನ್ನು ವಿಚಾರಿಸದೆ ಜನರು ಸ್ವೇಚ್ಛೆಯಿಂದ ವರ್ತಿಸುತ್ತಾರೆ.

13. ಸೀಸ : ಕೋತಿಕಿ ಜಲತಾರು ಕಳ್ಳಾಯಿ ಯೇಟಿಕಿ
ವಿರಜಾಜಿ ಪೂದಂಡ ವಿಧವ ಕೇಲ
ಮುಕ್ಕಿಡಿ ತೊತ್ತುಕು ಮುತ್ತೆಂಪು ನತ್ತೇಲ
ನದ್ದ ವೇಮಿಟಿ ಕಿ ಜಾತ್ಯಂಧುನಕುನು
ಮಾಚಕಮ್ಮಕುನೇಲ ಮೌಕ್ತಿಕ ಹಾರಮುಲ್
ಕ್ರೂರ ಚಿತ್ತುನಿಕಿ ಸದ್ಗೋಷ್ಠುಲೇಲ
ರಂಕು ಬೋತುಕು ನೇಲ ರಮ್ಯಂಪುನಿಷ್ಠಯು
ವಾವಿಯೇಟಿಕಿ ದುಷ್ಟ ವರ್ತನುನಕು

ತೇಟಗೀತೆ : ಮಾಟ ನಿಲಕಡ ಸುಂಕರಿ ಮೋಟು ಕೇಲ
ಜೆವಿಟಿವಾನಿಕಿ ಸತ್ಕಥಾ ಶ್ರವಣಮೇಲ ||ಭೂ||

ಅನುವಾದ : ಕೋತಿಗೆ ಜರತಾರಿ ಕುಲಾವಿ ಏತಕೆ
ಜಾಜಿಯು ಹೂದಂಡೆ ವಿಧವೆಗೇಕೆ
ಮೋಡಿ ಮುಂಡೆಗೆ ಮುತ್ತು ಹುಗಿದ ಮುಖರವೇಕೆ
ದರ್ಪಣವೇತಕೆ ಜಾತ್ಯಾಂಧನಿಗೆ
ಅಲೆಗುಳಿಗೇತಕ್ಕೆ ಮುತ್ತಿನ ಹಾರವುಂ
ಕ್ರೂರ ಚಿತ್ತನಿಗೇಕೆ ಸುಜನ ಸಂಗ
ಚೆಂಗೂಲಿಗೇತಕೆ ಒಮ ರಮ್ಯನಿಷ್ಟೆಗಳ್
ವರಸೆ ಯೇತಕೆ ಕೆಟ್ಟ ನಡತೆಯುವಗೆ

ತೇಟಗೀತೆ : ಮಾತು ನಿಲುಗಡೆಯುದೇತಕೆ ಲಂಚಗುಳಿಗೆ
ಕಿವುಡಂಗೇತಕೆ ಸತ್ಕಥಾ ಶ್ರವಣಗಳವು ||ಭೂ||

ತಾತ್ಪರ್ಯ : ಕೋತಿಗೆ ಜರತಾರಿ ಟೋಪಿ, ವಿಧವೆಗೆ ಹೂದಂಡೆ, ಮುಂಡೆಗೆ ಮುತ್ತಿನ ಮೂಗು ನತ್ತುಗೆ, ಹುಟ್ಟು ಕುರುಡನಿಗೆ ಕನ್ನಡಿ, ಅಲೆಮಾರಿಗೆ ಮುತ್ತಿನ ಹಾರ, ಕ್ರೂರನಿಗೆ ಸತ್ಪುರುಷರ ಸಂಗ, ಜಾರೆಗೆ ಒಳ್ಳೆಯ ಆಚಾರ, ಕೆಟ್ಟನಡತೆಯುವನಿಗೆ ವರಸೆ, ನಿರರ್ಥಕ. ಅಂತೆಯೇ ಲಂಚಕೋರನಿಗೆ ಮಾತಿನ ಮೇಲೆ ಪ್ರಜ್ಞೆ, ಕಿವುಡನಿಗೆ ಸತ್ಕಥಾ ಶ್ರವಣ ಇವು ನಿಷ್ಪ್ರಯೋಜಕ.

14. ಸೀಸ : ಮಾನ್ಯಮ್ಮುಲಿಯ್ಯಾಸ ಮರ್ಥುಡೊಕ್ಕಡು ಲೇದು
ಮಾನ್ಯಮುಲ್ಚೆರುಪ ಸಮರ್ಥುಲಂತ
ಯೆಂಡಿನ ಯೂಳ್ಳಗೋ ಡೆರಿಗಿಂಪಡೆವ್ವಡು
ಪಂಡಿನ ಯೂಳ್ಳಕು ಪ್ರಭುವ್ವು ಲಂತ
ಯಿತಡು ಪೇದಯಟಂಚು ನೆರಗಿಂಪಡೆವ್ವಡು
ಕಲವಾರಿ ಸಿರುಲೆನ್ನ ಗಲರು ಚಾಲ
ತನಯಾಲಿ ಚೇಷ್ಟಲ ತಪ್ಪೆನ್ನಡೆವ್ವಡು
ಪರಕಾಂತ ರಂಕೆನ್ನ ಪೆದ್ದಲಂತ

ತೇಟಗೀತೆ : ಯಿಟ್ಟಿ ದೋಷುಲ ಕಧಿಕಾರ ಮಿಚ್ಚಿನಟ್ಟಿ
ಪ್ರಭುಲ ತಪ್ಪುಲಂಚುನು ಪಲುಕವಲೆನು ||ಭೂ||

ಅನುವಾದ : ಮಾನ್ಯಗಳೀಯಲು ಬಲ್ಲಿದರಿಲ್ಲವೈ
ಮಾನ್ಯಗಳ ಕೆಡಿಸಲು ಎಲ್ಲ ಮುಂದು
ಬೆಳೆ ಇಲ್ಲದಾ ಊರುಗಳ ಚಿಂತಿಸರು ಯಾರು
ಬೆಳೆದಂಥಾ ಊರಿಗೆ ಒಡೆಯರೆಲ್ಲ
ಪರರ ಬಡತನವ ಗಣಿಸೆ ಯಾರೂ ಇಲ್ಲ
ಉಳ್ಳವರ ಸಿರಿಯ ಗಣಿಪರೆಲ್ಲ
ತನ ಭಾರ್ಯೆ ಚೇಷ್ಟೆಯ ತಪ್ಪೆಂಬ ನಾವನುಂ
ಪರನಾರಿಯಲಿ ತಪ್ಪು ನುಡಿವರೆಲ್ಲ

ತೇಟಗೀತೆ : ಇಂಥ ದುಷ್ಟರಾದವಗಧಿ ಕಾರವಿತ್ತ
ಪ್ರಭುವಿನದೆ ತಪ್ಪುಗಳವೆಂದು ಹೇಳಬೇಕು ||ಭೂ||

ತಾತ್ಪರ್ಯ : ಮಾನ್ಯಗಳನ್ನು ಕೊಡುವಂಥ ಉದಾರಿಗಳು ಯಾರೂ ಇಲ್ಲ. ಇರುವ ಮಾನ್ಯಗಳನ್ನು ಹಾಳುಮಾಡಲು ಬಹಳ ಜನರಿದ್ದಾರೆ. ಯಾವುದಾದರೂ ಊರಲ್ಲಿ ಚೆನ್ನಾಗಿ ಬೆಳೆ ಬೆಳೆಯದೆ ಹೋದರೆ ಯಾರೂ ಮಾತನಾಡುವುದಿಲ್ಲ. ಚೆನ್ನಾಗಿ ಬೆಳೆಯಾದ ಊರಿನ ಬಗ್ಗೆ ಎಲ್ಲರಿಗೂ ಮೆಚ್ಚುಗೆ; ಬಡವರ ಬಗ್ಗೆ ಯಾರಿಗೂ ಕನಿಕರವಿರುವುದಿಲ್ಲ. ಆದರೆ ಧನಿಕರ ಬಗ್ಗೆ ಬಹಳ ಕಾಳಜಿ. ತನ್ನ ಹೆಂಡತಿ ತಪ್ಪು ಮಾಡಿದರೆ ಯಾರೂ ಹೇಳಿಕೊಳ್ಳುವುದಿಲ್ಲ. ಪರರ ಹೆಂಡತಿ ತಪ್ಪು ಮಾಡಿದರೆ ಎಲ್ಲರ ಬಾಯಲ್ಲೂ ಅದೇ ಮಾತು.

15\. ಸೀಸ : ತಲ್ಲಿ ಗರ್ಭಮುನುಂಡಿ ಧನಮು ತೇಡೆವ್ವಡು
ವೆಳ್ಳಿಪ್ರೊಯ್ಯೇನಾಡು ವೆಂಟರಾದು
ಲಕ್ಷಾಧಿಕಾರ್ಯೈನ ಲವಣಮನ್ನಮೆ ಕಾನಿ
ಮೆರುಗು ಬಂಗಾರಂಬು ಮ್ರಿಂಗ ಬೋಡು
ವಿತ್ತಮಾರ್ಜನ ಜೇಸಿ ವಿರ್ರವೀಗುಟೆಗಾನಿ
ಕೂಡಬೆಟ್ಟಿನ ಸೊಮ್ಮು ಕುಡುವ ಬೋಡು
ಪೊಂದುಗಾ ಮರುಗೈನ ಭೂಮಿ ಲೋಪಲಬೆಟ್ಟಿ
ದಾನ ಧರ್ಮಮುಲೇಕ ದಾಚಿದಾಚಿ

ತೇಟಗೀತೆ : ತುದಕುದೊಂಗಲ ಕಿತ್ತುರೋ ದೊರಲಕವುನೊ
ತೇನೆ ಜುಂಟೀಗಲಿಯ್ಯವಾ ತೆರುವರುಲಕು ॥ಭೂ॥

ಅನುವಾದ : ತಾಯಿ ಉದರದಿಂದ ಧನ ತರುವುದಿಲ್ಲ
ಪಯಣಗೈವ ಸಮಯ ಜತೆಗೆ ಬರದು
ಲಕ್ಷಾಧಿಪತಿ ಇರೆ ಲವಣಾನ್ನದ ಹೊರತು
ಹೊಳೆವ ಬಂಗಾರವ ನುಂಗಲಾರ
ವಿತ್ತವಾರ್ಜನೆ ಮಾಡಿ ಗರ್ವಿಸುವುದೆ ವಿನ
ಕೂಡಿಹಾಕಿದ ಹಣ ತಿನ್ನಲಾರ
ಹದನಾಗಿ ಭೂಮಿಯೊಳು ಮರೆಯಾಗಿ ಬಚ್ಚಿಟ್ಟು
ದಾನ ಧರ್ಮವ ಕೊಡದೆ ಹುದುಗಿ ಹುದುಗಿ

ತೇಟಗೀತೆ : ಕೊನೆಗೆ ಕಳ್ಳಂಗೆ ಕೊಡುವರೊ ದೊರೆಗೆ ಲಭಿಸೊ
ಜೇನ ನೊಣಗಳು ಈಯುವೆ ಪರರ ಕೈಗೆ

ತಾತ್ಪರ್ಯ : ಹುಟ್ಟಿದಾಗಲೆ ಯಾರೂ ಜತೆಯಲ್ಲಿ ಧನ ತರುವುದಿಲ್ಲ. ಹೋಗುವಾಗ ತೆಗೆದುಕೊಂಡು ಹೋಗುವುದಿಲ್ಲ. ಮನುಷ್ಯ ಲಕ್ಷಾಧಿಕಾರಿಯಾದರೂ ಲವಣ ಅನ್ನವೇ ವಿನಃ ಹೊಳೆಯುವ ಬಂಗಾರವನ್ನು ನುಂಗಲಾರರು. ಕಷ್ಟಪಟ್ಟು ಸಂಪಾದಿಸಿ ಅದನ್ನ ಕೂಡಿಟ್ಟು, ಕೊನೆಗೆ ಕಾಡಿನಲ್ಲಿ ಜೇನು ನೊಣಗಳು ಜೇನನ್ನು ಶೇಖರಿಸಿ ಪರರಿಗೆ ಕೊಡುವಂತೆ ಕಳ್ಳರಿಗೋ, ಸರಕಾರಕ್ಕೊ ಕೊಡುತ್ತಾರೆ.

16. ಸೀಸ : ಲೋಕಮಂದೆವಡೈನ ಲೋಭಿಮಾನವುಡುನ್ನ
ಭಿಕ್ಷಮರ್ಥಿಕಿಚೇತ ಬೆಟ್ಟಲೇಡು
ತಾನು ಪೆಟ್ಟಕಪೋತೆ ತಗುವುಪುಟ್ಟದು ಕಾನಿ
ಯೊರುಲು ಪೆಟ್ಟಗ ಜೂಚಿ ಯೋರ್ವಲೇಡು
ದಾತದಗ್ಗರ ಚೇರಿ ತನಮುಲ್ಲೆ ಜೆಡಿನಟ್ಟು
ಜಿಹ್ವತೋ ಚಾಡಿ ಚೆಪ್ಪುಚುಂಡು
ಫಲಮು ವಿಘ್ನಂಬೈನ ಬಹುಳ ಸಂತೋಷಿಂಚು
ಮೇಲುಗಲ್ಗಿನಚಾಲ ಮಿಣುಕುಚುಂಡು

ತೇಟಗೀತೆ : ಶ್ರೀ ರಮಾನಾಥ ಯಿಟುವಂಟಿ ಕ್ರೂರ ಜನುಡು
ಭಿಕ್ಷುಕುಲ ಶತ್ರುವನಿಪೇರು ಬೆಟ್ಟವಚ್ಚು ॥ಭೂ॥

ಅನುವಾದ : ಲೋಕದೊಳಾವನೆ ಲೋಭಿಮಾನವನಿರೆ
ಭಿಕ್ಷವರ್ತಿಯು ಕೈಗೆ ಕೊಡಲು ಒಲ್ಲ
ತಾನು ನೀಡದಿರಲು ಜಗಳವಾಗದು ನಿಜ
ಪರರು ನೀಡಲು ನೋಡಿ ಸಹಿಸನವನು
ದಾತನ ಬಳಿ ಸೇರಿ ತನ್ನದೇ ಹೋದಂತೆ
ಜಿಹ್ವೆಯಿಂದ ಚಾಡಿ ಹೇಳುತಿರುವ
ಫಲವು ವಿಫಲವಾದರೆ ಬಹು ಸಂತಸಿಸುವ
ಒಳಿತುಂಟಾದರೆ ಮಿಡುಕುತಿರುವ

ತೇಟಗೀತೆ : ಶ್ರೀ ರಮಾನಾಥ ಇಂತಹ ಕ್ರೂರ ನರನು
ಬಿಕ್ಷುಕರ ಶತ್ರುವೆಂದು ಹೇಳಬಹುದು ॥ಭೂ॥

ತಾತ್ಪರ್ಯ : ಲೋಕದಲ್ಲಿ ಲೋಭಿಗಳು ಬಿಕ್ಷುಕರಿಗೆ ದಾನ ಮಾಡುವುದಿಲ್ಲ. ಅವರು ದಾನ ಮಾಡದೆಹೋದರೆ, ಬಿಕ್ಷುಕರು ಜಗಳಕ್ಕೆ ಇಳಿಯುವುದಿಲ್ಲ. ಆದರೂ ಈ ಲೋಭಿಗಳು ಇತರೆ ಧರ್ಮದಾತರ ಬಳಿ ಸೇರಿ ಅವರು ಬಿಕ್ಷೆ ಕೊಡದ ಹಾಗೆ ಚಾಡಿ ಹೇಳುತ್ತಾರೆ. ಆಗ ಅವರ ಮಾತಿಗೆ ಬೆಲೆ ಸಿಕ್ಕಿ ಕೊಡುವ ದಾನ ನಿಂತುಹೋದರೆ ಬಹಳ ಸಂತಸಪಡುತ್ತಾರೆ. ಒಂದು ಸಮಯ ಲೋಭಿಯ ಮಾತನ್ನು ನಿರಾಕರಿಸಿ, ದಾತನು ದಾನ ಮಾಡಿದರೆ, ಲೋಭಿ ಬಹಳ ವ್ಯಥೆಪಡುತ್ತಾನೆ. ಈ ಲೋಭಿ ಜನ ಭಿಕ್ಷುಕರ ಶತ್ರುಗಳು.

17. ಸೀಸ : ತನುವುಲೋ ಪ್ರಾಣಮುಲ್ ತರ಼್ಿಪೊಯ್ಯೆಡಿವೇಳ
ನೀ ಸ್ವರೂಪಮುನು ಧ್ಯಾನಿಂಚು ನತಡು
ನಿಮಿಷ ಮಾತ್ರಮುಲೋನ ನಿನ್ನು ಜೇರುನುಗಾನಿ
ಯಮುನಿಚೇತಕಿ ಚಿಕ್ಕಿ ಶ್ರಮಲಪಡಡು
ಪರಮ ಸಂತೋಷಾನ ಭಜನ ಚೇಸೆಡಿ ವಾರಿ
ಪುಣ್ಯ ಮೇಮನವಚ್ಚು ಭೋಗಿ ಶಯನ
ಮೋಕ್ಷಮ್ಮು ನೀ ದಾಸ ಮುಖ್ಯುಲಕಗುಗಾನಿ
ನರಕ ಮೆಕ್ಕಡಿದಯ್ಯ ನಳಿನನಾಭ

ತೇಟಗೀತೆ : ಕಮಲನಾಭುನಿ ಮಹಿಮಲು ಗಾನಲೇನಿ
ತುಚ್ಛುಲಕುಮುಕ್ತಿ ದೊರಕುಟ ದುರ್ಲಭಂಬು ॥ಭೂ॥

ಅನುವಾದ : ತನುವಿನಲಿಪ್ರಾಣ ತೆರಳುವ ಸಮಯದಿ
ನಿನ್ನ ಸ್ವರೂಪವ ಧ್ಯಾನಿಸುವವ
ನಿಮಿಷ ಮಾತ್ರದಿ ನಿನ್ನ ಸೇರುವ ನಲ್ಲದೆ
ಯಮನ ಕೈಯೊಳು ಸಿಕ್ಕಿ ಬಾಧೆಪಡನು
ಪರಮ ಸಂತೋಷದಿಂ ಭಜನೆ ಮಾಡುವವನ
ಪುಣ್ಯವೆಂತಹುದೆಂಬೆ ಭೋಗಿ ಶಯನ
ಮೋಕ್ಷ ನಿನ್ನದಾಸ ಮುಖ್ಯರಿಗಲ್ಲದೆ
ನರಕವೆಲ್ಲಿಯುದಯ್ಯ ನಳಿನ ನೇತ್ರ

ತೇಟಗೀತೆ : ಕಮಲನಾಭನ ಮಹಿಮೆಯು ತಿಳಿಯದಿರಲು
ಹೀನ ಜನರು ಮುಕ್ತಿಪಡೆಯೆ ಕಠಿಣವಯ್ಯ ॥ಭೂ॥

ತಾತ್ಪರ್ಯ : ಪ್ರಾಣ ಹೋಗುವ ಸಮಯದಲ್ಲಿ ಪರಮಾತ್ಮನನ್ನು ಧ್ಯಾನಿಸುವವನು ಪರಮಾತ್ಮನನ್ನೇ ಸೇರುತ್ತಾನೆ. ಅವನು ಯಮನ ಕೈಗೆ ಸಿಗುವುದಿಲ್ಲ. ಪರಮ ಸಂತೋಷದಿಂದ ಭಜನೆ ಮಾಡುವವರ ಪುಣ್ಯವು ಏನೆನ್ನಬಹುದೋ ? ಮೋಕ್ಷವು ಹರಿದಾಸರಿಗೇ ಹೊರತು ಹೀನ ಮಾನವರಿಗೆ ಸಿಗುವುದಿಲ್ಲ.

18. ಸೀಸ : ನೀಲಮೇಘಶ್ಯಾಮ ನೀವೇ ತಂಡ್ರಿವಿಮಾಕು
ಕಮಲವಾಸಿನಿಮಮು ಗನ್ನತಲ್ಲಿ
ನೀ ಭಕ್ತವರುಲಂತ ನಿಜ ಮೈನ ಬಾಂಧವುಲ್
ನೀ ಕಟಾಕ್ಷಮು ಮಾಕ ನೇಕ ಧನಮು
ನೀ ಕೀರ್ತನಲು ಮಾಕು ಲೋಕ ಪ್ರಪಂಚಂಬು
ನೀ ಸಹಾಯಮು ಮಾಕು ನಿತ್ಯ ಸುಖಮು
ನೀ ಮಂತ್ರಮೆ ಮಾಕು ನಿಷ್ಕಳಂಕಪುವಿದ್ಯ
ನೀಪದ ಧ್ಯಾನಂಬು ನಿತ್ಯ ಜಪಮು

ತೇಟಗೀತೆ : ತೋಯಜಾತಾಕ್ಷ ನೀಪಾದ ತುಳಸಿ ದಳಮು
ರೋಗಮುಲಕೌಷಧಮು ಬ್ರಹ್ಮ ರುದ್ರವಿನುತ ॥ಭೂ॥

ಅನುವಾದ : ನೀಲಮೇಘಶ್ಯಾಮ ನೀನೆ ತಂದೆ ಎಮಗೆ
ಕಮಲವಾಸಿನಿ ನಮ್ಮ ಹೆತ್ತ ತಾಯಿ
ನಿನ್ನ ಭಕ್ತವರರು ನಿಜವಾದ ಬಂಧುಗಳ್
ನಿನ್ನ ಕಟಾಕ್ಷ ಎಮಗೆ ಅಧಿಕ ಧನವು
ನಿನ್ನ ಕೀರ್ತನೆ ಎಮ್ಮಲೋಕ ಪ್ರಪಂಚವು
ನಿನ್ನ ಸಹಾಯವೆ ನಿತ್ಯ ಸುಖವು
ನಿನ್ನ ಮಂತ್ರ ವೆಮಗೆ ನಿಷ್ಕಳಂಕ ಕಲಿಕೆ
ನಿನ್ನ ಪದ ಧ್ಯಾನ ನಿತ್ಯ ಜಪವು

ತೇಟಗೀತೆ : ತೋಯ ಜಾತಾಕ್ಷ ನಿನ್ನಡಿ ತುಳಸಿ ದಳವು
ರೋಗಗಳಿಗೌಷಧ ಬ್ರಹ್ಮ ರುದ್ರವಿನುತ ॥ಭೂ॥

ತಾತ್ಪರ್ಯ : ನೀಲಮೇಘಶ್ಯಾಮನೆ ನಮ್ಮ ಹೆತ್ತ ತಂದೆ. ಕಮಲವಾಸಿನಿ ಲಕ್ಷ್ಮಿದೇವಿಯೇ ಹೆತ್ತ ತಾಯಿ. ಭಕ್ತರೆ ನಿಜವಾದ ಬಂಧು ಜನ. ಪರಮಾತ್ಮನ ಕಟಾಕ್ಷವೇ ಸಂಪತ್ತು. ಪರಮಾತ್ಮ ಚಿಂತನೆಯೆ ನಮ್ಮ ಲೋಕ. ಅವನ ಸಹಾಯ ನಿತ್ಯಸುಖ. ಅವನ ಮಂತ್ರವೆ ನಮ್ಮ ಕಲಿಕೆ. ಅವನ ಪದ ಧ್ಯಾನ ನಿತ್ಯಾನಂದ. ಅವನ ಪಾದದಡಿಯ ತುಳಸಿ ನಮಗೆ ಔಷಧ.

19. ಸೀಸ : ಬ್ರತಿಕಿ ನನ್ನಾಳ್ಳುನೀ ಭಜನ ತಪ್ಪನುಗಾನಿ
ಮರಣ ಕಾಲಮುನಂದು ಮರತುನೇಮೊ
ಅವೇಳ ಯಮದೂತ ಲಾಗ್ರಹಂಬುನವಚ್ಚಿ
ಪ್ರಾಣಮುಲ್ಪೆಕಲಿಂಚಿ ಪಟ್ಟುಟಪುಡು
ಕಫವಾತ ಪೈತ್ಯಮು ಲ್ಗಪ್ಪಗಾ ಭ್ರಮಚೇತ
ಕಪ್ಪಮುದ್ಭವ ಮಂದಿ ಕಷ್ಟಪಡುಚು
ನಾ ಜಿಹ್ವತೋ ನಿನ್ನು ನಾರಾಯಣಾಯಂಚು
ಬಿಲುತುನೋಶ್ರಮು ಜೇತ ಬಿಲುವಲೇನೊ

ತೇಟಿಗೀತೆ : ನಾಟಿಕಿಪ್ಪುಡೆ ಸೇತುನೀ ನಾಮಮಿದಿಗೋ
ತಲಚು ಚವುಲನು ವಿನವಯ್ಯ ಧೈರ್ಯಮುಗನು ॥ಭೂ॥

ಅನುವಾದ : ಜೀವಿತ ಪರ್ಯಂತ ಬಿಡೆ, ನಿನ್ನ ಭಜನೆಯ
ಅಂತ್ಯ ಕಾಲ ಬರಲು ಮರೆವೆನೆಂತೊ
ಅಗಲಾಯಮ ದೂತ ರಾಗ್ರಹದಲಿ ಬಂದು
ಪ್ರಾಣವನು ಸೆಳೆದು ಪಿಡಿವ ಸಮಯ
ಕಫವಾತ ಪೈತ್ಯವು ಕವಿಯಲು ಭ್ರಮೆಯಿಂದ
ಕಂಪನ ಕಾಣಿಸಿ ಕಷ್ಟಪಡುತ
ಎನ್ನ ನಾಲಿಗೆಯಿಂದ ನಿನ್ನಶ್ರೀ ಹರಿ ಎಂದು
ಭಜಿಪೆನೊ ಶ್ರಮದಿಂದ ಭಜಿಸದಿಹೆನೊ

ತೇಟಗೀತೆ : ಇಂದೆ ಈಗಲೆ ಸಲಿಸುವೆ ನಿನ್ನ ಭಜನೆ
ತೆರೆದ ಕಿವಿಯಿಂದ ಆಲಿಸೈ ಧೈರ್ಯ ತಳೆದು ॥ಭೂ॥

ತಾತ್ಪರ್ಯ : ಜೀವಿತ ಕಾಲದಲ್ಲಿ ತಪ್ಪದೆ ನಿನ್ನ ಧ್ಯಾನವನ್ನು ಮಾಡುವೆನು. ಆದರೆ ಅಂತ್ಯ ಕಾಲದಲ್ಲಿ, ಯಮದೂತರು ಬಂದು ಪ್ರಾಣವನ್ನು ಪಿಡಿದೆಳೆಯುವಾಗ, ಕಫವಾತ ಪೈತ್ಯಗಳು ವೃದ್ಧಿಯಾಗಿ ಭ್ರಮೆಯಿಂದ ಕಂಪನ ಉಂಟಾಗಿ, ಕಷ್ಟಪಡುವಾಗ ನಿನ್ನನ್ನು 'ನಾರಾಯಣ' ಎನುತ ಭಜಿಸುವೆನೋ, ಭಜಿಸಲಾರೆನೋ, ಆದರೆ ಇದೋ ಈಗಲೇ ನಿನ್ನ ಭಜನೆಯನ್ನು ಮಾಡುವೆನು.

20. ಸೀಸ : ಪಂಚ ಭೌತಿಕಮು ದುರ್ಬರ ಮೈನ ಕಾಯಂಬು
ಎಪ್ಪುಡೋವಿಡಿಚೇದಿ ಯೆರುಕಲೇದು
ಶತವರ್ಷಮುಲದಾಕ ಮಿತಮುಚೆಪ್ಪಿರಿಗಾನಿ
ನಮ್ಮರಾದಾಮಾಟ ನೆಮ್ಮನಮುನ
ಬಾಲ್ಯ ಮಂದೋಮಂಚಿ ಪ್ರಾಯಮಂದೋ ಲೇಕ
ಮುದಮಿಯಂದೋ ಲೇಕ ಮುಸಲಿಯಂದೋ
ಯೂರನೋ ಯಡವಿನೋ ಯುದಕ ಮಧ್ಯಂಬಾನೋ
ಎಪ್ಪುಡೋ ವಿಡಿಚೇದಿ ಯೇಕ್ಷಣಂಬೋ

ತೇಟಗೀತೆ : ಮರಣಮೇ ನಿಶ್ಚಯಮು ಬುದ್ಧಿಮಂತುಡೈತೆ
ದೇಹಮುನ್ನಂತಲೋ ನಿನ್ನುದೆಲಿಯ ವಲಯು ॥ಭೂ॥

ಅನುವಾದ : ಪಂಚ ಭೌತಿಕವಾದ ದುರ್ಬಲ ಶರೀರ
ಯಾವಾಗ ತೊರೆವುದೋ ತಿಳಿಯಲರಿದು
ಶತವರ್ಷ ಮಿತವೆಂದು ಹೇಳಿದ್ದರೂ ಸಹ
ನಂಬಬೇಕಿಲ್ಲ ಆ ಮಾತು ನಿಜದಿ
ಬಾಲ್ಯದಲ್ಲೋ ಒಳ್ಳೆ ಪ್ರಾಯದಲ್ಲೋ ಇಲ್ಲ
ಪ್ರೌಢಿಮೆಯಲ್ಲೊ ಇಲ್ಲ ಮುದಿತನದಲೊ
ಊರಲೋ ವನದಲೋ ಉದಕಮಧ್ಯವೋ
ಎಂದೊ ಯಾವಾಗಲೊ ಯಾವ ಕ್ಷಣವೊ

ತೇಟಗೀತೆ : ಮರಣವೇ ನಿಶ್ಚಯವು ಬುದ್ಧಿವಂತನಿರಲು
ದೇಹವಿರುವಷ್ಟರಲ್ಲಿ ನಿಮ್ಮ ಸ್ಮರಣೆ ಲೇಸು ॥ಭೂ॥

ತಾತ್ಪರ್ಯ : ಮಾನವನ ಆಯುಸ್ಸು ಪ್ರಮಾಣ ನೂರು ವರುಷವೆಂದು ಹೇಳಿದ್ದಾರೆ. ಆದರೂ ಈ ಮಾತನ್ನು ನಂಬುವಂತಿಲ್ಲ. ಈ ದೇಹ ಪಂಚಭೂತಗಳಿಂದ ನಿರ್ಮಿತವಾದದ್ದು. ಬಾಲ್ಯದಲ್ಲಿಯೋ, ವಯಸ್ಸಿನಲ್ಲಿಯೋ, ಮುದಿತನದಲ್ಲಿಯೋ ಯಾವಾಗಲೋ, ಕಾಡಿನಲ್ಲಿಯೋ, ಊರಿನಲ್ಲಿಯೋ, ನೀರಿನಲ್ಲಿಯೋ ಬಿದ್ದು ನಾಶ ಹೊಂದುತ್ತದೆ. ಮರಣವಂತೂ ನಿಶ್ಚಯ. ಆದ್ದರಿಂದ ಮಾನವನು ಪ್ರಾಣವಿರುವಾಗಲೇ ಪರಮಾತ್ಮನನ್ನು ಧ್ಯಾನ ಮಾಡಬೇಕು.

21\. ಸೀಸ : ತಲ್ಲಿತಂಡ್ರುಲು ಬಾರ್ಯ ತನಯು ಲಾಪ್ತುಲು ಬಾವ
ಮರದು ಲನ್ನಲು ಮೇನ ಮಾಮಗಾರು
ಘನಮುಗಾ ಬಂಧುವುಲ್ ಗಲ್ಗಿನಪ್ಪಟಿಕೈನ
ತಾನು ತರ್ಲಗ ವೆಂಟ ದಗಿಲಿರಾರು
ಯಮುನಿದೂತಲು ಪ್ರಾಣ ಮಪಹರಿಂಚುಕ ಪೋಗ
ಮಮತತೋ ಪೋರಾಡಿ ಮಾನ್ಪಲೇರು
ಬಲಗ ಮಂದುರು ದುಃಖ ಪಡುಟಮಾತ್ರಮೆಕಾನಿ
ಮಿಂಚುಕ ಯಾಯುಷ್ಯ ಮಿಯ್ಯಲೇರು

ತೇಟಗೀತೆ : ಚುಟ್ಟಮುಲಮೀದಿ ಭ್ರಮದೀಸಿ ಚೂರಜಿಕ್ಕಿ
ಸಂತತಮು ಮಿಮ್ಮು ನಮ್ಮುಟ ಸಾರ್ಥಕಂಬು ॥ಭೂ॥

ಅನುವಾದ : ಮಾತ ಪಿತರು ಸತಿ ಸುತರಾಪ್ತರುಂ ಬಾವ
ಮೈದ ಸಹೋದರ ಮಾವನವರು
ಬಹು ಬಂಧು ಬಾಂಧವರೆ ಇದ್ದರೂ ಏನಂತೆ
ತಾನು ಪಯಣಿಸಲು ಹಿಂದೆ ಬರರು
ಯಮದೂತರು ಪ್ರಾಣ ಸೆಳೆದು ಕೊಂಡೊಯ್ಯಲು
ಮಮತೆಯಿಂ ಪೋರಾಡಿ ಬಿಡಿಸರಾರು
ಬಳಗವೆಲ್ಲವು ದುಃಖ ಪಡುವುದಷ್ಟೆ ಹೊರತು
ಹೆಚ್ಚಾಗಿ ಆಯುಷ್ಯ ಕೊಡುವರಿಲ್ಲ

ತೇಟಗೀತೆ : ಬಂಧುಗಳ ಮೇಲೆ ಮಮತೆಯು ಕಡಿದು ತೊರೆದು
ಸಂತಸದಿ ನಿಮ್ಮ ನಂಬಲು ಅದುವೆಯುಕ್ತಿ ॥ಭೂ॥

ತಾತ್ಪರ್ಯ : ತಂದೆ, ತಾಯಿ, ಅಣ್ಣ, ತಮ್ಮ, ಸೋದರಮಾವ, ಭಾವಮೈದ ಇತರ ಬಂಧುಗಳಿದ್ದರೂ, ಯಮದೂತರು ತನ್ನನ್ನು ಕರೆದೊಯ್ಯುವಾಗ, ಪ್ರೀತಿಯಿಂದ ಹೋರಾಡಿ ಬಿಡಿಸಲು ಯಾರೂ ಸಮರ್ಥರಲ್ಲ. ಬರೀ ದುಃಖ ಪಡುತ್ತಾರೆಯೇ ಹೊರತು ಆಯುಷ್ಯವನ್ನು ಹೆಚ್ಚಿಸಲಾರರು.

**22.** ಸೀಸ : ಇಭರಾಜವರದ ನಿನ್ನೆಂತ ಪಿಲ್ಚಿನಗಾನಿ
ಮಾರುಪಲ್ಕವದೇಮಿ ಮೌನತನಮು
ಮುನಿಜನಾರ್ಚಿತ ನಿನ್ನು ಮ್ರೊಕ್ಕಿವೇಡಿನಗಾನಿ
ಕಂಡ್ಲ ಜೂಡವದೇಮಿ ಗಡಸುತನಮು
ಚಾಲದೈನ್ಯಮು ನೊಂದಿ ಚಾಟು ಜೊಚ್ಚಿನಗಾನಿ
ಭಾಗ್ಯ ಮಿಯ್ಯವದೇಮಿ ಪ್ರೌಡಿತನಮು
ಸ್ಥಿರಮುಗಾ ನೀಪಾದ ಸೇವ ಜೇಸೆದನಂಟೆ
ದೊರಕ ಜಾಲವದೇಮಿ ಧೂರ್ತತನಮು

ತೇಟಗೀತೆ : ಮೋಕ್ಷದಾಯಕ ಯಿಟುವಂಟಿ ಮೂರ್ಖಜನುನಿ
ಕಷ್ಟಪೆಟ್ಟಿತೆ ನೀಕೇಮಿ ಕಡುಪು ನಿಂಡು ॥ಭೂ॥

ಅನುವಾದ : ಇಭರಾಜವರದನಿ ನ್ನೆನಿತು ಕರೆದರು ನೀ
ಮರು ನುಡಿಯದಿರುವೆ ಮೌನವೇನೊ
ಮುನಿಜನಾರ್ಚಿತ ನಿನ್ನ ಮುಗಿದು ಯಾಚಿಸಿದರು
ಕಣ್ಣ ತೆರೆದು ನೋಡೆ ಕಠಟುತನವೆ
ಬಹಳ ದೈನ್ಯ ತಳೆದು ಸನಿಹ ಬಂದರು ಸಹ
ಭಾಗ್ಯವೀಯದಿರುವೆ ಪ್ರೌಢತನವೆ
ಸ್ಥಿರದಿ ನಿಮ್ಮ ಚರಣ ಸೇವೆಗೈವೆನೆನಲು
ಸಿಗದಿರುವೆಯದೇಕೆ ಧೂರ್ತತನವೊ

ತೇಟಗೀತೆ : ಮೋಕ್ಷದಾಯಕ ನನ್ನಂಥ ಮೂರ್ಖನರನ
ಕಷ್ಟಗೊಳಿಸಲು ನಿನಗೇನು ಹೊಟ್ಟೆತುಂಬು ॥ಭೂ॥

ತಾತ್ಪರ್ಯ : ಗಜೇಂದ್ರನನ್ನು ಸಲಹಿದವನೇ, ಎಷ್ಟು ವಿಧವಾಗಿ ನಿನ್ನ ಕರೆದರೂ ಸಹ, ನೀನು ಮರುಮಾತನಾಡದಿರುವೆ, ಇದೇನು ಮೌನವ್ರೋ ? ಎಷ್ಟೋ ಯಾಚಿಸಿದರೂ ಕಣ್ತೆರೆದು ನೋಡೆ ಇದೇನು ನಿರ್ದಯತ್ವವೆ ? ಬಹಳ ದೈನ್ಯದಿಂದ ನಿನ್ನನ್ನು ಪ್ರಾರ್ಥಿಸಿದರೂ ಭಾಗ್ಯವನ್ನು ಕೊಡದಿರುವೆ, ಇದೇನು ನಿನ್ನ ಪ್ರೌಢತನವೊ ? ಸ್ಥಿರವಾಗಿ ನಿನ್ನ ಚರಣ ಸೇವೆ ಮಾಡಲು ನೀ ಸಿಗದೆ ಇರುವೆ, ಇದೇನು ದೂರ್ತತನವೊ? ಮೋಕ್ಷದಾಯಕನಾದ ಪರಮಾತ್ಮನೇ, ನನ್ನಂಥ ಮೂರ್ಖ ನನ್ನು ಕಷ್ಟಗೊಳಿಸಿದರೆ, ನಿನಗೆ ಸಿಗುವುದಾದರೂ ಏನು ?

23. ಸೀಸ : ನೀಮಿದಿ ಕೀರ್ತನಲ್ ನಿತ್ಯಗಾನವಮು ಜೇಸಿ
ರಮ್ಯ ವೊಂದಿಂಪ ನಾರದುಡಗಾನು
ಸಾವಧಾನಮುಗ ನೀ ಚರಣ ಪಂಕಜ ಸೇವ
ಜೇಸಿ ಮೆಪ್ಪಿಂಪಂಗ ಶಬರಿ ಗಾನು
ಬಾಲ್ಯ ಮಪ್ಪಟಿನುಂಡಿ ಭಕ್ತಿ ನೀಯಂದುನ
ಗಲುಗನು ಪ್ರಹ್ಲಾದ ಘನುಡಗಾನು
ಘನಮುಗಾನೀಮೀದ ಗ್ರಂಥಮುಲ್ ಕಲ್ಪಿಂಚಿ
ವಿನುತಿ ಸೇಯುನು ವ್ಯಾಸ ಮುನಿನಿಗಾನು

ತೇಟಗೀತೆ : ಸಾಧುಡನು ಮೂರ್ಖಮತಿ ಮನು ಜಾದಮುಡನು
ಹೀನುಡನು ಸುಮ್ಮಿ ನೀವು ನನ್ನೇಲು ಕೊನುಮು ॥ಭೂ॥

ಅನುವಾದ : ನಿನ್ನ ಕುರಿತು ನಿತ್ಯ ಗಾನವಂ ಮಾಡುತ್ತ
ರಮ್ಯಗೊಳಿಸಲು ನಾರದನು ಅಲ್ಲ
ಸಾವದಾನದಿ ನಿನ್ನ ಚರಣ ಪಂಕಜ ಸೇವೆ
ಸಲಿಸಿ ಮೆಚ್ಚಿಸಲು ನಾ ಶಬರಿಯಲ್ಲ
ಬಾಲ್ಯದಿಂದಲೆ ನಿನ್ನ ನಿಜಭಕ್ತಿ ಬಾವವು
ಉದಿಸಲು ಪ್ರಹ್ಲಾದ ಘನನು ಅಲ್ಲ
ಘನವಾಗಿ ನಿನ್ಮೇಲೆ ಗ್ರಂಥಗಳ ರಚಿಸಿ
ವಿನುತಿಸಲು ವ್ಯಾಸ ಮುನಿಯು ಅಲ್ಲ

ತೇಟಗೀತೆ : ಸಾಧು ಬಹು ಮೂರ್ಖಮತಿಯಂತೆ ಮನು ಜಾಧಮನು
ಹೀನ ನಾನಯ್ಯ ಎನ್ನ ಕೈ ಬಿಡದೆ ಸಲಹು ॥ಭೂ॥

ತಾತ್ಪರ್ಯ : ನಾರದನಂತೆ ನಿತ್ಯ ಗಾನವನ್ನು ಮಾಡಿ, ಶಬರಿಯಂತೆ ಸಾವಧಾನವಾಗಿ ಪಾದಸೇವೆ ಮಾಡಿ, ಪ್ರಹ್ಲಾದನಂತೆ ಬಾಲ್ಯದಿಂದಲೂ ನಿನ್ನ ಭಕ್ತಿಯಿಂದ ಸ್ಮರಿಸಿ, ವ್ಯಾಸ ಮಹರ್ಷಿಯಂತೆ ಅನೇಕ ಗ್ರಂಥಗಳನ್ನು ರಚಿಸಿ, ನಿನ್ನನ್ನು ಮೆಚ್ಚಿಸಲಾಗದು. ಪರಮಾತ್ಮ ನಾನು ಬಹುಮೂರ್ಖ, ಹೀನ ಮನುಜ, ಕರುಣೆ ತೋರಿ ಕೈಬಿಡದೆ ಸಲಹು

**24.** ಸೀಸ : ಅತಿಶಯಂಬುಗ ಗಲ್ಲ ಲಾಡನೇರ್ಚಿತಿಗಾನಿ
ಸಾಟಿಗಾ ಸತ್ಯಮು ಲ್ಬಲುಕ ನೇರ
ಸತ್ಕಾರ್ಯ ವಿಘ್ನಮುಲ ಸಲುಪನೇರ್ಚಿತಿಗಾನಿ
ಯಿಷ್ಟವೊಂದಗ ನಿರ್ವಹಿಂಪನೇರ
ನೊಕರಿ ಸೊಮ್ಮುಕುದೋಸಿ ಲೊಗ್ಗನೇರ್ಚಿತಿಗಾನಿ
ಚೆಲುವುಗಾ ಧರ್ಮಂಬು ಚೇಯ ನೇರ
ಧನಮು ವಿಯ್ಯಂಗವೊದ್ದನಗ ನೇರ್ಚಿತಿಗಾನಿ
ಶೀಘ್ರಮಿಚ್ಚೋಟಟ್ಟು ಚೆಪ್ಪನೇರ

ತೇಟಗೀತೆ : ಪಂಕಜಾತಾಕ್ಷ ನೇನೆಂತ ಪಾತಕುಡನು
ತಪ್ಪುಲನ್ನಿಯು ಕ್ಷಮಿಯಿಂಪು ತಂಡ್ರಿ ನೀವೆ ॥ಭೂ॥

ಅನುವಾದ : ಅತಿಶಯದಿ ಹುಸಿಯ ನುಡಿಯೆ ಕಲಿತೆ ನಾನು
ನಿಯಮದೊಳ್ ನಿಜವಾಖ್ಯ ನುಡಿಯಲಿಲ್ಲ
ಸತ್ಕಾರ್ಯಗಳ ವಿಘ್ನ ಗೊಳಿಸಿದೆನೆ ಹೊರತು
ಇಷ್ಟದೊಳ್ ನಿರ್ವಾಹ ಮಾಡಲಿಲ್ಲ
ಪರರೊಡವೆಯ ದೋಚಲರಿತೆನೆ ಹೊರತಾಗಿ
ಒಲುಮೆಯಿಂದ ಧರ್ಮವ ಮಾಡಲಿಲ್ಲ
ಧನವನೀಯಲು ಬೇಡವೆಂದೆನೆ ಹೊರತಾಗಿ
ಶೀಘ್ರದೊಳು ಕೊಡಲು ಹೇಳಲಿಲ್ಲ

ತೇಟಗೀತೆ : ಪಂಕಜಾತಾಕ್ಷ ನಾನತಿ ಪಾತಕನಿಜ
ತಪ್ಪುಗಳನೆಲ್ಲ ಮನ್ನಿಸೋ ತಂದೆ ನೀನು ॥ಭೂ॥

ತಾತ್ಪರ್ಯ : ಬಹುವಾಗಿ ಸುಳ್ಳು ಹೇಳಿದೆ ನಿಜವನ್ನು ಹೇಳಲಿಲ್ಲ. ಸತ್ಕಾರ್ಯಗಳಿಗೆ ಅಡ್ಡಿ ತಂದೆ, ಪರರೊಡವೆಯ ಅಪಹರಿಸಿದೆ, ಧರ್ಮ ಮಾಡಲಿಲ್ಲ, ಧರ್ಮ ಮಾಡುವವರನ್ನು ತಡೆದೆ. ಪರಮಾತ್ಮನೆ, ಹೇ ತಂದೆ, ಈ ಪಾತಕಗಳನ್ನು ಮನ್ನಿಸಿ, ಎನ್ನ ಸಲಹು.

25. ಸೀಸ : ಊರ್ವಿಲೋನಾಯುಷ್ಯ ಮುನ್ನ ಪರ್ಯಂತಂಬು
ಮಾಯ ಸಂಸಾರಂಬು ಮರಗಿ ನರುಡು
ಸಕಲ ಪಾಪಮುಲೈತೆ ಸಂಗ್ರಹಿಂಚುನುಗಾನಿ
ನಿನ್ನು ಜೇರಡಿಯುಕ್ತಿ ನೇರ್ವಲೇದು
ತುದನು ಕಾಲುನಿ ವದ್ದಿ ದೂತಲಿದ್ದರು ವಚ್ಚಿ
ಗುಂಜುಕು ಚನಿವಾರು ಗೊಟ್ಟು ಜುಂಡ
ಹಿಂಸ ಕೋರ್ವಗಲೇಕ ಯೇಡಿಚಿ ಗುಂತುಲುವೇಸಿ
ದಿಕ್ಕು ಲೇದನಿ ನಾಲ್ಗು ದಿಶಲು ಜೂಡ

ತೇಟಗೀತೆ : ತನ್ನು ವಿಡಿಸಿಂಪವಚ್ಚೆಡಿ ದನ್ಯುರೇದಿ
ಮುಂದು ನೀ ದಾಸುಡೈಯುಂಟೆ ಮುಕ್ತಿಗಲುಗು ॥ಭೂ॥

ಅನುವಾದ : ಭುವಿಯೊಳ್ ಆಯುಷ್ಯವಿರುವ ಪರ್ಯಂತವು
ಮಾಯ ಸಂಸಾರದೊಳ್ ಮುಳುಗಿ ನರನು
ಸಕಲ ಪಾಪವ ಸಂಗ್ರಹಿಸಿದನೆ ಹೊರತಾಗಿ
ನಿನ್ನ ಸೇರುವ ಯುಕ್ತಿ ಕಲಿಯಲಿಲ್ಲ
ಕಡೆಗೆ ಕಾಲನ ದೂತರಿರುವರು ಬಳಿ ಬಂದು
ಸೆಳೆದು ಎಳೆದೆಳೆದು ಗುದ್ದುತಿರಲು
ಹಿಂಸೆಯ ತಾಳಲಾರದೆ ಅತ್ತು ಮುಗ್ಗರಿಸಿ
ದಿಕ್ಕು ಕಾಣದೆ ನಾಕು ದಿಶೆಯ ನೋಡೆ

ತೇಟಗೀತೆ : ತನ್ನ ಬಿಡಿಸಲು ಬರುವಂತ ಧನ್ಯರಾರು
ಮೊದಲೆ ನಿನ್ನ ದಾಸನೆನಿಸೆ ಮುಕ್ತಿ ದೊರೆಗು ॥ಭೂ॥

ತಾತ್ಪರ್ಯ : ಆಯುಷ್ಯಪೂರ್ತಿ, ಮಾನವನು, ಮಾಯ ಸಂಸಾರದಲ್ಲಿ ಮುಳುಗಿ ಅನೇಕ ಪಾಪಗಳನ್ನು ಕೂಡಿ ಹಾಕುತ್ತಾನೆ. ಪರಮಾತ್ಮನನ್ನು ಸೇರುವ ಯುಕ್ತಿಯನ್ನು ಕಲಿಯಲಾರ. ಕಡೆಯಲ್ಲಿ ಯಮಧೂತರು ಹಿಡಿದು ಸೆಳೆಯುವಾಗ ಹಿಂಸೆಯಿಂದ ಚೀರಾಡಿ ಕೂಗಾಡಿದರೂ ಬಿಡಿಸುವ ಶಕ್ತಿಶಾಲಿಗಳು ಯಾರೂ ಇಲ್ಲ. ಸಾವಿಗೆ ಮೊದಲೆ, ಹರಿದಾಸನಾಗಿ, ಹರಿಸೇವೆ ಮಾಡಿದರೆ, ಮುಕ್ತಿ ದೊರೆಯುವದು.

26. ಸೀಸ : ಅಧಿಕ ವಿದ್ಯಾವಂತುಲ ಪ್ರಯೋಜಕುಲ್ಸೈರಿ
ಪೂರ್ಣ ಶುಂಠಲು ಸಭಾ ಪೂಜ್ಯಲೈರಿ
ಸತ್ಯವಂತುಲ ಮಾಟ ಜನವಿರೋದಂಬಾಯೆ
ವದರು ಪೋತುಲ ಮಾಟ ವಾಸಿ ಕೆಕ್ಕೆ
ಧರ್ಮವಾಸನಪರಲು ದಾರಿದ್ರ್ಯ ಮೊಂದಿರಿ
ಪರಮ ಲೋಬುಲು ಧನ ಪ್ರಾಪ್ತುಲೈರಿ
ಪುಣ್ಯವಂತುಲು ರೋಗ ಭೂತ ಪೀಡಿತು ಲೈರಿ
ದುಷ್ಟಮಾನವುಲು ವರ್ಧಿಷ್ಟು ಲೈರಿ

ತೇಟಗೀತೆ ; ಪಕ್ಷಿವಾಹನ ಮಾವಂಟಿ ಭಿಕ್ಷುಕುಲಕು
ಶಕ್ತಿಲೇದಾಯೆನಿಕ ನೀವೆ ದಿಕ್ಕು ಮಾಕು

ಅನುವಾದ : ಅಧಿಕ ವಿದ್ಯಾವಂತರ ಪ್ರಯೋಜನಕರಾಗಿ
ಪೂರ್ಣ ಶುಂಠರು ಸಭಾ ಪೂಜ್ಯರಾದರ್
ಸತ್ಯವಂತರ ನುಡಿ ಜನವಿರೋಧವೆ ಆಯಿತ್ತು
ಒದರು ಜನರ ಮಾತು ಮಾನ್ಯವಾಯಿತ್ತು
ಧರ್ಮಪಾರಾಯಣರು ದರಿದ್ರರಾದರು
ಪರಮ ಲೋಭಿಗೆ ಧನ ಪ್ರಾಪ್ತಿಯಾಯಿತ್ತು
ಪುಣ್ಯವಂತರು ರೋಗ ಧೂತ ಪೀಡಿತರಾಗಿ
ದುಷ್ಟ ಮಾನವರು ಪ್ರವರ್ಧಿಸಿದರು.

ತೇಟಗೀತೆ : ಪಕ್ಷಿವಾಹನ ನಮ್ಮಂಥ ಭಿಕ್ಷುಕರಿಗೆ
ಶಕ್ತಿಯಿಲ್ಲವು ಗತಿ ನೀನೆ ಇನ್ನು ನಮಗೆ ॥ಭೂ॥

ತಾತ್ಪರ್ಯ : ಅಧಿಕ ವಿದ್ಯಾವಂತರು ಅಪ್ರಯೋಜಕರಾದರು. ಮೂರ್ಖರು ಸಭಾ ಪೂಜ್ಯರಾದರು. ಸತ್ಯವಂತರ ಮಾತು ಜನವಿರೋಧವನ್ನು ತಂದಿತು. ವಾಚಾಳಿಗಳ ಮಾತು ಮಾನ್ಯವಾಯಿತ್ತು. ಧರ್ಮವನ್ನು ಪಾಲಿಸುವವರು ದರಿದ್ರರಾದರು. ಲೋಭಿಗಳಿಗೆ ಧನ ಶೇಖರಣೆಯಾಯಿತ್ತು. ಪುಣ್ಯವಂತರು ರೋಗಗ್ರಸ್ತರಾದರು. ದುಷ್ಟ ಮಾನವರು ಏಳಿಗೆಯಾದರು. ಇನ್ನು ಹರಿಭಕ್ತರಾದ ಭಿಕ್ಷುಕರಿಗೆ ಶಕ್ತಿ ಎಲ್ಲಿಂದ ಬರಬೇಕು. ಅವರಿಗೆ ಪರಮಾತ್ಮನೇ ದಿಕ್ಕು.

27. ಸೀಸ : ಭುಜ ಬಲಂಬುನ ಪೆದ್ದ ಪುಲುಲ ಜಂಪಗವಚ್ಚು
ಪಾಮುಕಂಠಮುಚೇತ ಬಟ್ಟವಚ್ಚು
ಬ್ರಹ್ಮರಾಕ್ಷಸ ಕೋಟ್ಲ ಬಾರ ದೋಲಗವಚ್ಚು
ಮನುಜುಲರೋಗಮು ಲ್ಮಾನ್ಪವಚ್ಚು
ಜಿಹ್ವಕಿಷ್ಟಮುಗಾನಿ ಚೇದುಮ್ರಿಂಗಗವಚ್ಚು
ಪದುನು ಖಡ್ಗಮುಚೇತ ನದುಮವಚ್ಚು
ಕಷ್ಟವೊಂದುಚು ಮುಂಡ್ಲ ಕಂಪಲೊ ಜೊರವಚ್ಚು
ದಿಟ್ಟ ಪೋತುಲನೋಳ್ಳು ಕಟ್ಟವಚ್ಚು

ತೇಟಗೀತೆ : ಪುಡಮಿಲೋ ದುಷ್ಟಲಕು ಜ್ಞಾನ ಬೋಧದೆಲಿಪಿ
ಸಜ್ಜನುಲಚೇಯ ಲೇಡೆಂತ ಚತುರುಡ್ಮೈನ ॥ಭೂ॥

ಅನುವಾದ : ಭುಜ ಬಲದಿ ವ್ಯಾಘ್ರಗಳನು ಕೊಲ್ಲಬಹುದು
ಭೋಗಿ ಕಂಠವ ಕೈಲಿ ಹಿಡಿಯಬಹುದು
ಬ್ರಹ್ಮರಾಕ್ಷಸಕೋಟಿ ದೂರ ಅಟ್ಟಬಹುದು
ಜನರ ರೋಗಗಳನು ಹರಿಸಬಹುದು
ಜಿಹ್ವೆಗಿಷ್ಟವಿರದ ಕಹಿಯ ನುಂಗಬಹುದು
ಹದನು ಖಡ್ಗವ ಕೈಲಿ ಆದುಮಬಹುದು
ಕಷ್ಟಪಡುತ ಮುಳ್ಳು ಪೊದೆಯ ಪೊಗಬಹುದು
ದಿಟ್ಟ ಕೋಣನ ಬಾಯಿ ಕಟ್ಟಬಹುದು

ತೇಟಗೀತೆ ; ಪೃಥ್ವಿಯಲಿ ದುಷ್ಟಂಗೆ ಜ್ಞಾನ ಬೋಧೆಗೈದು
ಸಜ್ಜನನ ಮಾಡನೆಂತ ಚತುರನೆ ಇರಲು ॥ಭೂ॥

ತಾತ್ಪರ್ಯ : ಶಕ್ತಿಯಿಂದ, ಬುದ್ಧಿಯಿಂದ ಹುಲಿಯನ್ನು ಕೊಲ್ಲಬಹುದು. ಹಾವಿನ ಕುತ್ತಿಗೆಯನ್ನು ಕೈಯಲ್ಲಿ ಹಿಡಿಯಬಹುದು. ಬ್ರಹ್ಮ ರಾಕ್ಷಸರನ್ನು ಓಡಿಸಬಹುದು. ರೋಗಗಳನ್ನು ಔಷಧಿಗಳಿಂದ ವಾಸಿ ಮಾಡಬಹುದು. ನಾಲಿಗೆಗೆ ಕಷ್ಟವಾದರೂ ಕಹಿಯನ್ನು ನುಂಗಬಹುದು. ಕಷ್ಟಪಟ್ಟು ಮುಳ್ಳಿನ ಪೊದೆಯಲ್ಲಿ ನುಗ್ಗಬಹುದು. ಆದರೆ ದುಷ್ಟನಿಗೆ ಜ್ಞಾನ ಬೋಧೆ ಮಾಡಿ ಒಳ್ಳೆಯವನನ್ನಾಗಿ ಮಾಡಲು ಎಂಥಹ ಜಾಣನಿಗೂ ಸಾಧ್ಯವಿಲ್ಲ.

28. ಸೀಸ : ಅವನಿಲೋಗಲ ಯಾತ್ರಲನ್ನಿ ಚೇಯಗವಚ್ಚು
ಮುಖ್ಯಮೌ ನದುಲಂದು ಮುನುಗವಚ್ಚು
ಮುಕ್ಕುಪಟ್ಟುಕ ಸಂಧ್ಯ ಮೊನಸಿವಾರ್ವಗವಚ್ಚು
ತಿನ್ನಗಾ ಜಪಮಾಲ ದ್ರಿಪ್ಪವಚ್ಚು
ವೇದಾಲ ಕರ್ಥಂಬು ವಿರಿಚಿ ಚೆಪ್ಪಗವಚ್ಚು
ಶ್ರೇಷ್ಠ ಕ್ರುತುವುಲೆಲ್ಲ ಚೇಯುವಚ್ಚು
ಧನಮು ಲಕ್ಷಲ ಕೋಟ್ಲ ದಾನಮಿಯ್ಯಗವಚ್ಚು
ನೈಷ್ಟಿಕಾಚಾರಮುಲ್ ನಡುಪವಚ್ಚು

ತೇಟಗೀತೆ : ಚಿತ್ತ ಮನ್ಯಸ್ಥಲಂಬುನ ಚೇರಕುಂಡ
ನೀಪದಾಂಬೋಜಮುಲಂದು ನಿಲುಪರಾದು ॥ಭೂ॥

ಅನುವಾದ : ಭುವಿಯಲಿ ಸಕಲ ಯಾತ್ರೆಗಳ ಮಾಡಬಹುದು
ಶ್ರದ್ಧೆಯಿಂದ ನದಿಗಳೊಳ್ ಮುಳುಗಬಹುದು
ಮೂಗು ಹಿಡಿದು ಸಂಧ್ಯಾನವನು ಮಾಡಬಹುದು
ನಯವಾಗಿ ಜಪಮಾಲೆ ಚಲಿಸಬಹುದು
ವೇದಕ್ಕೆ ಅರ್ಥವ ಬಿಡಿಸಿ ಹೇಳಬಹುದು
ಶ್ರೇಷ್ಠ ಯಾಗಗಳೆಲ್ಲ ಮಾಡಬಹುದು
ಧನ ಲಕ್ಷ ಕೋಟಿಯು ದಾನ ಮಾಡಬಹುದು
ನೈಷ್ಟಿಕಾಚಾರವ ನಡೆಸಬಹುದು

ತೇಟಗೀತೆ : ಚಿತ್ತ ಅನ್ಯಸ್ಥಳಕೆ ಹೋಗದಂತೆ ಮಾಡಿ
ನಿನ್ನ ಪದಕಮಲಗಳಲ್ಲಿ ನಿಲಿಸೆ ಬರದು ॥ಭೂ॥

ತಾತ್ಪರ್ಯ : ಪ್ರಪಂಚದಲ್ಲಿ ತೀರ್ಥಯಾತ್ರೆಗಳನ್ನು ಮಾಡಬಹುದು. ಸಂಧ್ಯಾವಂದನೆ, ಜಪ ಇವುಗಳನ್ನು ಮಾಡಬಹುದು. ವೇದಕ್ಕೆ ಅರ್ಥವನ್ನು ನೀಡಬಹುದು. ಯಾಗಗಳನ್ನು, ದಾನಾದಿಗಳನ್ನು ಮಾಡಬಹುದು. ಆದರೆ ಮನಸ್ಸು ಅನ್ಯ ಸ್ಥಳದಲ್ಲಿ ಹರಿಯದೆ ಪರಮಾತ್ಮನ ಚಿಂತೆಯಲ್ಲಿ ನಿಲ್ಲಿಸುವುದು ಮಾತ್ರ ಬಹು ಕಷ್ಟತರವಾದುದು.

29. ಸೀಸ : ಕರ್ಣ ಯುಗ್ಮಮುನನೀ ಕಥಲು ಸೋಕಿತೆ ಚಾಲು
ಪೆದ್ದ ಪೋಗುಲ ಜೋಳ್ಳು ಪೆಟ್ಟಿನಟ್ಲು
ಚೇತು ಲೆತ್ತುಚು ಪೂಜ ಚೇಯಗಲ್ಲಿತೆ ಚಾಲು
ದೊರೆಯಗಾ ಕಡಿಯಾಲು ತೊಡಗಿನಟ್ಲು
ಮೊನಸಿ ಮಸ್ತಕಮುತೋ ಮ್ರೊಕ್ಕಗಲ್ಲಿತೆ ಚಾಲು
ಚೆಲುವ ಮ್ಮೈನ ತುರಾಯಿ ಚೆಕ್ಕಿನಟ್ಲು
ಗಳಮು ನೊವ್ವಗ ನಿನ್ನು ಬಲುಕಗಲ್ಗಿತೆ ಚಾಲು
ವಿಂತಗಾ ಕಡಿಯಾಲು ವೇಸಿನಟ್ಲು

ತೇಟಗೀತೆ : ಪ್ರಾಣಿ ನಿನು ಗೊಲ್ಚುಟೇಸರ್ವ ಭೂಷಣಂಬು
ಲಿತರ ಭೂಷಣ ಮುಲು ಕಿಚ್ಚಯಿಂಪನೇಲ ॥ಭೂ॥

ಅನುವಾದ : ಕರ್ಣದ್ವಯಕೆ ನಿನ್ನ ಕಥೆ ಸೋಕಿದರೆ ಸಾಕು
ನೀಳ ಲೋಲಾಕು ತೊಟ್ಟ ಹಾಗೆ
ಕರವೆತ್ತಿ ನಮಿಸಿ ಪೂಜೆಯ ಮಾಡಿದರೆ ಸಾಕು
ಚಲುವಾದ ಕಡಗವ ತೊಡಿಸಿದಂತೆ
ಭಕ್ತಿಯಿಂದ ಶಿರಬಾಗಿ ನಮಿಸಿದೊಡದು ಸಾಕು
ರಮ್ಯವಾದ ತುರಾಯಿ ಧರಿಸಿದಂತೆ
ಕಂಠನೊಯ್ವಂತೆ ಕಥೆಯ ಹೇಳಿದರೆ ಸಾಕು
ರಮಣೀಯ ಕಂಠಿಯ ಕಟ್ಟಿದಂತೆ

ತೇಟಗೀತೆ : ಸೇರಿ ನಿನ್ನ ಸ್ಮರಿಸುವುದೆ ಬಹು ಭೂಷಣವು
ಇತರ ಭೂಷಣಗಳ್ಗೆ ಇಷ್ಟಪಡಲೇಕೆ ॥ಭೂ॥

ತಾತ್ಪರ್ಯ : ಪರಮಾತ್ಮನ ಕಥೆ ಕಿವಿಗಳಿಗೆ ಸೋಕಿದರೆ ಸಾಕು ನೀಳವಾದ ಲೋಲಾಕು ಕಿವಿಗಳಲ್ಲಿ ಧರಿಸಿದಂತೆ, ಕೈಗಳೆತ್ತಿ ಪೂಜೆ ಮಾಡಿದರೆ ಅಂದವಾದ ಕಡಗಹಾಕಿಕೊಂಡಂತೆ, ತಲೆಬಾಗಿ ನಮಸ್ಕಾರ ಮಾಡಲು ಅಂದವಾದ ಟೋಪಿಯನ್ನು ಧರಿಸಿದಂತೆ, ಕಂಠ ನೋಯುವ ಹಾಗೆ ಹರಿಕಥೆಗಳನ್ನು ಹೇಳಿದರೆ ಸಾಕು, ಕಂಠಿಹಾರವನ್ನು ಧರಿಸಿದಂತೆ, ಸಂತೋಷ ವಾಗುತ್ತದೆ. ಎಲ್ಲಾ ಭೂಷಣಗಳಿಗಿಂತ ಪರಮಾತ್ಮನ ಸ್ಮರಣೆ ಹೆಚ್ಚು ಭೂಷಣವಾದುದು.

30. ಸೀಸ : ಭೂಪವನ ರಕ್ಷಕ ನಿನ್ನು ಪೊಗಡ ನೇರನಿ ನೋರು
ಪ್ರಜಕ ಗೋಚರ ವ್ಯೈನ ಪಾಡು ಬೊಂದ
ಸುರವರಾರ್ಚಿತ ನಿನ್ನು ಜೂಡಗೋರನಿ ಕಂಡ್ಲು
ಜಲಮು ಲೋಪಲ ನೆಲಿ ಸರಪುಗುಂಡ್ಲು
ಶ್ರೀರಮಾಧಿಪ ನೀಕು ಸೇವ ಚೇಯನಿ ಮೇನು
ಕೂಲಿ ಕಮ್ಮುಡುಪೋನಿ ಕೊಲಿಮಿ ತಿತ್ತಿ
ವೇಡ್ಕ ತೋ ನೀ ಕಥಲ್ ವಿನನಿ ಕರ್ಣಮುಲ್ಸೈತೆ
ಗಠಿಣ ಶಿಲಾದುಲಗಲುಗು ತೊಲಲು

ತೇಟಗೀತೆ ಪದ್ಮಲೋಚನ ನೀ ಮೀದ ಭಕ್ತಿಲೇನಿ
ಮಾನವುಡು ರೆಂಡು ಪಾದಾಲ ಮಹಿಷಮ್ಮೈಯ್ಯ ॥ಭೂ॥

ಅನುವಾದ : ಭುವನ ರಕ್ಷಕ ನಿನ್ನ ಹೊಗಳಲಾರದ ಬಾಯಿ
ಪ್ರಜೆಗೆ ಗೋಚರವಿಪ್ಪ ಹಾಳು ಬಾವಿ
ಸುರವರಾರ್ಚಿತ ನಿನ್ನ ನೋಡಲಾರದ ಕಣ್ಣು
ಜಲದೊಳಗಿನ ಲೋಳೆ ಸರದ ಗುಂಡು
ಶ್ರೀರಮಾಧಿಪ ನಿನ್ನ ಸೇವೆಗೈಯದ ತನು
ಬಾಡಿಗೆಗೆ ಸಿಗುವ ಕೊಲುಮೆ ತಿದಿಯು
ಇಂಪಾಗಿ ನಿನ್ನಯ ಕತೆ ಕೇಳದ ಕಿವಿಯು
ಕಠಿಣ ಶಿಲೆಯುಲಿಹ ರಂಧ್ರವಯ್ಯ

ತೇಟಗೀತೆ : ಪದ್ಮಲೋಚನ ನಿನ್ನಲ್ಲಿ ಭಕ್ತಿ ಇರದ
ನರನು ಎರಡು ಪಾದಗಳುಳ್ಳ ಮಹಿಷವಯ್ಯ ॥ಭೂ॥

ತಾತ್ಪರ್ಯ : ಪರಮಾತ್ಮನನ್ನು ಹೊಗಳದೇ ಇರುವ ಬಾಯಿ, ಬಿಲಕ್ಕೆ ಸಮಾನ. ದೇವತೆಗಳಿಂದ ಪೂಜೆಗೊಳ್ಳುವ ಆ ದೇವನನ್ನು ನೋಡಲಾರದ ಕಣ್ಣು ನೀರಿನೊಳಗಿರುವ ಲೋಳಿಸರ ಗುಂಡು ಪರಮಾತ್ಮನ ಸೇವೆ ಮಾಡದ ಬಾಡಿಗೆಗೆ ಸಿಗುವ ಕೊಲಿಮೆ ತಿದಿಯು, ಪ್ರೀತಿಯಿಂದ ಪರಮಾತ್ಮನ ಕಥೆಗಳನ್ನು ಕೇಳದ ಕಿವಿ ಕಲ್ಲಿನ ರಂಧ್ರಗಳಿದ್ದಂತೆ. ಪದ್ಮನಾಭನಲ್ಲಿ ಭಕ್ತಿ ಇರದ ಮಾನವನು ಎರಡು ಕಾಲಿನ ಎಮ್ಮೆ ಇದ್ದ ಹಾಗೆ.

31. ಸೀಸ : ಅತಿ ವಿದ್ಯ ನೇರ್ಚುಟ ಅನ್ನ ವಸ್ತ್ರಮುಲಕೇ
ಪಸುಲ ನಾರ್ಜಿಂಚುಟ ಪಾಲು ಕೊರಕೇ
ಸತಿನಿ ಪೆಂಡ್ಲಾಡುಟ ಸಂಸಾರ ಸುಖಮುಕೇ
ಸುತುಲ ಬೋಷಿಂಚುಟ ಗತುಲಕೊರಕೇ
ಸೈನ್ಯಮುಲ್ಗೂರ್ಚುಟ ಶತ್ರು ಭಯಂಬುಕೇ
ಸಾಮುನೇರ್ಚುಟಲೆಲ್ಲ ಚಾವು ಕೊರಕೇ
ಧಾನಮಿಚ್ಚುಟ ಮುಂದಟಿ ಸಂಚಿತಮುನಕೇ
ಘನಮುಗಾ ಚದುವುಟ ಕಡುಪುಕೊರಕೇ

ತೇಟಗೀತೆ : ಇತರ ಕಾಮಂಬುಗೋರಕ ಸತತ ಮುಗನು
ಭಕ್ತಿ ನೀಯಂದು ನಿಲುಪುಟ ಮುಕ್ತಿಕೊರಕೇ ॥ಭೂ॥

ಅನುವಾದ : ಅತಿ ವಿದ್ಯಾರ್ಜನೆಯದು ಅನ್ನ ವಸ್ತ್ರ ಸಲುವೆ
ಪಶುವ ನಾರ್ಜಿಸುವುದು ಪಾಲು ಸಲುವೆ
ಸತಿಯು ಪರಿಣಯವು ಸಂಸಾರ ಸುಖಕೇ
ಸುತರ ಪೋಷಣೆ ಒಳ್ಳೆ ಗತಿಯು ಸಲುವೆ
ಸೈನ್ಯ ಸಜ್ಜುಗೊಳಿಸೋದೆಲ್ಲ ಶತ್ರು ಭಯಕೆ
ಸಾಮು ಮಾಡುವುದೆಲ್ಲ ಸಾಯುವುದಕೆ
ದಾನ ಮಾಡುವುದೆಲ್ಲ ಸಂಚಿತದ ಸಲುವೆ
ಘನವಾದ ಓದದು ಉದರ ಸಲುವೆ

ತೇಟಗೀತೆ : ಇತರ ಕಾಮನೆ ಕೋರದೆ ಸತತವಾಗಿ
ಭಕ್ತಿನಿನ್ನೊಳ್ ನಿಲಿಸುವುದು ಮುಕ್ತಿ ಸಲುವೆ ॥ಭೂ॥

ತಾತ್ಪರ್ಯ : ಹೆಚ್ಚಾಗಿ ಓದುವುದು, ಅನ್ನ, ವಸ್ತ್ರದ ಸಲುವೆ. ಹಸು ಸಾಕುವುದು ಹಾಲಿಗೋಸ್ಕರವೆ. ಹೆಂಡತಿಯನ್ನು ಪಡೆಯುವುದು ಸಂಸಾರ ಸುಖಕ್ಕೆ. ಮಕ್ಕಳನ್ನು ಸಲಹುವುದು ಮುಂದೆ ಒಳ್ಳೆಯ ಗತಿಗೆ. ಸೈನ್ಯವನ್ನು ಕೂಡಿಸುವುದು ಶತ್ರು ಭಯದಿಂದಲೆ. ಸಾಮು ಮಾಡಿದರೂ ಸಾವು ಬಿಡುವುದಿಲ್ಲ. ದಾನ ಧರ್ಮಗಳು ಮುಂದೆ ಪುಣ್ಯ ಸಂಪಾದನೆಗೆ. ಈ ಕಾಮನೆಗಳನ್ನೆಲ್ಲಾ ಬಿಟ್ಟು ಸತತವಾಗಿ ಪರಮಾತ್ಮನನ್ನು ಧ್ಯಾನಿಸುವುದು ಮೋಕ್ಷದ ಸಲುವಾಗಿಯೆ.

32. ಸೀಸ : ಧರಣಿಲೋ ವೆಯ್ಯೇಂಡ್ಲು ತನುವು ಸಿಲ್ವಗ ಬೋದು
ಧನಮೆಪ್ಪಟಿಕಿ ಶಾಶ್ವತಂಬು ಕಾದು
ದಾರಸುತಾದುಲು ತನವೆಂಟ ರಾಲೇರು
ಭೃತ್ಯುಲು ಮೃತ್ಯು ವಪ್ಪಿಂಪಲೇರು
ಬಂಧು ಜಾಲಮು ತನು ಬ್ರತಿ ಕಿಂಚುಕೋಲೆರು
ಬಲಪರಾಕ್ರಮ ಮೇಮಿ ಪನಿಕಿರಾಮು
ಘನಮೈನ ಸಕಲ ಭಾಗ್ಯಂಬೆಂತ ಗಲಿಗಿಯು
ಗೋಚಿಮಾತ್ರಂಬೈನ ಕೊನುಚು ಬೋಡು

ತೇಟಗೀತಿ : ವೆರ್ರಿಕುಕ್ಕಲ ಭ್ರಮಲನ್ನಿ ವಿಡಿಚಿ ನಿನ್ನು
ಭಜನ ಚೇಸೆಡಿವಾರಿಕೆ ಪರಮ ಸುಖಮು ॥ಭೂ॥

ಅನುವಾದ : ಧರಣಿಯೊಳ್ ಸಾಸಿರ ವರುಷ ತನು ನಿಲದು
ಧನವು ಸದಾಕಾಲ ಸ್ಥಿರವಿರದು
ಸತಿಸುತರವರಾರು ಜತೆಗೆ ಬರುವುದಿಲ್ಲ
ಭೃತ್ಯರು ಮೃತ್ಯುವ ತಪ್ಪಿಸುವರೆ
ಬಂಧು ಜಾಲವು ತನ್ನ ಬದುಕಿಸಲಾರರು
ಬಲಪರಾಕ್ರಮ ಕಾರ್ಯಕ್ಕೊದಗಿ ಬರದು
ಘನದಿ ಸಕಲ ಭಾಗ್ಯವದು ಎಷ್ಟೆ ಇದ್ದರು
ಕೌಪೀನವಾದರು ಒಯ್ಯಲಾರ

ತೇಟಗೀತೆ : ಹುಚ್ಚು ಭ್ರಮೆಗಳ ನೆಲ್ಲವಂ ತೊರೆದು ನಿನ್ನ
ಭಜನೆಯನು ಮಾಡುವವರಿಗೆ ಪರಮ ಸುಖವು ॥ಭೂ॥

ತಾತ್ಪರ್ಯ : ಶರೀರ, ಧನ ಇವು ಶಾಶ್ವತವಲ್ಲ. ಹೆಂಡತಿ ಮಕ್ಕಳು ಹಿಂದೆ ಬರುವುದಿಲ್ಲ. ಸೇವಕರು ಮೃತ್ಯುವನ್ನು ತಪ್ಪಿಸಲಾರರು. ಬಂಧುಗಳು ತನ್ನನ್ನು ಬದುಕಿಸಲಾರರು. ಬಲಪರಾಕ್ರಮಗಳು ಕೊನೆಗಾಲದಲ್ಲಿ ಕೆಲಸಕ್ಕೆ ಬಾರವು. ಐಶ್ವರ್ಯವೆಷ್ಟೇ ಇರಲಿ, ಕಡೆಯಲ್ಲಿ ಒಂದು ಕೌಪೀನವನ್ನೂ ಕೊಂಡೊಯ್ಯಲಾರ. ಆದುದರಿಂದ ಎಲ್ಲಾ ಆಸೆಗಳನ್ನು ತೊರೆದು ಸತತ ಪರಮಾತ್ಮನ ಚಿಂತೆಯಲ್ಲಿ ಇರುವವರಿಗೆ ಪರಮ ಸುಖ.

ಸೀಸ : ನರಸಿಂಹ ನಾಕು ದುರ್ಗುಣ ಮುಲೇ ಮೆಂಡಾಯೆ
ಸುಗುಣಮೊಕ್ಕಟಿ ಲೇದು ಚೂಡ ಬೋತೆ
ಯನ್ಯ ಕಾಂತಲ ಮೀದ ನಾಶ ಮಾನಗಲೇದು
ನೊರುಲ ಕ್ಷೇಮಮು ಚೂಚಿ ಯೋರ್ವ ಲೇನು
ಇಟುವಂಟಿ ದುರ್ಬುದ್ಧುಲನ್ನಿ ನಾ ಕುನ್ನವಿ
ನೇನು ಜೇಸೆಡಿವನ್ನಿ ನೀಚಪನುಲು
ನಾವಂಟಿ ಪಾಪಿಷ್ಟಿ ನರುನಿ ಭೂಲೋಕಾನ
ಪುಟ್ಟ ವೇಸಿತಿವೇಲ ಭೋಗಿಶಯನ

ತೇಟಗೀತೆ : ಅಬ್ಜದಳ ನೇತ್ರ ನಾ ತಂಡ್ರಿ ವೈನ ಫಲಮು
ನೇರ ಮುಲುಗಾಚಿ ರಕ್ಷಿಂಚು ನೀವೆ ದಿಕ್ಕು ॥ಭೂ॥

ಅನುವಾದ : ನರಸಿಂಹ ಎನಗೆಲ್ಲ ದುರ್ಗುಣ ಮಿಗಿಲಾಯ್ತು
ಸುಗುಣವೆಂಬುದೆ ಇಲ್ಲ ಹುಡುಕಿನೋಡೆ
ಅನ್ಯ ಸ್ತ್ರೀಯರ ಮೇಲೆ ಆಸೆ ಉಡುಗಲಿಲ್ಲ
ಪರರ ಕ್ಷೇಮವ ನೋಡಿ ಸಹಿಸಲಿಲ್ಲ
ಇಂತಪ್ಪ ದುರ್ಬುದ್ಧಿ ಗಳವು ಎನ್ನೊಳಿಹುವು
ನಾ ಮಾಡುವುದವೆಲ್ಲ ನೀಚ ಕಾರ್ಯ
ನನ್ನಂಥ ಪಾಪಿಷ್ಟಿ ನರನ ಭೂಲೋಕದೊಳ್
ನೀ ಸೃಷ್ಟಿಸಿದೆ ಏಕೆ ಭೋಗಿಶಯನ

ತೇಟಗೀತೆ : ಅಬ್ಜದಳ ನೇತ್ರ ನಿನ್ನ ಭಜಿಸಿದ ಫಲ
ತಪ್ಪುಗಳ ಸಹಿಸಿ ಸಲಹೋ ನೀನೆ ದಿಕ್ಕು ॥ಭೂ॥

ತಾತ್ಪರ್ಯ : ದುರ್ಗುಣಗಳೇ ಹೆಚ್ಚಾಯ್ತು. ಸುಗುಣಗಳು ಇಲ್ಲವಾಯ್ತು. ಪರ ನಾರಿಯಲ್ಲಿ ಆಸೆ ಉಡುಗಲಿಲ್ಲ. ಇಂಥಹ ದುರ್ಬುದ್ಧಿಗಳೆಲ್ಲ ಎನಗಿಹುವು. ಪರರ ಕ್ಷೇಮವ ನೋಡಿ ನಾ ಸಹಿಸಲಿಲ್ಲ. ನಾ ಮಾಡುವುದೆಲ್ಲವೂ ನೀಚ ಕಾರ್ಯಗಳೆ. ಭೋಗಿಶಯನ ನನ್ನಂಥ ಪಾಪಿಷ್ಟನನ್ನು ಏಕೆ ಭೂಲೋಕದಲ್ಲಿ ಸೃಷ್ಟಿ ಮಾಡಿದೆ. ಇದೋ ನಿನ್ನ ಭಜಿಸಿದ ಫಲವಾಗಿ ಎನ್ನ ತಪ್ಪುಗಳನ್ನು ಮನ್ನಿಸಿ ನನ್ನನ್ನು ಸಲಹು.

34. ಸೀಸ : ಧೀರತ ಪರುಲ ನಿಂದಿಂಚ ನೇರ್ಚಿತಿಗಾನಿ
ತಿನ್ನಗಾ ನಿನು ಬ್ರಸ್ತು ತಿಂಚನೈತಿ
ಪೊರುಗು ಕಾಮಿನುಲುದು ಬುದ್ಧಿ ನಿಲ್ಪಿತಿಗಾನಿ
ನಿನ್ನು ಸಂತತಮು ಧ್ಯಾನಿಂಚನೈತಿ
ಬೊರುಗು ಮುಚ್ಚಟಲೈನ ಮುರಿಸಿವಿಂಟಿಸಿಗಾನಿ
ಮಂಚಿ ನೀ ಕಥಲಾಲ ಕಿಂಚನೈತಿ
ಗೌತುಕಂಬುನಪಾತ ಕಮುಗಡಿಂಚಿತಿಗಾನಿ
ಹೆಚ್ಚು ಪುಣ್ಯಮು ಸಂಗ್ರಹಿಂಚನೈತಿ

ತೇಟಗೀತೆ : ನವನಿಲೋನೇನು ಜನ್ಮಿಂಚಿ ನಂದುಕೇಮಿ
ಸಾರ್ಥಕಮುಗಾನದಾಯೆ ಸ್ವಲ್ಪಮೈನ ॥ಭೂ॥

ಅನುವಾದ : ಸೊಕ್ಕಿನೊಳ್ ಪರನಿಂದೆ ಕಲಿತೆನೆ ಹೊರತಾಗಿ
ನಯದಿ ನಿನ್ನ ಸ್ಮರಣೆ ಮಾಡಲಿಲ್ಲ
ನೆರೆಯ ಕಾಮಿನಿಯರೊಳ್ ಮನನೆಟ್ಟೆನಲ್ಲದೆ
ನಿನ್ನ ಸಂತಸದೊಳು ಭಜಿಸಲಿಲ್ಲ
ಪರರ ವಿಷಯವೆಲ್ಲ ಆಲಿಸಿದೆ ಹೊರತು
ಅರಿತು ನಿನ್ನ ಕಥೆಯ ಕೇಳಲಿಲ್ಲ
ಬಹು ವಿನೋದದಿ ಪಾಪ ವೆಸಗಿದೆನೆ ಹೊರತು
ಪುಣ್ಯ ಸಂಗ್ರಹವನು ಮಾಡಲಿಲ್ಲ

ತೇಟಗೀತೆ : ಅವನಿಯೊಳ್ ನಾ ಜನ್ಮತಳೆಯೆ ಬಂದದೇನು
ಇನಿಸು ಸಾರ್ಥಕವಾದರೂ ಕಾಣದಾಯ್ತು ॥ಭೂ॥

ತಾತ್ಪರ್ಯ : ಗರ್ವಪಟ್ಟು ಇತರರ ನಿಂದಿಸುವುದನ್ನು ಕಲಿತೆ. ಪರ ಕಾಮಿನಿಯರಲ್ಲಿ ಮನವನ್ನು ನೆಲೆಗೊಳಿಸಿದೆ. ಪರರ ವಿಷಯವನ್ನು ಕುತೂಹಲದಿಂದ ಆಲಿಸಿದೆ. ಈ ರೀತಿ ಬಹು ಸಂತೋಷದಿಂದ ಪಾಪಗಳನ್ನು ಮಾಡಿದೆನಲ್ಲದೆ ನಿನ್ನನ್ನು ಸ್ಮರಿಸಿ ನಿನ್ನ ಕಥೆ ಕೇಳಿ ಪುಣ್ಯ ಸಂಪಾದನೆ ಮಾಡದೆ ಹೋದೆ. ಈ ನನ್ನ ಜನ್ಮ ತಾಳಿ ಏನೂ ಸಾರ್ಥಕತೆ ಕಾಣಲಿಲ್ಲ.

35. ಸೀಸ : ಅಂತ್ಯ ಕಾಲಮುನಂದು ನಾಯಾಸಮುನ ನಿನ್ನು
ದಲತುನೋ ದಲವನೋ ದಲತು ನಿಪುಡೆ
ನರಸಿಂಹ ನರಸಿಂಹ ನರಸಿಂಹ ಲಕ್ಷ್ಮೀಶ
ದಾನವಾಂತಕ ಕೋಟಿ ಭಾನು ತೇಜ
ಗೋವಿಂದ ಗೋವಿಂದ ಗೋವಿಂದ ಸರ್ವೇಶ
ಪನ್ನಗಾಧಿಪಶಾಯಿ ಪದ್ಮನಾಭ
ಮಧುವೈರಿ ಮಧುವೈರಿ ಮಧುವೈರಿ ಲೋಕೇಶ
ನೀಲಮೇಘ ಶರೀರ ನಿಗಮ ವಿನುತ

ತೇಟಗೀತೆ : ಈ ವಿಧಂಬುನ ನೀ ನಾಮ ಮಿಷ್ಟಮುಗನು
ಭಜನ ಚೇಯುಚುನುಂದು ನಾ ಭಾವ ಮಂದು ॥ಭೂ॥

ಅನುವಾದ : ಅಂತ್ಯ ಕಾಲದೊಳಗೆ ಶ್ರಮದಿಂದ ನಿನ್ನನ್ನು
ಭಜಿಪೆನೊ ಭಜಿಸೆನೊ ಭಜಿಪೆ ನೀಗ
ನರಸಿಂಹ ನರಸಿಂಹ ನರಸಿಂಹ ಲಕ್ಷ್ಮೀಶ
ದಾನವಾಂತಕ ಕೋಟಿ ಭಾನು ತೇಜ
ಗೋವಿಂದ ಗೋವಿಂದ ಗೋವಿಂದ ಸರ್ವೇಶ
ಪನ್ನಗಾಧಿಪಶಾಯಿ ಪದ್ಮನಾಭ
ಮಧುವೈರಿ ಮಧುವೈರಿ ಮಧುವೈರಿ ಲೋಕೇಶ
ನೀಲಮೇಘ ಶರೀರ ನಿಗಮ ವಿನುತ

ತೇಟಗೀತೆ : ಈ ವಿಧವಲಿ ನಿನ್ನಯ ನಾಮ ಒಲುಮೆಯಿಂದ
ಭಜನೆ ಮಾಡುತ್ತಿರುವೆ ಎನ್ನ ಭಾವದೊಳಗೆ ॥ಭೂ॥

ತಾತ್ಪರ್ಯ : ಅಂತ್ಯ ಕಾಲದಲ್ಲಿ ಆಯಾಸ ಉಂಟಾಗಿ, ನಿನ್ನನ್ನು ಭಜಿಸಲಾಗುವುದೋ ಇಲ್ಲವೋ ಹೇಳಲಾರೆ. ಆದ್ದರಿಂದ, ಇದೀಗಲೆ, ನರಸಿಂಹ ನರಸಿಂಹ ನರಸಿಂಹ, ಲಕ್ಷ್ಮೀಶ, ದಾನವಾಂತಕ, ಕೋಟಿ ಭಾನುತೇಜ, ಗೋವಿಂದ ಗೋವಿಂದ ಸರ್ವೇಶ ಪನ್ನಗಾಧಿಪಶಾಯಿ ಪದ್ಮನಾಭ ಮಧುವೈರಿ ಮಧುವೈರಿ, ಮಧುವೈರಿ, ಲೋಕೇಶ, ನೀಲಮೇಘ ಶರೀರ ನಿಗಮ ವಿನುತ, ಎಂಬುದಾಗಿ ನಿನ್ನನ್ನು ಪ್ರೀತಿಯಿಂದ ಭಜಿಸುವೆನು.

36. ಸೀಸ : ಆಯುರಾರೋಗ್ಯವು ಪ್ರಾರ್ಥ ಸಂಪದ ಲನ್ನಿ
ಗಲುಗಚೇಸೆಡಿ ಭಾರ ಕರ್ತನೀವೆ
ಚದುವು ಲೆಸ್ಸಗನೇರ್ಪಿ ಸಭಲೋ ಗರಿಷ್ಠಾಧಿ
ಕಾರವೊಂದಿಂಚೆಡಿ ಘನುಡ ನೀವೆ
ನಡಕ ಮಂಚಿದಿಪೆಟ್ಟಿ ಪರುಲು ಮೆಚ್ಚೇಟಟ್ಟು
ಪೇರು ರಪ್ಪಿಂಚೇಟಿ ಪೆದ್ದ ನೀವೆ
ಬಲು ವೈನ ವೈರಾಗ್ಯ ಭಕ್ತಿ ಜ್ಞಾನಮುಲಿಚ್ಚಿ
ಮುಕ್ತಿ ನೊಂದಿಂಚೇಟಿ ಮೂರ್ತಿ ನೀವೆ

ತೇಟಗೀತೆ : ಯ ವನಿಲೋ ಮಾನವುಲಕನ್ನಿ ಯಾಶಲಿಚ್ಚಿ
ವ್ಯರ್ಥುಲನುಚೇಸಿ ತೆಲಿಪೇಟಿ ವಾಡ ನೀವೆ ॥ಭೊ॥

ಅನುವಾದ : ಆಯುರಾರೋಗ್ಯವುಂ ಪುತ್ರಾರ್ಥ ಸಂಪದ
ಉಂಟು ಮಾಡುವ ಹೊಣೆಗಾರ ನೀನೆ
ವಿದ್ಯಾ ವಿಧಸಮಾಡಿ ಸಭೆಯೊಳು ಪರವೋಚ್ಚ
ಅಧಿಕಾರ ಕೊಡುವಂತ ಘನನು ನೀನೆ
ನಡತೆ ಒಳ್ಳೆಯದಾಗಿ ಜನ ಮೆಚ್ಚುವಂತಾಗಿ
ಹೆಸರು ಗಳಿಸಿಕೊಡೋ ಹಿರಿಯ ನೀನೆ
ಬಲವಾದ ವೈರಾಗ್ಯ ಭಕ್ತಿಜ್ಞಾನವ ನಿತ್ತು
ಮುಕ್ತಿ ಹೊಂದಿಸುವಂತ ಮೂರ್ತಿ ನೀನೆ

ತೇಟಗೀತೆ : ಅವನಿಯೊಳ್ ಮಾನವರಿಗೆಲ್ಲ ಆಸೆಯಿತ್ತು
ವ್ಯರ್ಥರನು ಮಾಡಿ ತೋರಿಸುವವನು ನೀನೆ ॥ಭೊ॥

ತಾತ್ಪರ್ಯ : ಆಯುರಾರೋಗ್ಯವನ್ನು ದಯಪಾಲಿಸುವವನು, ಪುತ್ರ, ಅರ್ಥ, ಸಂಪದ ಇವುಗಳನ್ನು ಕೊಡುವವನು. ವಿದ್ಯಾ ಪಾಂಡಿತ್ಯವನ್ನು ನೀಡಿ ಸಭೆಯಲ್ಲಿ ಅಧಿಕಾರ ಪ್ರಾಪ್ತಿ ಮಾಡುವವನು. ಎಲ್ಲಕ್ಕೂ ಮಿಗಿಲಾಗಿ ಬಲವಾದ ವೈರಾಗ್ಯ, ಭಕ್ತಿ ಜ್ಞಾನವನ್ನು ನೀಡಿ ಮುಕ್ತಿಯನ್ನು ದಯಪಾಲಿಸುವವನು ನೀನೆ. ಆದರೂ ಭೂಮಿಯಲ್ಲಿ ಎಲ್ಲಾ ಆಸೆಗಳನಿತ್ತು ವ್ಯರ್ಥ ಮಾನವರನ್ನಾಗಿಸುವವನೂ ನೀನೆ ಪರಮಾತ್ಮ.

37. ಸೀಸ : ಕಾಯುವೆಂತ ಭಯಾನ ಕಾಪಾಡಿನಂ ಗಾನಿ
ಧಾತ್ರಿ ಲೋ ನದಿ ಚೂಡ ದಕ್ಕಬೋದು
ಏ ವೇಳ ನೇ ರೋಗ ವೇಮಾರಿಂಚುನೊ ಸತ್ತ್ವ
ಮೊಂದಂಗ ಚೇಯುನೇ ಚಂದಮುನನು
ಔಷಧಂಬುಲು ಮಂಚಿ ನನುಭವಿಂಚಿನಗಾನಿ
ಕರ್ಮಕ್ಷೀಣಂದೈತೆ ಗಾನಿವಿಡದು
ಕೋಟಿ ವೈದ್ಯುಲು ಗುಂಪು ಗೂಡಿವಚ್ಚಿನಗಾನಿ
ಮರಣ ಮಯ್ಯೆಡಿ ವ್ಯಾದಿ ಮಾನ್ಪಲೇರು

ತೇಟಗೀತೆ : ಜೀವುಲಕು ಪೈನ ಕಾಲಂಬು ಸಿದ್ಧಮೈನ
ನಿಲುಚುನಾದೇಹ ಮಿಂದೊಕ್ಕ ನಿಮಿಷ ಮೈನ ॥ಭೂ॥

ಅನುವಾದ : ಕಾಯುವನೆಷ್ಟೆ ಭಯದಿಂದ ಕಾಪಾಡಲು
ಧಾತ್ರಿಯಲದ ನೋಡೆ ದಕ್ಕದಿಹುದು
ಯಾವ ವೇಳೆಯೊಳು ಯಾವ ರೋಗವಂಚಿಸುವುದೊ
ಬಲಗೊಳಿಸಲಹುದೆ ಸಕಲ ವಿಧದಿ
ಘನವಾದ ಔಷಧ ಸೇವನೆಗೈದರುಂ
ಕರ್ಮ ಕ್ಷೀಣಿಸದೆಲೆ ಬಿಡದು ಅದುವುಂ
ಕೋಟಿ ವೈದ್ಯರ ಗುಂಪು ಕೂಡಿ ಬಂದರು ಸಹ
ಮರಣ ಗೈಯುವ ರೋಗ ಮಾಣ್ಪರವರು

ತೇಟಗೀತೆ : ಜೀವನಿಗೆ ಅವಸಾನ ಕಾಲ ಒದಗಿ ಬರಲು
ನಿಲ್ಲಲಾರದೀ ದೇಹ ಮತ್ತೊಂದು ನಿಮಿಷ ॥ಭೂ॥

ತಾತ್ಪರ್ಯ : ದೇಹವನ್ನು ಬಹು ಎಚ್ಚರಿಕೆಯಿಂದ ಕಾಪಾಡಿದರೂ ಸಹ ಯಾವ ಸಂದರ್ಭದಲ್ಲಿ ಯಾವ ರೋಗ ಬಲಿ ತೆಗೆದು ಕೊಳ್ಳುತ್ತದೆಯೋ ಹೇಳುವಂತಿಲ್ಲ. ಯಾವ ಔಷಧಿ ಸೇವಿಸಿದರೂ, ಕರ್ಮ ಕ್ಷೀಣವಾಗದೆ ಖಾಯಿಲೆ ವಾಸಿಯಾಗುವುದಿಲ್ಲ. ಮರಣವನ್ನು ತರುವ ರೋಗವನ್ನು ಒಂದು ಕೋಟಿ ವೈದ್ಯರು ಗುಂಪು ಕೂಡಿ ಬಂದರೂ ಸಹ ಉಳಿಸಲಾರರು. ಅವಸಾನ ಕಾಲ ಬಂದರೆ ಒಂದು ನಿಮಿಷ ವಾದರೂ ಹೆಚ್ಚಿಗೆ ಇಲ್ಲಿರುವಂತಿಲ್ಲ.

38\. ಸೀಸ : ಜಂದೆ ಮಿಂಪುಗವೇಸಿ ಸಂಧ್ಯವಾರ್ಚಿತೆ ನೇಮಿ
ಬ್ರಹ್ಮಮೆರುಗಕ ಕಾಡು ಬ್ರಾಹ್ಮಣುಂಡು
ತಿರುಮಣಿ ಶ್ರೀಚೂರ್ಣ ಗುರು ರೇಖ ಉಂಟೇಮಿ
ವಿಷ್ಣು ನೆರುಗಕಕಾಡು ವೈಷ್ಣವುಂಡು
ಬೂದಿನಿ ನುದುಟನು ಬೂಸುಕುಂಟೇ ನೇಮಿ
ಶಂಭು ನೆರುಗಕ ಕಾಡು ಶೈವ ಜನುಡು
ಕಾಷಾಯ ವಸ್ತ್ರಾಲು ಗಟ್ಟಿ ಕಪ್ಪಿತೆನೇಮಿ
ಆಶಲುಡುಗಕ ಕಾಡು ಯತಿವರುಂಡು

ತೇಟಗೀತೆ : ಇಟ್ಟಿ ಲೌಕಿಕ ವೇಷಾಲು ಕಟ್ಟುಕೊನಿನ
ಗುರುನಿ ಚೆಂದಕ ಸನ್ಮುಕ್ತಿ ದೊರಕಬೋದು ||ಭೂ||

ಅನುವಾದ : ಯಜ್ಞ ಸೂತ್ರಧರಿಸಿ ಸಂಧ್ಯಾನ ಮಾಡಲೇಂ
ಬ್ರಹ್ಮವನ್ನರಿಯದೆ ವಿಪ್ರನೆಂತು
ತಿರುಮಣಿ ಶ್ರೀಚೂರ್ಣ ಗುರುರೇಖೆ ಇರಲೇನು
ವಿಷ್ಣುವನ್ನರಿಯದೆ ವೈಷ್ಣನೆಂತು
ಭಸ್ಮವಂ ಹಣೆಯೊಳು ಬಳಿದುಕೊಂಡರು ಏನು
ಶಂಭುವನರಿಯದೆ ಶೈವನೆಂತು
ಕಾಷಾಯ ವಸ್ತ್ರಗಳ ಗಟ್ಟಿ ಧರಿಸಲೇನು
ಆಸೆ ಉಡುಗದಲೆ ಯತಿಯದೆಂತು

ತೇಟಗೀತೆ : ಇಂತು ಲೌಕಿಕ ವೇಷವ ಧರಿಸುತಿರಲು
ಗುರುವ ಹೊಂದದೆ ಸನ್ಮುಕ್ತಿ ದೊರಕಲೆಂತು ||ಭೂ||

ತಾತ್ಪರ್ಯ : ಯಜ್ಞಸೂತ್ರವನ್ನು ಧರಿಸಿದ ಮಾತ್ರಕ್ಕೆ ಬ್ರಾಹ್ಮಣನಾಗಲಾರ. ಬ್ರಹ್ಮವನ್ನರಿತವನು ಮಾತ್ರ ಬ್ರಾಹ್ಮಣನೆನಿಸುತ್ತಾನೆ. ತಿರುಮಣಿ, ಶ್ರೀಚೂರ್ಣನಾಮಗಳ ಹಾಕಿದ ಮಾತ್ರಕ್ಕೆ ವೈಷ್ಣವನೆನಿಸಲಾರ. ಭಸ್ಮ ಧರಿಸಿದ ಮಾತ್ರಕ್ಕೆ ಶೈವನೆನಿಸಲಾರ. ಕಾವಿ ಧರಿಸಿದ ಮಾತ್ರಕ್ಕೆ ಯತಿ ಎನಿಸಲಾರ. ವಿಷ್ಣುವನ್ನರಿತವನೇ ವೈಷ್ಣವ, ಶಿವನನ್ನರಿತವನೇ ಶೈವ. ಆಸೆಗಳನ್ನೆಲ್ಲ ತೊರೆದವನೆ ಯತಿ. ಬರೀ ಲೌಕಿಕ ವೇಷಗಳನ್ನು ಹಾಕುವುದರಿಂದ ಏನೇನೂ ಸಿಗುವುದಿಲ್ಲ. ಸದ್ಗುರುವನ್ನು ಹೊಂದಿ ಸೇವಿಸಿದರೆ ಮಾತ್ರ ಮುಕ್ತಿ ಸಿಗುತ್ತದೆ.

39. ಸೀಸ : ನರಸಿಂಹ ನೇ ನಿನ್ನು ನಮ್ಮಿನಂದುಕು ಚಾಲ
ನೆನರು ನಾಯಂದುಂಚು ನೆಮ್ಮನ ಮುನ
ನನ್ನಿ ವಸ್ತುವುಲು ನಿನ್ನಡಿಗಿ ವೇಸಟಪುಟ್ಟೆ
ನಿಕ ನೈನ ಕಟಾಕ್ಷ ಮಿಯ್ಯವಯ್ಯ
ಸಂತಸಂಬುನ ನನ್ನು ಸ್ವರ್ಗ ಮಂದೇ ಯುಂಚು
ಭೂಮಿಯಂದೇಯುಂಚು ಭೋಗಿ ಶಯನ
ನಯಮುಗಾ ವೈಕುಂಠ ನಗರ ಮಂದೇ ಯುಂಚು
ನರಕಮಂದೇ ಯುಂಚು ನಳಿನ ನಾಭ

ತೇಟಗೀತೆ : ಯೆಂಚಟ ನನ್ನುಂಚಿನನುಗಾನಿ ಯೆಪುಡುನಿನ್ನು
ಮರಚಿ ಪೋಕುಂಡ ನೀನಾಮ ಸ್ಮರಣನೊಸಗು ॥ಭೂ॥

ಅನುವಾದ : ನರಸಿಂಹ ನಿನ್ನ ನಾ ನಂಬಿದುದಕೆ ಬಹು
ಕರುಣೆ ತೋರೆನ್ನಲ್ಲಿ ತುಂಬು ಮನದಿ
ಸಕಲ ವಸ್ತುಗಳನು ಯಾಚಿಸಿ ಸಾಕಾಯ್ತು
ಇನ್ನಾದರೂ ಕಟಾಕ್ಷ ಕರುಣಿಸಯ್ಯ
ಸಂತಸದೊಳು ಎನ್ನ ಸ್ವರ್ಗದೊಳೆ ಇರಿಸು
ಭೂಮಿಯೊಳೆ ಇರಿಸು ಭೋಗಿಶಯನ
ನಯದಾಗಿ ವೈಕುಂಠ ನಗರದಲ್ಲೇ ಇರಿಸು
ನರಕದಲ್ಲೆ ಇರಿಸು ನಳಿನನಾಭ

ತೇಟಗೀತೆ : ಎನ್ನ ಎಲ್ಲೆ ಇರಿಸಿದರು ಸದಾ ನಿನ್ನ
ಮರೆತು ಬಿಡದಂತೆ ನಿನನಾಮ ಸ್ಮರಣೆ ನೀಡು ॥ಭೂ॥

ತಾತ್ಪರ್ಯ : ನರಸಿಂಹ ಸ್ವಾಮಿಯೇ, ನಾ ನಿನ್ನ ಬಹುವಾಗಿ ನಂಬಿದ್ದೇನೆ. ಎನ್ನಲ್ಲಿ ಪೂರ್ಣ ದೃಷ್ಟಿಯಿಂದ ಕರುಣೆಯನ್ನು ತೋರು. ಎಲ್ಲಾ ವಸ್ತುಗಳನ್ನು ಬೇಡಿ ಸಾಕಾಯ್ತು. ನನ್ನನ್ನು ಭೂಮಿಯಲ್ಲೇ ಇರಿಸು, ಸ್ವರ್ಗದಲ್ಲೇ ಇರಿಸು, ನರಕದಲ್ಲೇ ಇರಿಸು, ನಿನ್ನ ನಾಮ ಸ್ಮರಣೆಯನ್ನು ಮರೆಯದೆ ನಿನ್ನನ್ನು ಸದಾ ಧ್ಯಾನಿಸುವಂತೆ ಅನುಗ್ರಹಿಸು.

40. ಸೀಸ : ದೇಹಮುನ್ನವರಕು ಮೋಹಸಾಗರಮಂದು
ಮುನುಗುಚುಂದುರು ಶುದ್ಧ ಮೂಢ ಜನುಲು
ಸಲಿಲತೈಶ್ವರ್ಯಮುಲೆ ಶಾಶ್ವತಂಬನುಕೊನಿ
ಷಡ್ಗುಣಂಬುಲು ಮಾನ ಜಾಲರೆವರು
ಸರ್ವಕಾಲಮು ಮಾಯಾ ಸಂಸಾರಬದ್ಧುಲೈ
ಗುರುನಿ ಕಾರುಣ್ಯಂಬು ಗೋರುಕೊನರು
ಜ್ಞಾನ ಭಕ್ತಿ ವಿರಕ್ತುಲೈನ ಪೆದ್ದಲ ಜೂಚಿ
ನಿಂವಸೇಯುಕ ಪೋತೆ ನಿಲುವಲೇರು

ತೇಟಗೀತೆ : ಮತ್ತುಲೈನಟ್ಟಿ ದುರ್ಜಾತಿ ಮನುಜಲಂತ
ನಿನ್ನು ಗನಲೇರು ಮೊದಟಿಕೆ ನೀರಜಾಕ್ಷ ॥ಭೂ॥

ಅನುವಾದ : ದೇಹವಿರುವತನಕ ಮೋಹಸಾಗರದಲ್ಲಿ
ಮುಳುಗುತಿಹರು ಶುದ್ಧ ಮೂಢಜನರು
ಸಕಲ ಐಶ್ವರ್ಯಗಳೆ ಶಾಶ್ವತವೆನ್ನುತ
ಷಡ್ಗುಣಗಳನು ತೊರೆಯಲರಿಯರು
ಸರ್ವಕಾಲವು ಮಾಯ ಸಾಗರದಲಿ ಸಿಕ್ಕಿ
ನಿಜಗುರು ಕರುಣೆಯ ನಾಪೇಕ್ಷಿಸರು
ಜ್ಞಾನ ಭಕ್ತಿ ವಿರಕ್ತರಿಹ ಹಿರಿಯರ ನೋಡಿ
ನಿಂದೆ ಮಾಡದಿರಲು ಆಗದವಗೆ

ತೇಟಗೀತೆ : ಮತ್ತರಾದಂತ ದುರ್ಜಾತಿ ಮನುಜರೆಲ್ಲ
ನಿನ್ನ ಕಾಣರು ಮೊದಲಿಗೆ ನೀರಜಾಕ್ಷ ॥ಭೂ॥

ತಾತ್ಪರ್ಯ : ಜನರು ದೇಹ ಆಯುಸ್ಸು ಇರುವವರೆಗೂ ಮೋಹ ಸಾಗರದಲ್ಲಿ ಮುಳುಗುತ್ತ, ತೇಲುತ್ತ ಇರುತ್ತಾರೆ. ಮತ್ತರು ಮತ್ತೂ ಮೂಢರಾಗಿ ತಮ್ಮ ಅರಿಷಡ್ವರ್ಗಗಳನ್ನು ತೊರೆಯಲಾರರು. ಎಲ್ಲಾ ಕಾಲದಲ್ಲಿಯೂ ಮಾಯಾ ಸಂಸಾರದಲ್ಲಿ ಮುಳುಗಿ, ಜ್ಞಾನ ಭಕ್ತಿ ಸಂಪನ್ನರಾದವರನ್ನು ನಿಂದಿಸುತ್ತಾರೆ. ಪರಮಾತ್ಮನನ್ನು ಕಾಣುವ ಬಗೆ ಅರಿಯರು.

41. ಸೀಸ : ಇಲಲೋನ ನೇ ಜನ್ಮಮೆತ್ತಿನಪ್ಪಟಿನುಂಡಿ
ಬಹು ಗಂಡಿಂಚಿತಿನಯ್ಯ ಪಾತಕಮುಲು
ತೆಲಿಸಿ ಜೇಸಿತಿ ಕೊನ್ನಿ ತೆಲಿಯ ಜಾಲಕ ಜೇಸಿ
ಬಾಧನೊಂದಿತಿನಯ್ಯ ಪದ್ಮನಾಭ
ಅನುಭವಿಂಚೇಟಪ್ಪು ಡಶಿ ಪ್ರಯಾಸಂಬಂಚು
ಪ್ರಜಲು ಜೆಪ್ಪಗಜಾಲ ಭಯಮುಗಲಿಗೆ
ನೆಗರಿಪ್ರೊಯ್ಯೇಟಂದು ಕೇಯುಪಾಯಂಬ್ಬೈನ
ಜೇಯಬೋದಾಮಂಟೆ ಚೇತಕಾದು

ತೇಟಗೀತೆ : ಸೂರ್ಯ ಶಶಿನೇತ್ರ ನೀ ಚಾಟು ಜೊಚ್ಚಿನಾಡ
ಕಲುಷಮುಲು ದ್ರುಂಚಿ ನನ್ನೇಲು ಕಷ್ಟಮನಕ ||ಭೂ||

ಅನುವಾದ : ಭೂತಳ ನಾ ಜನ್ಮ ತಾಳಿದ ದಿನದಿಂದ
ಎಸಗಿದೆನಾ ಬಹು ಪಾತಕಗಳ
ತಿಳಿದು ಮಾಡಿದೆ ಕೆಲವು ತಿಳಿಯದೆಲೆ ಕೆಲವು
ಬಾಧೆ ಹೊಂದಿದೆನಯ್ಯ ಪದ್ಮನಾಭ
ಅನುಭವಿಸುವ ಸಮಯ ಬಹಳ ಶ್ರಮವೆಂದು
ಪ್ರಜೆಗಳರುಹೆ ಬಹು ಭಯವೆ ಆಯ್ತು
ತಪ್ಪಿಸಿನಡೆಯಲು ಯಾವೊಂದುಪಾಯವ
ಕಂಡುಕೊಳ್ಳಲೆನಗೆ ಶಕ್ತಿ ಇಲ್ಲ.

ತೇಟಗೀತೆ : ಸೂರ್ಯ ಶಶಿನೇತ್ರ ನಿನ್ನನಾ ಆಶ್ರಯಿಸಿದೆ
ಕಲುಷಗಳ ಪರಿಸಿ ಸಲಹೋ ಕಷ್ಟವೆನದೆ ||ಭೂ||

ತಾತ್ಪರ್ಯ : ಪ್ರಪಂಚದಲ್ಲಿ ನಾನು ಹುಟ್ಟಿದ ಸಮಯದಿಂದ ಕೆಲವು ತಿಳಿದೂ, ಕೆಲವು ತಿಳಿಯದೆ ಅನೇಕ ಪಾಪಗಳನ್ನು ಮಾಡಿದೆ. ಇದರಿಂದ ಬಹಳ ತೊಂದರೆ ಅನುಭವಿಸಿದೆ. ಪಾಪದ ಫಲ ಅನುಭವಿಸುವುದು ಬಹಳ ಕಷ್ಟವೆಂದು ಜನ ಹೇಳಿದಾಗ ಅದನ್ನು ಕೇಳಿ ಬಹಳ ಭಯವಾಯ್ತು. ಈ ಪಾಪ ಕೃತ್ಯಗಳನ್ನು ತಪ್ಪಿಸಿಕೊಂಡು ನಡೆಯಲು ಯಾವ ಉಪಾಯವನ್ನೂ ನಾನು ಕಾಣೆ. ಈಗ ನಿನ್ನನ್ನು ಆಶ್ರಯಿಸಿರುವೆ, ನನ್ನ ಪಾಪಗಳನ್ನು ಪರಿಹರಿಸಿ **ಕಾಪಾಡು.**

42. ಸೀಸ : ತಾಪಸಾರ್ಚಿತನೇನುಪಾಪಕರ್ಮುಡನಂಚು
ನಾಕು ವಂತಲಬೆಟ್ಟಿ ಬೋಕು ಸ್ವಾಮಿ
ನಾಟಿಕೀ ಶಿಕ್ಷಲು ನಾಕುಜೇಯುಟಕಂಟೆ
ನೇಡು ಜೇಯುಮು ನೀವು ನೇಸ್ತಮನಕ
ಅತಿ ಭಯಂಕರುಲೈನ ಯಮಧೂತಲಕುನನ್ನು
ನೊಪ್ಪಗಿಂಚಕುಮಯ್ಯ ಯುರಗ ಶಯನ
ನೀದಾಸುಲನು ಬಟ್ಟಿ ನೀವು ದಂಡಿಂಪಂಗ
ವದ್ದುವದ್ದನರೆಂತ ಪೆದ್ದಲೈನ

ತೇಟಗೀತೆ : ತಂಡ್ರಿವೈ ನೀವು ಪರಪೀಡ ತಗಲುಬೆಡಿತೆ
ವಾಸಿಗಲಪೇರುಕಪಕೀರ್ತಿ ವಚ್ಚುನಯ್ಯ ॥ಭೂ॥

ಅನುವಾದ : ತಾಪನಾರ್ಚಿತ ನಾನು ಪಾಪಕರ್ಮನು ಎಂದು
ಎನಗೆ ಸಂಕಟವನ್ನು ಕೊಡದಿರೈಯ್ಯ
ಮುಂದೆ ಎನಗೆ ಶಿಕ್ಷೆ ನೀಡುವುದಕ್ಕಿಂತ
ಈಗಲೇ ನೀಡೈಯ್ಯ ನೇಪ ತೊರೆದು
ಅತಿ ಭಯಂಕರರಾದ ಯಮಧೂತರಿಗೆ ಎನ್ನ
ಒಪ್ಪಿಸಬೇಡಯ್ಯ ಉರಗಶಯನ
ನಿನ್ನ ದಾಸಜನರ ನೀನು ದಂಡಿಸಿದರೆ
ಬೇಡವೆನರು ಎಂಥ ಘನರೆ ಇರಲು

ತೇಟಗೀತೆ : ತಂದೆ ಎನಿಸಿ ನೀ ಪರಪೀಡೆ ಸೋಕಿಸಿದೊಡೆ
ನಿನ್ನ ಹೆಸರಿಗೆ ಅಪಕೀರ್ತಿ ಬಾರದೇನು ॥ಭೂ॥

ತಾತ್ಪರ್ಯ : ತಪಸ್ವಿಗಳಿಂದ ಪೂಜಿಸಲ್ಪಡುವ ದೇವನೆ, ನಾನು ಪಾಪ ಕರ್ಮನು ಎಂಬ ಕಾರಣದಿಂದ ನನಗೆ ಕಷ್ಟಗಳನ್ನು ಕೊಡ ಬೇಡ. ನಾಳೆ ಕೊಡಬೇಕೆಂದಿರುವ ಶಿಕ್ಷೆಯನ್ನು ಇಂದೇ ಕೊಡು. ಅತಿ ಭಯಂಕರವಾದ ಯಮದೂತರಿಗೆ ನನ್ನನ್ನು ಒಪ್ಪಿಸಬೇಡ. ನಿನ್ನ ದಾಸರನ್ನು ನೀನು ಶಿಕ್ಷಿಸಲು ಬೇಡ ವೆನ್ನುವರಾರೂ ಇಲ್ಲ. ತಂದೆಯೆನಿಸಿಕೊಂಡು ನೀನು ಪರಿಪೀಡೆಯನ್ನು ಎನಗೆ ಉಂಟಾಗಿಸಲು ನಿನ್ನ ಹೆಸರಿಗೆ ಕಳಂಕವಲ್ಲವೆ ?

43. ಸೀಸ : ಧರಣಿ ಲೋಪಲನೇನು ತಲ್ಲಿಗರ್ಭಮುನಂದು
ಬುಟ್ಟಿನಪ್ಪಟಿನುಂಡಿ ಪುಣ್ಯ ಮೆರುಗ
ನೇಕಾದಶಿವ್ರತಂ ಬೆನ್ನಡುಂಡಗಲೇದು
ತೀರ್ಥಯಾತ್ರಲಕೈನ ತಿರುಗಲೇದು
ಪಾರಮಾರ್ಥಿಕ ಮೈನ ಪನುಲು ಸೇಯಗ ಲೇದು
ಭಿಕ್ಷ ಮೊಕ್ಕನಿ ಕೈನ ಬೆಟ್ಟ ಲೇದು
ಜ್ಞಾನವಂತುಲ ಕೈನ ಬೂನಿಮ್ರೊಕ್ಕಗಲೇದು
ನಿತರ ದಾನಮು ಲೈನ ನಿವ್ವಲೇದು

ತೇಟಗೀತೆ : ನಳಿನದಳ ನೇತ್ರ ನಿನ್ನುನೇ ನಮ್ಮಿ ನಾನು
ಚೇರಿರಕ್ಷಿಂಪವೇನನ್ನು ಶೀಘ್ರಮುಗನು ॥ಭೂ॥

ಅನುವಾದ : ಧರಣಿಯೊಳಗೆ ನಾನು ತಾಯಿ ಗರ್ಭದೊಳಿಂದ
ಹುಟ್ಟಿ ಬಂದಾಗಿಂದ ಪುಣ್ಯವರಿಯೆ
ಏಕಾದಶಿ ವ್ರತವನು ಆಚರಿಸಲಿಲ್ಲ
ತೀರ್ಥಯಾತ್ರೆಗಳಿಗೆ ತಿರುಗಲಿಲ್ಲ
ಪಾರಮಾರ್ಥಿಕವಾಡ ಕಾರ್ಯವೆಸಗಲಿಲ್ಲ
ಭಿಕ್ಷೆಯ ನಾರಿಗುಂ ನೀಡಲಿಲ್ಲ
ಜ್ಞಾನವಂತರಿಗಂತು ಕೈಯ ಮುಗಿಯಲಿಲ್ಲ
ಇತರ ದಾನವದೇನು ಕೊಡಲಿ ಇಲ್ಲ

ತೇಟಗೀತೆ : ನಳಿನ ದಳ ನೇತ್ರ ನಾನಿನ್ನ ನೆಚ್ಚಿಕೊಂಡೆ
ಹರಿಸಿ ರಕ್ಷಿಸಬೇಕಯ್ಯ ಶೀಘ್ರದೊಳಗೆ ॥ಭೂ॥

ತಾತ್ಪರ್ಯ : ಭೂಮಿಯಲ್ಲಿ ನಾನು ಜನ್ಮ ತಾಳಿದ ದಿನದಿಂದ ಪುಣ್ಯ ಕಾರ್ಯವನ್ನು ಮಾಡಲಿಲ್ಲ. ಏಕಾದಶಿ ವ್ರತವನ್ನು ಆಚರಿಸಲಿಲ್ಲ. ತೀರ್ಥಯಾತ್ರೆಗಳನ್ನು ಮಾಡಲಿಲ್ಲ. ಪಾರಮಾರ್ಥಿಕವಾದ ಯಾವ ಕೆಲಸವನ್ನೂ ಮಾಡಲಿಲ್ಲ. ಭಿಕ್ಷೆಯನ್ನೂ ಸಹ ನೀಡಲಿಲ್ಲ. ಜ್ಞಾನವಂತರಿಗೆ ಕೈಯ ಮುಗಿಯಲಿಲ್ಲ. ಇತರೆ ದಾನ ಧರ್ಮಗಳನ್ನು ಮಾಡಲಿಲ್ಲ. ಈಗ ನಾ ನಿನ್ನ ನಂಬಿರುವೆನು. ಎನ್ನನ್ನು ಆಶೀರ್ವದಿಸಿ ರಕ್ಷಿಸಬೇಕು.

44. ಸೀಸ : ಅಡವಿ ಪಕ್ಷುಲಕೆವ್ವ ಡಾಹಾರಮಿಚ್ಚೆನು
ಮೃಗ ಜಾತಿಕೆವ್ವಡು ಮೇತಬೆಟ್ಟೆ
ವನ ಚರಾದುಲಕು ಭೋಜನ ಮುಪ್ಪಡಿಪ್ಪಿಂಚೆ
ಚೆಟ್ಲಕೆವ್ವಡು ನೀಳ್ಳು ಚೇದಿ ಪೋಸೆ
ಸ್ತ್ರೀಲ ಗರ್ಭಂಬುನ ಶಿಶುವು ನೆವ್ವಡು ಪೆಂಚೆ
ಫಣುಲ ಕೆವ್ವಡು ಪೋಸೆ ಬರಗಪಾಲು
ಮಧುಪಾಳಿಕೆವ್ವಡು ಮಕರಂದ ಮೊನರಿಂಚೆ
ಬಸುಲ ಕೆವ್ವಡೊಸಂಗೆ ಬಚ್ಚಿಪೂರಿ

ತೇಟಗೀತೆ : ಜೀವಕೋಟ್ಲನು ಬೋಷಿಂಪ ನೀವೆ ಕಾನಿ
ವೇರೆ ಯೊಕದಾತಲೇಡಯ್ಯ ವೆದಕಿಚೂಡ ॥ಭೂ॥

ಅನುವಾದ : ಅಡವಿ ಹಕ್ಕಿಗೆ ಯಾರು ಆಹಾರವಿತ್ತರು
ಮೃಗಗಳಿಗಾರು ಮೇವನ್ನಿಟ್ಟವರು
ವನ ಚರ ಗಳಿಗಾವ ಗ್ರಾಸ ಸವನಿಸಿದ
ಸಸಿಗೆ ಯಾವನು ನೀರು ಸೆಳೆದು ಸುರಿದ
ಸ್ತ್ರೀಯು ಗರ್ಭದೊಳಾವ ಶಿಶುಗಳ ಬೆಳೆಸಿದ
ಪವನಾಗಿ ಫಣೆಗೆ ಪಾಲೆರೆದನಾರು
ಮಧುಪಾಳಿಗಾವನು ಮಕರಂದ ತಂದಿತ್ತ
ಹಸುಗಳ್ಗಿತ್ತವರಾರು ಹಸಿರು ಹುಲ್ಲು

ತೇಟಗೀತೆ : ಜೀವ ಕೋಟಿಯ ಪೋಷಿಸೆ ನಿನ್ನ ಹೊರತು
ಬೇರೆ ಯಾವ ದಾತನು ಇಲ್ಲ ಬೆದಕಿನೋಡೆ ॥ಭೊ॥

ತಾತ್ಪರ್ಯ : ಅಡವಿ ಪಕ್ಷಿಗಳಿಗೆ ಯಾರು ಆಹಾರ ಕೊಟ್ಟರು ? ವನ ಚರಗಳಿಗೆ ಯಾರು ಆಹಾರ ಒದಗಿಸಿದರು ? ಮೃಗಗಳಿಗೆ ಯಾವನು ಮೇವನು ಇಟ್ಟ ? ಗಿಡ ಮರಕೆ ಯಾರು ನೀರು ಹಾಕಿದರು. ಹಾವಿಗೆ ಯಾರು ಹಾಲು ಉಣಿಸಿದರು ? ಭೃಂಗಕೆ ಯಾರು ಮಕರಂದ ಒದಗಿಸಿದರು ? ಹಸುಗಳಿಗೆ ಯಾರು ಹಸಿ ಹುಲ್ಲು ಹಾಕಿದರು ? ಈ ರೀತಿ ಜೀವ ಕೋಟಿಯ ಸಲಹುವವನು ನೀನಲ್ಲದೆ ಬೇರೆ ಯಾರೂ ಇಲ್ಲ.

45. ಸೀಸ : ದನುಜಾರಿ ನಾವಂಟಿ ದಾಸ ಜಾಲಮುನೀಕು
ಕೋಟಿ ಸಂಖ್ಯ ಗಲರು ಕೊದುವ ಲೇದು
ಬಂಟ್ಲ ಸಂದಡಿ ವಲ್ಲ ಬಹುಪರಾಕೈನನ್ನು
ಮರಚಿಪೋಕುಮು ಭಾಗ್ಯ ಮಹಿಮ ಚೇತ
ದಂಡಿಗಾ ಭೃತ್ಯುಲು ದಗಿಲಿನೀಕುಂಡಂಗ
ಒಕ್ಕ ಬಂಟುಪಾಟಿ ಪನಿಕಿ ನಗುದು
ನೀವು ಮೆಚ್ಚಡಿ ಪನುಲ್ ನೇನು ಚೇಯಗಲೇಕ
ಯಿಂಥ ವೃಥಾ ಜನ್ಮ ಮೆತ್ತಿನಾನು

ತೇಟಗೀತೆ : ಭೂಜನುಲಲೋನ ನೇನಪ್ರಯೋಜಕುಡನು
ಗನುಕ ನೀ ಸತ್ಕಟಾಕ್ಷಂಬು ಗಲುಗ ಜೇಯು ||ಭೂ||

ಅನುವಾದ : ದನು ಜಾರಿ ನನ್ನಂಥ ದಾಸ ಜಾಲ ನಿನಗೆ
ಕೋಟಿ ಸಂಖ್ಯೆ ಇಹರು ಕಡಿಮೆ ಇಲ್ಲ
ಭಟರ ಸಂದಣಿಯಲ್ಲಿ ಮಗ್ನನಾಗಿರುತೆನ್ನ
ಮರೆತು ಹೋಗದೆ ಭಾಗ್ಯ ಮಹಿಮೆಯಿಂದ
ಹೆಚ್ಚಾಗಿ ಭೃತ್ಯರು ಸೇರಿ ನಿನ್ನಲಿರಲು
ಒಂಟಿ ಸೇವಕನಾವ ಕೆಸಲಕ್ಕೊದಗು
ನೀನು ಮೆಚ್ಚುವ ಕಾರ್ಯ ನಾನು ಮಾಡಲೆ ಇಲ್ಲ
ಇಷ್ಟು ವೃಥಾ ಜನ್ಮ ತಳೆದೆ ನಾನು

ತೇಟಗೀತೆ : ಭುವಿಯ ಜನರಲಿ ನಾ ಅಪ್ರಯೋಜಕ ನಿಜ
ಆದರಿಂ ನೀ ಸತ್ಕಟಾಕ್ಷವ ತೋರು ಎನಗೆ ||ಭೂ||

ತಾತ್ಪರ್ಯ : ದುಷ್ಟರನ್ನು ದಮನ ಮಾಡುವ ದಾನವಾಂತಕನೆ, ನಿನಗೆ ದಾಸ ಸಮೂಹ ಕೋಟಿ ಸಂಖ್ಯೆಯಲ್ಲಿರುವರು. ನಿನಗಿರುವ ಭಾಗ್ಯ ಭಟರ ವೈಭವದಲ್ಲಿ ನನ್ನನ್ನು ಮರೆಯಬೇಡ. ಅನೇಕ ಭಟರು ನಿನಗಿರಲು ನಾನೊಬ್ಬ ಏನು ಮಾಡಬಲ್ಲೆ. ನೀನು ಮೆಚ್ಚುವ ಕೆಲಸಗಳನ್ನು ನಾನು ಮಾಡಲಿಲ್ಲ. ನಾನು ಕೆಲಸಕ್ಕೆ ಬಾರದವನು, ನಿಜ. ಆದರೂ ಎನ್ನನ್ನು ಕಾಪಾಡುವ ಭಾರ ನಿನ್ನದೆ, ಎನ್ನ ಮೇಲೆ ದಯೆ ತೋರು.

46. ಸೀಸ : ಕಮಲ ಲೋಚನ ನನ್ನು ಗನ್ನ ತಂಡ್ರಿವಿಗಾನ
ನನ್ನು ನೇ ಮರಕುಂಟಿ ನೇನು ವಿಡಕ
ಯುದರ ಪೋಷಣಕುನ್ನೈ ಯೊಕರಿ ನೇ ನಾಶಿಂಪ
ನೇರ ನಾ ಕನ್ನಂಬು ನೀವು ನಡಪು
ಪೆಟ್ಟಲೇ ನಂಟಿವಾ ಪಿನ್ನಪೆದ್ದಲ ಲೋನ
ದಗವು ಕಿಪ್ಪುಡು ದೀಯ ದಲಚಿ ನಾನು
ಧನಮು ಭಾರಂಬೈನ ದಲಕಿರೀಟಮು ಲಿಮ್ಮು
ಕುಂಡಲಂಬುಲು ಪೈಡಿ ಗೊಲಸು ಲಿಮ್ಮು

ತೇಟಗೀತೆ : ಕೊನಕು ನೀ ಶಂಕ ಚಕ್ರಮುಲ್ ಕುದುವ ಬೆಟ್ಟಿ
ಗ್ರಾಸಮುನೊಸಂಗಿ ಪೋಷಿಂಚು ಕಪಟ ಮುಡುಗಿ ॥ಭೂ॥

ಅನುವಾದ : ಕಮಲ ಲೋಚನ ನನ್ನ ಹೆತ್ತ ತಂದೆಯೊ ನೀನು
ನನ್ನನಾ ಮರೆಯದೆ ಬಿಡದೆ ಇರುವೆ
ಉದರ ಪೋಷಣೆಗಾಗಿ ಪರರನಾಶ್ರಯಿಸೆನು
ಎನಗೆ ನೀ ಅನ್ನಪಾನವನು ನಡೆಸು
ನೀಡನೆಂದೆಯೊ ಹಿರಿಯ ಕಿರಿಯರ ಸೇರಿಸಿ
ಈಗಲೆ ನ್ಯಾಯ ಕೇಳುವೆನು ನಾನು
ಹಣವಿಲ್ಲದಿರಲು ನಿನ್ನ ಮಕುಟವನೆ ನೀಡು
ಕುಂಡಲ ಕಾಂಚನ ಗೊಲಸು ನೀಡು

ತೇಟಗೀತೆ : ಕೊನೆಗೆ ನಿನ್ನಯ ಶಂಕುಚಕ್ರವಡವಿಟ್ಟು
ಗ್ರಾಸವೆಸಗಿ ಪೋಷಿಸು ಎನ್ನ ಕಪಟ ಉಡುಗಿ ॥ಭೂ॥

ತಾತ್ಪರ್ಯ : ಕಮಲ ಲೋಚನ, ನೀನು ಹೆತ್ತ ತಂದೆ. ನಿನ್ನ ಬಿಡದೆ ಮರೆಯದೆ ಸ್ಮರಿಸುತ್ತಿರುವೆನು. ಹೊಟ್ಟೆಪಾಡಿಗೆ ಇತರರನ್ನು ಆಶ್ರಯಿಸಲಾರೆ. ನೀನೇ ಅನ್ನ ಪಾನಗಳನ್ನು ಒದಗಿಸಬೇಕು. ಒದಗಿಸುವುದಿಲ್ಲವೆಂದರೆ ಇದೊ ಈಗಲೆ ಹಿರಿಯರನ್ನೂ, ಕಿರಿಯರನ್ನೂ ಸೇರಿಸಿ ನ್ಯಾಯವನ್ನು ಕೇಳುತ್ತೇನೆ. ನಿನ್ನಲ್ಲಿ ಹಣವಿಲ್ಲದಿದ್ದರೆ ನಿನ್ನ ಕಿರೀಟವನ್ನು ಕೊಡು. ನಿನ್ನ ಕಿವಿಯ ಓಲೆಯೋ ಕೈಯಲ್ಲಿರುವ ಗೊಲಸನ್ನೋ ನೀಡು. ಅದೂ ಆಗದಿದ್ದರೆ ನಿನ್ನ ಶಂಖ ಚಕ್ರಗಳನ್ನು ಅಡವಿಟ್ಟು ನನ್ನನ್ನು ಪೋಷಣೆ ಮಾಡು.

47. ಸೀಸ : ಕುವಲಯ ಶ್ಯಾಮನೀ ಕೊಲುವು ಚೇಸಿನ ನಾಕು
ಜೀತ ಮೆಂದುಕು ಮೆಚ್ಚಿ ಇಪ್ಪವೈತಿ
ಮಂಚಿ ಮಾಟಲ ಜೀತ ಕೊಂಚ ಇಯ್ಯಗಲೇವು
ಕಲಹ ಮೌನಿಕ ನಮ್ಮು ಖಂಡಿತಮುಗ
ನೀವು ಸಾಧುವು ಗಾನ ಇಂತ ಪರ್ಯಂತಂಬು
ಚನುವುಚೇ ನಿನ್ನಾಳ್ಳು ಓರುಪ ಮಲಸೆ
ನಿಕನೇನು ಸಹಿಂಪ ನಿಪ್ಪುಡು ನನ್ನೇ ಮೈನ
ಶಿಕ್ಷ ಚೇಸಿನ ಜೇಯುಮು ಸಿದ್ಧಮೈತಿ

ತೇಟಗೀತೆ : ನೇಡು ಕರುಣಿಂಚಕುಂಟಿವಾ ನಿಶ್ಚಯಮುಗ
ದೆಗ ಬಡಿತಿ ಜೂಡು ನೀ ತೋಡ ಜಗದ ಮುನಕು ॥ಭೂ॥

ಅನುವಾದ : ಕುವಲಯಶ್ಯಾಮ ನಿನ್ನ ಭಜಿಸಿದ ಎನಗೆ
ಜೀತವದೇತಕೆ ಕೊಡದೆ ಇರುವೆ
ಒಳ್ಳೆ ಮಾತುಗಳಿಂದ ಕೊಂಚವೂ ಕೊಡಲಿಲ್ಲ
ಕಲಹವಾಗುವುದಯ್ಯ ಖಂಡಿತವಿದು
ನೀನು ಸಾಧುವದರಿಂದಲಿ ಈ ಪರ್ಯಂತವು
ಸ್ನೇಹಭಾವದೊಳು ಸುಮ್ಮನಿರಲಾಯ್ತು
ಇನ್ನು ಸಹಿಸಲಾರೆ ಎನ್ನ ನೇನಾದರೂ
ಶಿಕ್ಷಿಸಿದರು ಸರಿ ಸಿದ್ಧವಿರುವೆ

ತೇಟಗೀತೆ : ಇಂದು ಕರುಣಿಸದಿದ್ದೊಡೆ ನಿಶ್ಚಯದೊಳು
ನಿನ್ನ ಸಂಗಡ ತೊಡಗುವೆ ಕಲಹಕೀಗ ॥ಭೂ॥

ತಾತ್ಪರ್ಯ : ನೀಲಮೇಘಶ್ಯಾಮ, ನಿನ್ನನ್ನು ಸದಾ ಭಜನೆ ಮಾಡುವ ನನಗೆ ಏಕೆ ಜೀತವನ್ನು ಕೊಡಲಿಲ್ಲ. ಒಳ್ಳೆಯ ಮಾತುಗಳಿಂದ ಎಷ್ಟು ಪ್ರಾರ್ಥಿಸಿದರೂ ನೀನು ಕೊಡದೆ ಇರುವೆ. ನಿಜವಾಗಿ ಈಗ ನಿನ್ನ ಸಂಗಡ ಜಗಳವಾಡಬೇಕಾಗಿದೆ. ನೀನು ಸಾಧು. ಆದ್ದರಿಂದ ಇಷ್ಟು ದಿವಸ ಸುಮ್ಮನಿರಬೇಕಾಯ್ತು. ಇನ್ನು ಸುಮ್ಮನಿರಲಾರೆ. ಒಂದು ವೇಳೆ ನೀನು ನನ್ನನ್ನು ಶಿಕ್ಷಿಸಿದರೂ ಸರಿ. ಇಂದು, ನೀನು ಎನ್ನ ಕರುಣಿಸದಿದ್ದರೆ, ಇದೋ ಈಗಲೇ ನಿನ್ನೊಡನೆ ಕಲಹಕ್ಕೆ ನಿಲ್ಲುವೆ.

48. ಸೀಸ : ಹರಿ ನೀಕುಬರ್ಯಂಕ ಮ್ಯೈನ ಶೇಷುಡು ಚಾಲ
ಪವನಮು ಭಕ್ಷಿಂಚಿ ಬ್ರತುಕು ಚುಂಡು
ನನುವುಗಾ ನೀಕು ವಾಹನಮ್ಯೈನ ಖಗರಾಜು
ಗೊಪ್ಪಪಾಮುನು ನೋಟ ಗೊರುಕಂ ಚುಂಡು
ನದಿಕಾಗ ನೀ ಭಾರ್ಯ ಯ್ಯೈನ ಲಕ್ಷ್ಮೀದೇವಿ
ದಿನಮು ಪೇರಂಟಂಬು ದಿರುಗು ಚುಂಡು
ನಿನ್ನು ಭಕ್ತುಲುಪಿಲ್ಚಿ ನಿತ್ಯ ಪೂಜಲು ಚೇಸಿ
ಪ್ರೇಮ ಪಕ್ವಾನ್ನಮುಲ್ ಪೆಟ್ಟುಚುಂಡ್ರು

ತೇಟಗೀತೆ : ಸ್ವಸ್ಥ ಮುಗ ನೀಕು ಗ್ರಾಸಮುಲ್ ಜರುಗು ಚುಂಡ
ಗಾಸು ನೀ ಚೇತ ದೊಕಟ್ಯೈನ ಗಾದು ವ್ಯಯಮು ॥ಭೂ॥

ಅನುವಾದ : ಹರಿ ನಿನ್ನ ಪರ್ಯಂಕ ನಿಹ ಶೇಷನು ಬಹಳ
ಪವನವ ಭಕ್ಷಿಸಿ ಬದುಕು ತಿಪನು
ಹಿತವಾದ ನಿನ್ನ ವಾಹನ ಖಗರಾಜನು
ದಪ್ಪ ಹಾವನು ಬಾಯೊಳ್ ಕಚ್ಚುತಿಹನು
ಅಲ್ಲದೆ ನಿನಕಾಂತೆ ಶ್ರೀ ಲಕ್ಷ್ಮಿದೇವಿಯು
ಅನುದಿನ ಒಸಗೆಗೆ ತಿರುಗುತಿಹಳು
ನಿನ್ನ ಭಕ್ತರು ಕರೆದು ನಿತ್ಯ ಪೂಜೆಯಂ ಮಾಡಿ
ಪ್ರೇಮ ಪಕ್ವಾನ್ನವ ಉಣಿಸುತಿಹರು

ತೇಟಗೀತೆ : ಸ್ವಸ್ಥದೊಳು ನಿನಗೆ ಗ್ರಾಸ ಜರುಗುತಿರಲು
ನಿನ್ನ ಕೈಲಿವೆಚ್ಚವಿರದು ಒಂದು ಕಾಸು ॥ಭೂ॥

ತಾತ್ಪರ್ಯ : ಶ್ರೀ ಹರಿಯೆ, ನಿನ್ನ ಹಾಸಿಗೆಯಾದ ಶೇಷನು ಗಾಳಿಯನ್ನು ಸೇವಿಸಿ ಬದುಕುತಿರುವನು. ನಿನ್ನ ವಾಹನ ಗರುಡ ಹಾವನ್ನು ಬಾಯಲ್ಲಿ ಕಚ್ಚುತ್ತಿರುವನು. ನಿನ್ನ ಕಾಂತೆ ದಿನನಿತ್ಯ ಭಕ್ತರ ಮನೆಯ ಮಂಗಳ ಕಾರ್ಯಗಳಿಗೆ ಹೋಗಿ ಬರುತ್ತಾಳೆ. ನಿನಗಾದರೊ ನಿನ್ನ ಭಕ್ತರು ಪ್ರತಿನಿತ್ಯ ಮೃಷ್ಟಾನ್ನವನ್ನು ನೀಡುತ್ತಾರೆ. ಹೀಗಿರುವಾಗ ನಿನ್ನ ಕೈಯಿಂದ ಒಂದು ಬಿಡಿ ಕಾಸೂ ವೆಚ್ಚವಾಗುವುದಿಲ್ಲ.

49. ಸೀಸ : ಪುಂಡರೀಕಾಕ್ಷನಾ ರೆಂಡು ಕನ್ನುಲನಿಂಡ
ನಿನ್ನು ಚೂಸೆಡಿ ಭಾಗ್ಯ ಮೆನ್ನಡಯ್ಯ
ವಾಸಿಗಾನಾ ಮನೋವಾಂಛ ತೀರೇಟಟ್ಲು
ಸೊಗಸುಗಾ ನೀರೂಪು ಜೂಪವಯ್ಯ
ಪಾಪ ಕರ್ಮುನಿ ಕಂಡ್ಲ ಬಡಕಪೋವದ ಮಂಚು
ಕಠಿಣ ವ್ಯೈನ ಪ್ರತಿಜ್ಞ ಪಟ್ಟಿನಾವ
ವಸುಧಲೋ ಬತಿತ ಪಾವನುಡ ನೀವಂಚು ನೇ
ಪುಣ್ಯವಂತುಲನೋಟ ಬೊಗಡವಿಂಟಿ

ತೇಟಗೀತೆ : ನೇಮಿಟಿಕಿ ವಿಸ್ತರಿಂಚೆ ನೀಕಿಂತ ಕೀರ್ತಿ
ದ್ರೋಹಿನೈನನು ನಾಕೀವು ದೊರಕರಾದೆ ॥ಭೂ॥

ಅನುವಾದ : ಪುಂಡರೀಕಾಕ್ಷ ಎನ್ನೆರಡು ಕಣ್ಣುಗಳಿಂದ
ನಿನ್ನ ನೋಡುವ ಭಾಗ್ಯವೆಂದೂ ಅಯ್ಯ
ಪೂರ್ಣವಾಗೆನ್ನ ಮನೋವಾಂಛೆ ತೀರುವ ಹಾಗೆ
ಸೊಗಸಾದ ನಿನರೂಪ ತೋರಿಸಯ್ಯ
ಪಾಪ ಕರ್ಮದ ಕಣ್ಗೆ ಬೀಳಬಾರದು ಎಂದು
ಕಠಿಣ ಪ್ರತಿಜ್ಞೆಯ ಹಿಡಿದೆ ಏನು
ವಸುಧೆಯೊಳ್ ಪತಿತ ಪಾವನನು ನೀ ಎಂದು ನಾ
ಪುಣ್ಯವಂತರ ಬಾಯೊಳ್ ಹೊಗಳೆ ಕಂಡೆ

ತೇಟಗೀತೆ : ಯಾವುದಕೆ ವಿಸ್ತರಿಸಿತೀ ಕೀರ್ತಿ ನಿನಗೆ
ದ್ರೋಹಿಯಾದರು ಸಿಗಬಾರದೇನು ಎನಗೆ ॥ಭೂ॥

ತಾತ್ಪರ್ಯ : ಪುಂಡರೀಕಾಕ್ಷನೆ, ಎನ್ನೆರಡು ಕಣ್ಣುಗಳಿಂದ ನಿನ್ನ ಕಾಣುವ ಭಾಗ್ಯ ಯಾವಾಗ ಬರುವುದಯ್ಯ. ಮೇಲಾಗಿ ನನ್ನ ಮನದಾಸೆ ನೀಗುವ ಹಾಗೆ ನಿನ್ನ ಅಂದವಾದ ರೂಪವನ್ನು ತೋರಿಸಯ್ಯ. ಪಾಪ ಮಾಡಿದವನ ಕಣ್ಣಿಗೆ ಬೀಳಬಾರದೆಂದು ಕಠಿಣ ಪ್ರತಿಜ್ಞೆಯನ್ನು ಮಾಡಿರುವೆಯಾ ? ನೀನು ಪತಿತ ಪಾವನವೆಂದು ಪುಣ್ಯವಂತರು ಹೊಗಳುವುದನ್ನು ಕೇಳಿದ್ದೇನೆ. ನಿನಗೆ ಇಷ್ಟೊಂದು ಕೀರ್ತಿ ಯಾವ ಕಾರಣದಿಂದ ಉಂಟಾಯಿತೋ ನಾನು ಕಾಣೆ. ನಾನು ದ್ರೋಹಿಯೇ ಆಗಿರಲಿ, ಎನಗೆ ನೀನು ಕಾಣಿಸಬಾರದೆ ?

50. ಸೀಸ : ಪಚ್ಚಿ ಚರ್ಮಪುದಿತ್ತಿ ಪಸಲೇದು ದೇಹಂಬು
ಲೋಪಲನಂತಟ ರೋಯುರೋತ
ನರಮುಲು ಶಲ್ಯಮುಲ್ ನವರಂಧ್ರಮುಲು ರಕ್ತ
ಮಾಂಸ ಖಂಡಂಬುಲು ವ್ಯೈಲತಿತ್ತಿ
ಬಲು ವ್ಯೆನ ಯೆಂಡವಾ ನಲ ಕೋರ್ವ ದಿಂತ್ಯೆನ
ದಾಳಲೇದಾಕಲಿ ದಾಹ ಮುಲಕು
ಸಕಲ ರೋಗಮುಲಕು ಸಂಸ್ಥಾನ ವ್ಯೆಯುಂಡು
ನಿಲುವದಸ್ಥಿರವ್ಯೆನ ನೀಟಿ ಬುಗ್ಗ

ತೇಟಗೀತೆ : ಬೊಂದಿ ಲೋನುಂಡು ಪ್ರಾಣಮುಲ್ ವೋವುವೆನಕ
ಕಾಟಿಕೇ ಗಾನಿ ಕೊರಗಾದು ಗವ್ವಕ್ಯೆನ ॥ಭೂ॥

ಅನುವಾದ : ಹಸಿಯು ಚರ್ಮದ ಚೀಲ ಸುಖವಿಲ್ಲ ಕಾಯವು
ಒಳಗಡೆ ಎಲ್ಲವೂ ಹೊಲಸು ಕೊಳಕು
ನರಗಳು ಶಲ್ಯಗಳ್ ನವರಂಧ್ರಗಳು ರಕ್ತ
ಮಾಂಸ ಖಂಡ ಜನಿತ ಕೊಳಕು ಚೀಲ
ಬಲವಾದ ಬಿಸಿಲು ಮಳೆಗೆ ತಾಳದು ಇನಿತುಂ
ತಾಳದದು ಹಸಿವು ದಾಹಗಳಿಗೆ
ಸಕಲ ರೋಗಕಿದು ಸಂಸ್ಥಾನದಂತಿರುವುದು
ನಿಲದು ಅಸ್ಥಿರವಾದ ನೀರಗುಳ್ಳೆ

ತೇಟಗೀತೆ : ಬೊಂದಿಯೊಳಗಣ ಪ್ರಾಣ ಹೋದ ಮೇಲೆ
ಮಸಣಕಲ್ಲದೆ ಕವಡೆಯು ಕಿಮ್ಮತ್ತಿಲ್ಲ ॥ಭೂ॥

ತಾತ್ಪರ್ಯ : ಈ ದೇಹ ಹಸಿ ಚರ್ಮದಿಂದ ಉಂಟಾದ ಚೀಲ. ಇದು ಮೂಳೆ ಮಾಂಸ ರಕ್ತ ಹೊಲಸು ಕೊಳಕುಗಳಿಂದ ತುಂಬಿದೆ. ಇದಕ್ಕೆ ಬಲವಾದ ಬಿಸಿಲು, ಮಳೆಯುನ್ನು ಎದುರಿಸಿ ನಿಲ್ಲುವ ಶಕ್ತಿಯಿಲ್ಲ. ಹಸಿವು ಬಾಯಾರಿಕೆಗಳನ್ನು ಸಹಿಸಲಾರದು. ಸಕಲ ರೋಗಗಳಿಗೆ ಇದು ಆವಾಸಸ್ಥಾನ. ನೀರ ಮೇಲಣ ಗುಳ್ಳೆಯಂತೆ ಅಸ್ಥಿರವಾದುದು. ದೇಹದಲ್ಲಿರುವ ಪ್ರಾಣ ಹೋದ ಮೇಲೆ, ಇದಕ್ಕೆ ಕವಡೆಯಷ್ಟೂ ಬೆಲೆಯಿಲ್ಲ.

51\. ಸೀಸ : ಬಲು ರೋಗಮುಲಕು ನೀ ಪಾದ ತೀರ್ಥಮೆಕಾನಿ
ವಲಪುಮುಂದುಲು ನೇನು ವಲ್ಲನೈಯ್ಯ
ಬೆಲಿಮಿ ಚೇಯುಚು ನೀಕು ಸೇವ ಚೇಸೆದ ಗಾನಿ
ನೀದಾಸಕೋಟಿಲೋ ನಿಲುಪವಯ್ಯ
ಗ್ರಹ ಭಯಂಬುನಕು ಚಕ್ರ ಮುದಲಂಚೆದಗಾನಿ
ಘೋರ ರಕ್ಷಲುಗಟ್ಟ ಗೋರನಯ್ಯ
ಪಾಮು ಕಾಟುಕು ನಿನ್ನು ಭಜನ ಚೇಸೆದ ಗಾನಿ
ದಾನಿಮುಂತ್ರಮು ನೇನು ದಲಪನಯ್ಯ

ತೇಟಗೀತೆ : ದೊರಕಿತಿವಿನಾಕುದಂಡಿ ವೈದ್ಯುಡವು ನೀವು
ವೆಯ್ಯಿಕಷ್ಟಾಲು ವಚ್ಚಿನ ವೆರವನಯ್ಯ ॥ಭೂ॥

ಅನುವಾದ : ಸಕಲ ರೋಗಕೆ ನಿನ್ನ ಪಾದತೀರ್ಥವಲ್ಲದೆ
ಶುಷ್ಕ ಔಷಧಿ ನಾ ಒಲ್ಲೆನಯ್ಯ
ಸ್ನೇಹ ಭಾವದಿ ನಿನ್ನ ಸೇವೆ ಮಾಡುವೆ ನೆಂಬೆ
ನಿನ ದಾಸ ಕೋಟಿಯೊಳ್ ನಿಲಿಸು ಎನ್ನ
ಗ್ರಹ ಪೀಡೆ ಗಾ ಚಕ್ರ ಬಯಸುವೆನೆ ಹೊರತು
ಘನ ತರ ರಕ್ಷೆಯು ಬೇಡೆನಯ್ಯ
ಹಾವು ಕಡಿತಕೆ ನಿನ್ನ ಭಜನೆ ಮಾಡುವೆ
ಅದರ ಮಂತ್ರವ ನಾನು ಪಠಿಸೆನಯ್ಯ

ತೇಟಗೀತೆ : ದೊರಕಿದೆ ಎನಗೆ ಬಹು ದೊಡ್ಡ ವೈದ್ಯ ನೀನು
ದಶನೂರು ಶ್ರಮಗಳಿರಲಿ ಹೆದರೆನಯ್ಯ ॥ಭೂ॥

ತಾತ್ಪರ್ಯ : ಸಕಲ ರೋಗಗಳಿಗೆ ನಿನ್ನ ಪಾದ ತೀರ್ಥವನ್ನು ತೆಗೆದು ಕೊಳ್ಳುತ್ತೇನೆಯೇ ಹೊರತು, ಇತರ ಔಷಧಿಗಳನ್ನು ಸೇವಿಸು ವುದಿಲ್ಲ. ಪ್ರೀತಿಯಿಂದ ನಿನ್ನ ಸೇವೆ ಮಾಡುವ ನನ್ನನ್ನು ನಿನ್ನ ದಾಸ ವೃಂದದಲ್ಲಿ ಸೇರಿಸಿಕೋ. ಗ್ರಹ ಭಯವುಂಟಾದರೆ ನಿನ್ನ ಚಕ್ರವನ್ನು ಧ್ಯಾನಿಸುವೆ. ಹೆಚ್ಚು ರಕ್ಷಣೆಯನ್ನು ಬೇಡುವುದಿಲ್ಲ. ಹಾವು ಕಡಿತಕ್ಕೆ ನಿನ್ನನ್ನು ಧ್ಯಾನ ಮಾಡು ವೆನೆ ಹೊರತು ಅದರ ಪರಿಹಾರಕ್ಕೆ ಮಂತ್ರವನ್ನು ಉಚ್ಚರಿಸು ವುದಿಲ್ಲ. ಬಹು ದೊಡ್ಡ ವೈದ್ಯ ನೀನು ಸಿಕ್ಕಿರುವಾಗ ಸಾವಿರ ತೊಂದರೆಗಳೇ ಬರಲಿ ನಾನು ಹೆದರುವುದಿಲ್ಲ.

52. ಸೀಸ : ಕೊಟಿ ಕೋಸರಮುಗಾ ಕೊರಗಾನಿ ಜನುಲಚೇ
ಬಲು ಗದ್ದರಿಂಪುಲು ಪಡಗ ವಲಸೆ
ದಾರಸುತ ಭ್ರಮ ದಗಿಲಿ ಯುಂಡಗ ಗದಾ
ದೇಶ ದೇಶಮುಲೆಲ್ಲ ದಿರುಗ ವಲಸೆ
ಪೆಸುದರಿದ್ರಮು ಪೈನ ಪೆರಿಗಿಯುಂಡಗ ಗದಾ
ಜೇರಿ ನೀಚುಲ ಸೇವ ಜೇಯು ವಲಸೆ
ನಭಿಮಾನ ಮುಲು ಮದಿ ನಂಟಿ ಯುಂಡಗ ಗದಾ
ಪರುಲ ಜೂಚನ ಭೀತಿ ಪಡಗ ವಲಸೆ

ತೇಟಗೀತೆ : ನಿಟುಲ ಸಂಸಾರ ವಾರಧಿ ನೀದ ಲೇಕ
ವೆಯ್ಯಿ ವಿಧಮುಲು ನಿನ್ನು ನೇವೇಡುಕೊಂಟಿ ॥ಭೂ॥

ಅನುವಾದ : ಉದರ ಪೋಷಣೆಗಾಗಿ ವ್ಯರ್ಥ ಮನುಜರಿಂದ
ಅವಹೇಳನವನುಭವಿಸಬೇಕಾಯ್ತು
ದಾರಾಸುತ ಭ್ರಮೆಗೆ ತಗಲಿದುದರಿಂದ
ದೇಶ ದೇಶಗಳೆಲ್ಲ ತಿರುಗಲಾಯ್ತು
ಬಹು ದರಿದ್ರವು ಆವರಿಸಿದರಿಂದಲ್ಲವೆ
ಸೇರಿ ನೀಚರ ಸೇವೆ ಸಲಿಸಲಾಯ್ತು
ಅಭಿಮಾನವದು ಮನದಿ ನೆಲೆಸಿದುದರಿಂದ
ಪರರ ನೋಡಲು ಭೀತಿ ಹೊಂದಲಾಯ್ತು

ತೇಟಗೀತೆ : ಹೀಗೆ ಸಂಸಾರವಾರಿಧಿ ಈಸ ಬರದೆ
ಸಾವಿರ ವಿಧದಿ ನಿನ್ನ ನಾ ಬೇಡಿಕೊಂಡೆ ॥ಭೂ॥

ತಾತ್ಪರ್ಯ : ಹೊಟ್ಟೆ ಹೊರೆಯಲು ಕೆಲಸಕ್ಕೆ ಬಾರದ ಜನರಿಂದ ಅವಮಾನ ಪಡಬೇಕಾಯ್ತು. ಹೆಂಡತಿ ಮಕ್ಕಳ ಮೇಲಿನ ಮಮತೆಯಿಂದ ದೇಶ ದೇಶಗಳಲ್ಲಿ ಅಲೆಯಬೇಕಾಗಿ ಬಂತು. ದರಿದ್ರದ ದಿಸೆಯಿಂದ ಹೀನರಲ್ಲಿ ಯಾಚನೆ ಮಾಡುವಂತಾಯ್ತು. ಅಭಿಮಾನ ತಾಳಿದುದರಿಂದ ಇತರರನ್ನು ನೋಡಿ ಭಯಪಡಬೇಕಾಯ್ತು. ಈ ರೀತಿ ಸಂಸಾರ ಸಾಗರವನ್ನು ಈಸಲಾರದೆ, ಸಾವಿರ ವಿಧದಲ್ಲಿ ನಿನ್ನ ನಾನು ಬೇಡಿಕೊಂಡೆ.

53. ಸೀಸ : ಸಾಧು ಸಜ್ಜನುಲತೋ ಜಗಡ ಮಾಡಿನ **ಗೀಡು**
ಕವುಲತೋ ವೈರಂಬು ಗನಿನ ಗೀಡು
ಪರಗ ದೀನುಲ ಚಿಕ್ಕ ಬಟ್ಟಿಗೊಟ್ಟಿನ **ಗೀಡು**
ಭಿಕ್ಷಗಾಂಡ್ರನು ದುಃಖ ಪೆಟ್ಟ ಗೀಡು
ಸಿರುಪೇದಲನು ಜೂಚಿ ನಿಂದ ಜೇಸಿನ **ಗೀಡು**
ಪುಣ್ಯವಂತುಲ ದಿಟ್ಟ ಬೊಸಗು ಗೀಡು
ಸದ್ಭಕ್ತುಲನು ತಿರಸ್ಕಾರ ಮಾಡಿನ ಗೀಡು
ಗುರುನಿ ದ್ರವ್ಯಮು ದೋಚು ಕೊನಿನ **ಗೀಡು**

ತೇಟಗೀತೆ : ದುಷ್ಟ ಕಾರ್ಯಮು ಲೊನರಿಂಪ ದುರ್ಜನುಲಕು
ಘನತರಂಬೈನ ನರಕಂಬು ಗಟ್ಟಿ ಮುಲ್ಲೆ ॥ಭೂ॥

ಅನುವಾದ : ಸಾಧು ಸಜ್ಜನ ಸಂಗ ಜಗಳವಾಡಲು **ಕೇಡು**
ಕವಿಗಳಲಿ ಶತೃತ್ವ ಮಾಡೆ ಕೇಡು
ದೀನ ಜನರನು ಹಿಡಿದು ಹೊಡೆಯಲು **ಕೇಡು**
ಭಿಕ್ಷುಕರನು ದುಃಖ ಗೊಳಿಸೆ ಕೇಡು
ಕಡು ಬಡವರ ನೋಡಿ ನಿಂದೆ ಮಾಡಲು **ಕೇಡು**
ಪುಣ್ಯವಂತರ ಬೈಯಬಹುದು ಕೇಡು
ಸದ್ಭಕ್ತರನು ತಿರಸ್ಕಾರ ಮಾಡಲು **ಕೇಡು**
ಗುರುವಿನ ಧನ ಅಪಹರಿಸೆ ಕೇಡು

ತೇಟಗೀತೆ : ದುಷ್ಟ ಕಾರ್ಯವ ಎಸಗುವ ದುರ್ಜನರಿಗೆ
ಘನತರವಾದ ನರಕವ ಕಾದ್ದಿಟ್ಟಂತೆ ॥ಭೂ॥

ತಾತ್ಪರ್ಯ : ಸಾಧು ಸಜ್ಜನರ ಸಂಗಡ ಜಗಳ, ಕವಿಗಳ ಜತೆ ವೈರತ್ವ, ದೀನರನ್ನು ಹೊಡೆಯುವುದು, ಭಿಕ್ಷೆ ಬೇಡುವವರನ್ನು ದುಃಖಕ್ಕೆ ಈಡು ಮಾಡುವುದು, ಕಡು ಬಡವರನ್ನು ನಿಂದೆ ಮಾಡುವುದು, ಸದ್ಭಕ್ತರನ್ನು ತಿರಸ್ಕಾರ ಮಾಡುವುದು, ಗುರು ಧನವನ್ನು ಅಪಹರಿಸುವುದು ಇವೆಲ್ಲ ಕೇಡನ್ನು ತರುವ ದುಷ್ಟ ಕಾರ್ಯಗಳು ಈ ಕಾರ್ಯಗಳನ್ನೆಸಗುವವರಿಗೆ ಘೋರ ನರಕ ಕಟ್ಟಿಟ್ಟ ಬುತ್ತಿ.

54. ಸೀಸ : ಪರುಲ ದ್ರವ್ಯಮು ಮೀದ ಭ್ರಾಂತಿ ನೊಂದಿನವಾಡು
ಪರ ಕಾಂತಲನಪೇಕ್ಷ ಪಡೆಡು ವಾಡು
ಅರ್ಥುಲವಿತ್ತಂಬು ನಪಹರಿಂಚೆಡುವಾಡು
ದಾನ ಮಿಯ್ಯಂಗ ವದ್ದನೆಡು ವಾಡು
ಸಭಲೋಪಲ ನಿಲ್ಚಿ ಚಾಡಿ ಚೆಪ್ಪೆಡು ವಾಡು
ಪಕ್ಷಪು ಸಾಕ್ಷ್ಯಂಬು ಬಲುಕುವಾಡು
ವಿಷ್ಣು ದಾಸುಲ ಜೂಚಿ ವೆಕ್ಕರಿಂಚೆಡಿ ವಾಡು
ಧರ್ಮದಾಸುಲ ದಿಟ್ಟ ದಲಚು ವಾಡು

ತೇಟಗೀತೆ : ಪ್ರಜುಲ ಜಂತುಲ ಹಿಂಸಿಂಚು ಪಾತಕುಂಡು
ಕಾಲಕಿಂಕರ ಗದಲ ಚೇಗಷ್ಟಮೊಂದು ॥ಭೂ॥

ಅನುವಾದ : ಪರರ ವಿತ್ತದೊಳು ಬ್ರಾಂತಿಯನು ಹೊಂದಿದವನು
ಪರ ನಾರಿಯರನ್ನ ಪೇಕ್ಷೆಪಡುವವನು
ಅರ್ಥಿಯ ವಿತ್ತವನಪಹರಿಸುವವನು
ದಾನ ವೀಯಲು ಬೇಡವೆನ್ನುವವನು
ಸಭೆಯೊಳು ನಿಂತು ಚಾಡಿಯನು ಹೇಳುವವನು
ಪಕ್ಷಪಾತದಿ ಸಾಕ್ಷ್ಯವ ನುಡಿವವನು
ಹರಿದಾಸರನು ನೋಡಿ ಹಾಸ್ಯ ಮಾಡುವವನು
ಧರ್ಮ ದಾಸರ ಕಂಡು ಬೈಯುವವನು

ತೇಟಗೀತೆ : ಪ್ರಜೆಗಳ ಪ್ರಾಣಿಗಳ ಪೀಡಿಸುವ ನರನು
ಕಾಲಕಿಂಕರ ಗದೆಯಿಂದ ಬಾಧೆಗೊಳುವ ॥ಭೂ॥

ತಾತ್ಪರ್ಯ : ಪರರ ಸ್ವತ್ತಿಗೆ ಆಸೆ ಪಡುವವನು, ಪರ ನಾರಿಯಲ್ಲಿ ಮೋಹ ತಾಳುವವನು, ಅರ್ಥಿಯ ಹಣ ಅಪಹರಿಸುವವನು, ದಾನ ಕೊಡುವುದನ್ನು ತಡೆಯುವವನು, ಸಭೆಯಲ್ಲಿ ಚಾಡಿ ಹೇಳುವವನು, ಪಕ್ಷ ವಹಿಸಿ ಸಾಕ್ಷ್ಯ ನುಡಿಯುವವನು, ಹರಿದಾಸರ ನೋಡಿ ಹಾಸ್ಯ ಮಾಡುವವನು, ಧರ್ಮ ದಾಸರನ್ನು ನಿಂದಿಸುವವನು, ಪ್ರಜೆಗಳನ್ನು, ಪ್ರಾಣಿಗಳನ್ನು ಹಿಂಸಿಸುವವನು, ಯಮಕಿಂಕರರ ಕೈಯಿಂದ ಗದಾ ಪ್ರಹಾರಕ್ಕೆ ಗುರಿಯಾಗಬೇಕಾಗುತ್ತದೆ

55. ಸೀಸ : ನರಸಿಂಹ ನಾತಂಡ್ರಿ ನನ್ನೇಲು ನನ್ನೇಲು
ಕಾಮಿತಾರ್ಥಮುಲಿಚ್ಚಿ ಕಾವು ಕಾವು
ದೈತ್ಯ ಸಂಹಾರ ಚಾಲದಯಯುಂಚು ದಯಯುಂಚು
ದೀನ ಪೋಷಕ ನೀವೆ ದಿಕ್ಕು ದಿಕ್ಕು
ರತ್ನ ಭೂಷಿತ ವಕ್ಷ ರಕ್ಷಿಂಚು ರಕ್ಷಿಂಚು
ಭುವನ ರಕ್ಷಕ ನನ್ನು ಬ್ರೋವು ಬ್ರೋವು
ಮಾರ ಕೋಟಿ ಸುರೂಪ ಮನ್ನಿಂಚು ಮನ್ನಿಂಚು
ಪದ್ಮ ಲೋಚನ ಚೇಯಿ ಪಟ್ಟು ಪಟ್ಟು

ತೇಟಗೀತೆ : ಸುರವಿನುತ ನೇನು ನೀ ಚಾಟು ಚೊಚ್ಚಿ ನಾನು
ನಾ ಮೊರಾಲಿಂಚಿ ಕಡತೇರ್ಚು ನಾಗಶಯನ ॥ಭೂ॥

ಅನುವಾದ : ನರಸಿಂಹ ತಂದೆ ಯೆನ್ನನು ಸಲಹೊ ಸಲಹೊ
ಕಾಮಿತಾರ್ಥವನಿತ್ತು ಪೊರೆಯೊ ಪೊರೆಯೊ
ದಾನವಾಂತಕ ಮಿಗೆ ದಯೆತೋರು ದಯೆತೋರು
ದೀನ ಪೋಷಕ ನೀನೆ ದಿಕ್ಕು ದಿಕ್ಕು
ರತ್ನಭೂಷಿತ ವಕ್ಷ ರಕ್ಷಿಸೈ ರಕ್ಷಿಸೈ
ಧರಣಿ ಪಾಲಕ ಎನ್ನ ಪೊರೆಯೊ ಪೊರೆಯೊ
ಮಾರುಕೋಟಿ ಸುರೂಪ ಮನ್ನಿಸೈ ಮನ್ನಿಸೈ
ಪದ್ಮಲೋಚನ ಕರ ಪಿಡಿಯೊ ಪಿಡಿಯೊ

ತೇಟಗೀತೆ : ಸುರವಿನುತ ನಿನ್ನಲ್ಲಿಯೆ ಮೊರೆ ಹೊಕ್ಕೆ ನಾನು
ಎನ್ನ ಮೊರೆ ಕೇಳಿ ದಡಸೊಯ್ಯು ನಾಗಶಯನ ॥ಭೂ॥

ತಾತ್ಪರ್ಯ : ಶ್ರೀ ನರಸಿಂಹ, ದಾನವಾಂತಕನೆ, ದೀನ ಪೋಷಕ ದಿವ್ಯಾಭರಣ ಭೂಷಿತ, ಧರಣಿ ಪಾಲಕ, ಮಾರಕೋಟಿ ಸ್ವರೂಪ, ಪದ್ಮಲೋಚನ, ಸುರವಿನುತ, ಕಾಮಿತಾರ್ಥವನಿತ್ತು ಎನ್ನನ್ನು ಸಲಹಿ ಕಾಪಾಡು. ನಿನ್ನನ್ನೇ ನಂಬಿ ಆಶ್ರಯಿಸಿರುವೆನು. ನನ್ನ ಮೊರೆಯನಾಲಿಸಿ ನನ್ನನ್ನು ದಡ ಸೇರಿಸು.

56. ಸೀಸ : ನೀ ಭಕ್ತುಲನು ಕಂಡ್ಲ ನಿಂಡ ಜೂಚಿಯು ರೆಂಡು
ಚೇತುಲ ದಂಡಂಬು ಸೇಯು ವಾಡು
ನೇರ್ಪುತೋ ನೆವರೈನ ನೀ ಕಥಲ್ ಚಪ್ಪಂಗ
ವಿನಯಮು ಮುಂದುಚು ಚಾಲ ವಿನೆಡುವಾಡು
ತನಗೃಹಂಬುನಕು ನೀ ದಾಸು ಲೊಚ್ಚಿನ ಜೂಚಿ
ಪೀಟಪೈ ಗೂರ್ಚುಂಡ ಬೆಟ್ಟುವಾಡು
ನೀ ಸೇವಕುಲ ಜಾತಿ ನೀತು ಲೆನ್ನಕ ಜಾಲ
ದಾಸೋಹಮನಿ ನಿನ್ನು ದಲಚು ವಾಡು

ತೇಟಗೀತೆ : ಪರಮ ಭಕ್ತುಂಡು ಧನ್ಯುಂಡು ಭಾನು ತೇಜ
ವಾನಿ ಗನು ಕೊನ್ನ ಪುಣ್ಯಂಬು ವಸುಧಲೋನ

ಅನುವಾದ : ನಿನ್ನ ಭಕ್ತರ ಕಂಗಳಲಿ ವೀಕ್ಷಿಸಿ ಎರಡು
ಕರಗಳ ಜೋಡಿಸಿ ಮುಗಿಯುವವನು
ಅರಿತು ಯಾರಾದರು ನಿನ್ನ ಕಥೆಯ ನುಡಿಯೆ
ವಿನಯವ ತಳೆಯುತ ಕೇಳುವವನು
ತನ ಗೃಹಕೆ ನಿನ್ನ ದಾಸರ ಬರಮಾಡಿ
ಮಣೆಯ ಮೇಲೆ ಅವರ ಕೂರಿಸುವವ
ನಿನ ಸೇವಕರ ಜಾತಿ ನೀತಿಯ ಗಣಿಸದೆ
ದಾಸಕಿಂಕರನೆಂದು ಸ್ಮರಿಸುವವನು

ತೇಟಗೀತೆ : ಪರಮ ಭಕ್ತನು ಧನ್ಯನು ಭಾನುತೇಜ
ಅವನ ಕಾಣಲು ಪುಣ್ಯವೈ ವಸುಧೆಯೊಳಗೆ ॥ಭೂ॥

ತಾತ್ಪರ್ಯ : ನಿನ್ನ ಭಕ್ತರನ್ನು ಕಂಡು ಭಕ್ತಿಯಿಂದ ನಮಸ್ಕರಿಸುವವನು, ಅರಿತವರು ನಿನ್ನ ಕಥೆಯನ್ನು ಹೇಳುವಾಗ ವಿನಯದಿಂದ ಕೇಳುವವನು, ಹರಿದಾಸರನ್ನು ಮನೆಗೆ ಬರಮಾಡಿಕೊಂಡು ಅವರನ್ನು ಸತ್ಕರಿಸುವವನು, ಹರಿಯ ಸೇವಕರ ಜಾತಿ ಎಣಿಸದೆ ಸ್ಮರಿಸುವವನು, ಹರಿಯ ಪರಮ ಭಕ್ತ. ಅವನ ದರ್ಶನವು ಒಂದು ಭಾಗ್ಯ.

57. ಸೀಸ : ಪಂಜರಂಬುನ ಕಾಕಿ ಬಟ್ಟಿಯುಂಚಿನ ಲೆಸ್ಸ
ಪಲುಕುನೇ ಯಿಂತ್ರೈನ ಚಿಲುಕ ವಲೆನು
ಗಾರ್ಧಬಂಬುನದೆಚ್ಚಿ ಕಳ್ಳೆ ಮಿಂಪುಗವೇಯ
ದಿರುಗನೇ ಗುರ್ರಂಬು ತೀರುಗಾನು
ಎನುಬೋತುಲನು ಮಾವಟೀಡು ಶಿಕ್ಷಿಂಚಿನ
ನಡಚುನೇ ಮದವಾರಣಂಬು ವಲೆನು
ಪೆದ್ದಪಿಟ್ಟಕು ಮೇತ ಬೆಟ್ಟಿಪೆಂಚಿನ ಗ್ರೊವ್ವಿ
ಸಾಗುನೇ ವೇಟಾಡುಡೇಗ ವಲೆನು

ತೇಟಗೀತೆ : ಕುಜನುಲನುದೆಚ್ಚಿ ನೀ ಸೇವ ಕೊರಕು ಬೆಟ್ಟ
ವಾಂಚ ಜೇತುರೇ ನೀ ಭಕ್ತ ವರುಲ ವಲೆನು ||ಭೂ||

ಅನುವಾದ : ಪಂಜರದಲಿ ವಾಯಸ ವಿಡಲು ಚಂದದಿ
ನುಡಿವುದೇ ಸ್ವಲ್ಪವುಂ ಗಿಳಿಯ ತೆರನ
ಕತ್ತೆಯ ಕರೆತಂದು ಕಡಿವಾಣ ತೊಡಿಸಲು
ತಿರುಗುವುದೇಂ ಅಶ್ವ ಗತಿಯೊಳದುವುಂ
ಎಮ್ಮೆ ಕೋಣವನು ಮಾವಟಿಗನು ಶಿಕ್ಷಿಸೆ
ನಡೆವುದೇ ಮದವಾರಣ ನಡೆವಂತೆ
ದೊಡ್ಡ ಗುಬ್ಬಿಯ ತಂದು ಚೆನ್ನಾಗಿ ಸಾಕಲು
ಸಾಗುವುದೇಂ ಬೇಟೆ ಡೇಗೆ ತರನ

ತೇಟಗೀತೆ : ಕುಜನರನು ತಂದು ನಿನ್ನಯ ಸೇವೆ ಗಿರಿಸೆ
ವಾಂಛೆಯಿಂದ ಪೂಜಿಸುವರೇನು ಭಕ್ತರಂತೆ ||ಭೂ||

ತಾತ್ಪರ್ಯ : ಕಾಗೆಯನ್ನು ಪಂಜರದಲ್ಲಿಟ್ಟು ಸಾಕಿದರೆ ಗಿಳಿಯಂತೆ ಮಾತನಾಡುವುದೇ ? ಕತ್ತೆಗೆ ಕಡಿವಾಣ ತೊಡಿಸಿದರೆ ಕುದುರೆಯಂತೆ ಓಡುವುದೇ ? ಕೋಣವನ್ನು ಮಾವಟಿಗನು ಪಳಗಿಸಿದರೆ, ಆನೆಯಂತೆ ನಡೆಯುತ್ತದೆಯೋ ? ಗುಬ್ಬಿಯನ್ನು ತಂದು ಚೆನ್ನಾಗಿ ಸಾಕಿದರೆ ಡೇಗೆಯಂತೆ ಆಕಾಶದಲ್ಲಿ ಹಾರುತ್ತದೆಯೇ ? ಅಂತೆಯೇ ಕುಜನರನ್ನು ಪರಮಾತ್ಮನ ಸೇವೆಗೆ ನಿಯಮಿಸಿದರೆ ಅವರು ಪ್ರೀತಿಯಿಂದ ಭಕ್ತರಂತೆ ಸೇವೆ ಮಾಡಲಾರರು.

58. ಸೀಸ : ನಿಗಮಾದಿ ಶಾಸ್ತ್ರಮುಲ್ ನೇರ್ಚಿನ ದ್ವಿಜುಡೈನ
ಯಜ್ಞ ಕರ್ತಗು ಸೋಮ ಯಾಜಿ ಯೈನ
ಧರಣಿ ಲೋಪಲ ಪ್ರಭಾತ ಸ್ನಾನಪರು ಡೈನ
ನಿತ್ಯ ಸತ್ಕರ್ಮಾದಿ ನಿರತು ಡೈನ
ನುಪವಾಸ ನಿಯಮಂಬು ನೊಂದು ಸಜ್ಜನು ಡೈನ
ಗಾವಿ ವಸ್ತ್ರಮುಗಟ್ಟು ಘನುಡುನೈನ
ದಂಡಿ ಷೋಡಶ ಮಹಾ ದಾನಪರುಂಡೈನ
ಸಕಲ ಯಾತ್ರಲು ಸಲ್ಪು ಸರಸುಡೈನ

ತೇಟಗೀತೆ : ಗರ್ವಮುನ ಗಷ್ಟಪಡಿ ನಿನ್ನು ಗಾನ ಕುನ್ನ
ಮೋಕ್ಷ ಸಾಮ್ರಾಜ್ಯ ಮೊಂದಡು ಮೋಹನಾಂಗ ॥ಭೂ॥

ಅನುವಾದ : ನಿಗಮಾದಿ ಶಾಸ್ತ್ರವಂ ಕಲಿತ ದ್ವಿಜನಿರಲು
ಯಜ್ಞ ಕರ್ತನು ಸೋಮ ಯಾಜಿ ಇರಲು
ಧರಣಿಯೊಳು ಪ್ರಭಾತ ಸ್ನಾನ ಪರನಿರಲ್
ನಿತ್ಯ ಸತ್ಕರ್ಮದೊಳೆ ನಿರತ ನಿರಲು
ಉಪವಾಸ ನಿಯಮ ಪಾಲಿಪ ಸಜ್ಜನನಿರಲು
ಕಾವಿವಸ್ತ್ರ ಉಡುವ ಘನನೆ ಇರಲು
ಅಮಿತ ಷೋಡಶ ಮಹಾ ದಾನ ಪರನಿರಲು
ಸಕಲ ಯಾತ್ರೆಯ ಮಾಳ್ಪ ಸರಸನಿರಲು

ತೇಟಗೀತೆ : ಗರ್ವದಿಂ ಕಷ್ಟಪಡುತ ನಿನ್ನರಿಯದಿರಲು
ಮೋಕ್ಷ ಸಾಂಮ್ರಾಜ್ಯವ ಪಡೆಯ ಮೋಹನಾಂಗ ॥ಭೂ॥

ತಾತ್ಪರ್ಯ : ವೇದಶಾಸ್ತ್ರ ಪಾರಂಗತನಾದ ಬ್ರಾಹ್ಮಣನಿರಲಿ, ಯಜ್ಞ ಕರ್ತ ಸೋಮಯಾಜಿಯೆ ಇರಲಿ, ದಾನ, ಪ್ರಭಾತ ಸ್ನಾನ, ಸತ್ಕರ್ಮ, ಉಪವಾಸ, ತೀರ್ಥಯಾತ್ರೆಗಳನ್ನು ಆಚರಿಸುವವರಿರಲಿ, ಕಾವಿ ವಸ್ತ್ರವನುಡುವ ಘನನಿರಲಿ, ತಮ್ಮ ಕಾರ್ಯಗಳಿಂದ ಗರ್ವ ತಳೆದು ಕಷ್ಟಪಡುತ್ತ, ಪರಮಾತ್ಮನನ್ನು ಕಾಣಲಾರರು.

59. ಸೀಸ : ಪಕ್ಷಿವಾಹನ ನೇನು ಬ್ರತಿಕಿನನ್ನಿ ದಿನಾಲು
ಕೊಂಟಿಗಾಂಡ್ಲನುಗೂಡಿ ಕುಮತಿ ನೈತಿ
ನನ್ನ ವಸ್ತ್ರಮುಲಿಚ್ಚಿ ಯಾದರಿಂಚುಮುನನ್ನು
ಗನ್ನ ತಂಡ್ರಿವಿ ನೀವೆ ಕಮಲನಾಭ
ಮರಣ ಮಯ್ಯೆಡುನಾಡು ಮಮತ ತೋ ನೀವದ್ದ
ಬಂಟ್ಲ ದೋಲುಮು ಮುಂದು ಬ್ರಹ್ಮ ಜನಕ
ಇನಜ ಭಟಾವಳಿ ಯೀಡ್ಚುಕ ಪೋಕುಂಡ
ಕರುಣತೋ ನಾವದ್ಧ ಕಾಪಲುಂಚು

ತೇಟಗೀತೆ : ಕೊಸಕು ನೀ ಸನ್ನಿಧಿಕಿ ಬಿಲ್ಚುಕೊನಿಯು ನನ್ನು
ಸೇವಕುನಿ ಜೇಸು ಕೊನುಮಯ್ಯ ಶೇಷಶಯನ ||ಭೂ||

ಅನುವಾದ : ಪಕ್ಷಿವಾಹನ ನಾನು ಬದುಕಿದಾ ಸಮಯ
ಚಾಡಿಕೋರರ ಕೂಡಿ ಕುಮತಿಯಾದೆ
ಅನ್ನ ವಸ್ತ್ರವ ನೀಡಿ ಸಲಹಬೇಕೈ ಎನ್ನ
ಪೆತ್ತ ತಂದೆಯೊ ನೀನು ಪದ್ಮನಾಭ
ಅಂತ್ಯಕಾಲದಿ ನೇಹದಿಂ ನಿನ್ನ ಸನಿಹದ
ಭಂಟರನುಕಳುಹು ಬ್ರಹ್ಮ ಜನಕ
ಇನಜ ಭಟಾವಳಿ ಎಳೆದು ಕೊಂಡೊಯ್ಯದೆ
ಕರುಣೆಯಿಂ ನನ್ನಲ್ಲಿ ಕಾವಲಿರಿಸು

ತೇಟಗೀತೆ : ಕೊನೆಗೆ ನಿನ್ನ ಸನ್ನಿಧಿಯಲಿ ಕರೆದು ಎನ್ನ
ಸೇವಕನ ಮಾಡಿಕೊಳ್ಳಯ್ಯ ಶೇಷಶಯನ ||ಭೂ||

ತಾತ್ಪರ್ಯ : ಜೀವಿತ ಕಾಲವೆಲ್ಲಾ ಹೀನರನ್ನು ಸೇರಿ ಬುದ್ಧಿ ಇಲ್ಲದವನಾದೆ. ಈಗ ಅನ್ನ ವಸ್ತ್ರಗಳನ್ನು ನೀನೆ ಎನಗೆ ನೀಡಬೇಕು. ಪದ್ಮನಾಭ ನೀನು ಹೆತ್ತ ತಂದೆ, ಅಂತ್ಯಕಾಲದಲ್ಲಿ ನಿನ್ನ ಭಟರನ್ನು ಎನ್ನಲ್ಲಿ ಕಾವಲಿರಿಸಿ, ಯಮಕಿಂಕರರು ಎಳೆದೊಯ್ಯದಂತೆ ಕಾಪಾಡು. ಕೊನೆಗೆ ನಿನ್ನ ಸನ್ನಿಧಿಗೆ ಕರೆದುಕೊಂಡು, ಎನ್ನನ್ನು ನಿನ್ನ ಸೇವಕನಾಗಿ ನಿಯಮಿಸು.

60. **ಸೀಸ** : ನೀಕು ದಾಸುಡ ನಂಟಿ ನಿನ್ನು ನಮ್ಮಿಕಯುಂಟಿ
ಗಾನ ನಾಪೈ ನೇಡು ಕರುಣ ಜೂಡು
ದೋಸಿ ಲೊಗ್ಗಿತಿ ನೀಕು ದ್ರೋಹಮೆನ್ನಗಬೋಕು
ಪದ್ಮಲೋಚನ ನೇನು ಪರುಡಗಾನು
ಭಕ್ತಿ ನೀಪೈಯುಂಚಿ ಭಜನ ಚೇಸೆದ ಗಾನಿ
ಪರುಲ ವೇಡನು ಸುಮ್ಮಿ ವರಮು ಲಿಮ್ಮು
ದಂಡಿಗಾ ದಾತವು ತಡವು ಸೇಯಕ ಕಾವು
ಘೋರ ಪಾತಕ ರಾಶಿ ಗೊಟಿಟಿ ವೇಸಿ

**ತೇಟಗೀತೆ** : ಶೀಘ್ರಮುಗ ಗೋರ್ಕಲೀಡೇರ್ಚು ಚಿಂತ ದೀರ್ಚು
ನಿರತಮುಗ ನನು ಪೋಷಿಂಚು ನೆನರುನುಂಚು ॥ಭೂ॥

**ಅನುವಾದ** : ನಿನಗೆ ದಾಸನೆನಿಸಿ ನಿನ್ನ ನಂಬಿರುವೆನ್ನೈ
ಎನಗೆ ಈ ದಿನದಂದು ಕರುಣೆ ತೋರು
ಶರಣಾದೆ ನಿನಗಿಂದು ದ್ರೋಹವೆಣಿಸದಿರೈ
ಪದ್ಮಲೋಚನ ನಾನು ಬೇರೆಯಲ್ಲ
ಭಕ್ತಿ ನಿನ್ನಲಿ ನಿಲಿಸಿ ಭಜನೆ ಮಾಡುವೆ ಏನಃ
ಪರರ ಬೇಡೆನು ನಾನು ವರವ ಕೊಡು ನೀ
ಘನವಾದ ದಾತನೀ ತಡೆ ಮಾಡದೆ ಸಲಹೈ
ಘೋರ ಪಾತಕ ರಾಶಿ ಕೊಚ್ಚಿ ಹಾಕಿ

**ತೇಟಗೀತೆ** : ಶೀಘ್ರ ಬೇಡಿಕೆ ಪೂರೈಸು ಚಿಂತೆ ನೀಗಿ
ನಿರತದೊಳು ಎನ್ನ ಪೋಷಿಸೈ ಕರುಣೆಯಿಂದ ॥ಭೂ॥

**ತಾತ್ಪರ್ಯ** : ಪರಮಾತ್ಮ ನಿನ್ನ ದಾಸನಾಗಿರುವೆ, ನಿನ್ನ ನಂಬಿರುವೆ, ನಿನಗೆ ಶರಣಾಗಿರುವೆ, ಎನಗೆ ದ್ರೋಹ ಮಾಡದೆ ಕರುಣೆಯನ್ನು ತೋರು. ಪರರನ್ನು ಬೇಡಲಾರೆ, ಭಕ್ತಿಯಿಂದ ನಿನ್ನನ್ನು ಪ್ರಾರ್ಥಿಸುವೆನು. ಘನವಾದ ದಾತ ನೀನು, ಎನ್ನ ಪಾತಕಗಳ ರಾಶಿಯನ್ನು ತೊಡೆದು ಹಾಕಿ, ತಡೆ ಮಾಡದೆ ಚಿಂತೆಯನ್ನು ಪರಿಹರಿಸಿ ಕರುಣೆಯಿಂದ ಕಾಪಾಡು.

61. ಸೀಸ : ವಿದ್ಯನೇರ್ಚಿತಿ ನಂಚು ವಿರ್ರವೀಗಗ ಲೇದು
ಭಾಗ್ಯವಂತುಡನಂಚು ಬಲುಕ ಲೇದು
ದ್ರವ್ಯವಂತುಡನಂಚು ದರುಚುನಿಕ್ಕಗ ಲೇದು
ನಿಯುತಿ ದಾನಮುಲ್ಲೈನ ಸೇಯ ಲೇದು
ಪುತ್ರವಂತುಡನಂಚು ಪೊಗಡು ಚುಂಡಗ ಲೇದು
ಭೃತ್ಯವಂತುಡ ನಂಚು ಬೆಗಡಲೇದು
ಶೌರ್ಯವಂತುಡನಂಚು ಸಂತಸಿಂಪಗ ಲೇದು
ಕಾರ್ಯ ವಂತುಡನಂಚು ಗಡಪ ಲೇದು

ತೇಟಗೀತೆ : ನಲುಗುರಿಕಿ ಮೆಪ್ಪುಗಾನ್ನೈನ ನಡವಲೇದು
ನಳಿನದಳ ನೇತ್ರ ನಿನ್ನುನೇ ನಮ್ಮಿ ನಾನು ॥ಭೂ॥

ಅನುವಾದ : ವಿದ್ಯೆ ಕಲಿತೆನೆಂದು ಅತಿ ಗರ್ವಪಡಲಿಲ್ಲ
ಭಾಗ್ಯವಂತನು ಎಂದು ನುಡಿಯಲಿಲ್ಲ
ದ್ರವ್ಯವಂತನು ಎಂದು ಸೊಕ್ಕಿ ತಿರುಗಲಿಲ್ಲ
ನಿಯುತಿ ದಾನಗಳಾವು ಮಾಡಲಿಲ್ಲ
ಪುತ್ರವಂತನು ಎಂದು ಹೇಳಿಕೊಂಡವನಲ್ಲ
ಭೃತ್ಯವಂತನು ಎಂದು ಹೆದರಲಿಲ್ಲ
ಶೌರ್ಯವಂತನು ಎಂದು ಸಂತಸಗೊಳಲಿಲ್ಲ
ಕಾರ್ಯವಂತನು ಎಂದು ನಡೆಯಲಿಲ್ಲ.

ತೇಟಗೀತೆ : ನಾಕು ಜನರು ಒಪ್ಪುವ ಹಾಗೆ ನಡೆಯಲಿಲ್ಲ
ನಳಿನದಳನೇತ್ರ ನಿನ್ನನೇ ನಂಬಿ ಇಹೆನು ॥ಭೂ॥

ತಾತ್ಪರ್ಯ : ವಿದ್ಯೆ ಕಲಿತವ ಭಾಗ್ಯವಂತ, ದ್ರವ್ಯ ಉಳ್ಳವ ಪುತ್ರವಂತ ಎಂದು ಗರ್ವದಿಂದ ಹೇಳಿಕೊಳ್ಳಲಿಲ್ಲ. ಶೌರ್ಯದಿಂದ ಸಂತೋಷ ಪಡಲಿಲ್ಲ. ಕಾರ್ಯಸಾಧಿಸೆ ಹೋಗಲಿಲ್ಲ. ನಾಲ್ಕುಜನ ಒಪ್ಪುವಂತೆಯೂ ನಡೆಯಲಿಲ್ಲ. ದಾನವನ್ನೂ ಮಾಡಲಿಲ್ಲ. ಆದರೆ ನಿನ್ನನ್ನೇ ನಂಬಿರುವೆ ನಾರಸಿಂಹ.

62. ಸೀಸ : ಅತಿ ಲೋಬುಲನು ಬಿಕ್ಷಮಡುಗ ಬೋವುಟ ರೋತ
ತನ ದ್ರವ್ಯಮೊಕರಿಂಟ ದಾಚರೋತ
ಗುಣಹೀನಡಗುವಾನಿ ಕೊಲುವು ಕೊಲ್ಚುಟರೋತ
ಯೊರುಲ ಪಂಚಲಕ್ರಿಂದ ನುಂಡರೋತ
ಭಾಗ್ಯವಂತಲು ತೋಡಬಂತ ಮಾಡುಟರೋತ
ಗುರಿಲೇನಿ ಬಂಧುಲ ಗೂಡರೋತ
ನಾದಾಯಮುನು ಲೇಕ ನಪ್ಪುದೀಯುಟರೋತ
ಚಾರಚೋರುಲ ಗೂಡಿ ಚನುಟರೋತ.

ತೇಟಗೀತೆ : ಆದಿಲಕ್ಷ್ಮೀಶ ನೀ ಭಂಟನೈತಿನಯ್ಯ ॥ಭೂ॥
ಯಿಂಕನೆಡಬಾಪು ಜನ್ಮಂಬದೆನ್ನ ರೋತ

ಅನುವಾದ : ಅತಿಲೋಭಿ ಜನರಲಿ ಬಿಕ್ಷೆಬೇಡಲು ರೋತೆ
ತನ್ನ ದ್ರವ್ಯ ಪರರಲ್ಲಿಡಲು ರೋತೆ
ಗುಣಹೀನನರರಲ್ಲಿ ಸೇವೆಗೈವುದು ರೋತೆ
ಪರರ ಮನೆಗಳಲ್ಲಿ ಇರಲು ರೋತೆ
ಭಾಗ್ಯವಂತರ ಜತೆ ಪಂಥವಾಡಲು ರೋತೆ
ತಿಳಿಯದಾ ನೆಂಟರ ಸೇರೆ ರೋತೆ
ಆದಾಯವಿರದೆಲೆ ಸಾಲ ತರುವುದು ರೋತೆ :
ಚಾರ ಚೋರರ ಜತೆ ಚರಿಸೆ ರೋತೆ

ತೇಟಗೀತೆ : ಆದಿಲಕ್ಷ್ಮೀಶ ನಿನ ಭಂಟನಾದೆನಯ್ಯ
ಇನ್ನುಬಿಡೆ ನಿನ್ನ ಮರುಜನ್ಮ ನೆನಹುರೋತೆ ॥ಭೂ॥

ತಾತ್ಪರ್ಯ : ಅತಿ ಲೋಭಿಗಳಲ್ಲಿ ಬಿಕ್ಷೆ ಬೇಡುವುದು, ತನ್ನ ದ್ರವ್ಯವನ್ನು ಮತ್ತೊಬ್ಬರಲ್ಲಿ ಇಡುವುದು, ಗುಣಹೀನರ ಸೇವೆ ಮಾಡುವುದು, ಪರರ ಜಗಲಿಯ ಮೇಲೆ ವಾಸ, ಆದಾಯವಿಲ್ಲದೆ, ಸಾಲ ಮಾಡುವುದು, ಚಾರ ಚೋರರ ಒಡನಾಟ, ಬೆರೆಯದ ನೆಂಟರಲ್ಲಿ ಸಹವಾಸ, ಇವೆಲ್ಲವೂ ಅಸಹ್ಯವಾದವುಗಳು. ಮರುಜನ್ಮ ನೆನೆಸಿಕೊಂಡರೆ ಸಾಕು ಬಹಳ ಅಸಹ್ಯ ಆದಿ ಲಕ್ಷ್ಮೀಶನೆ ನಿನ್ನನ್ನು ಬಿಡಲಾರೆ, ನಿನ್ನ ಭಂಟನಾಗಿರುವೆ.

63. ಸೀಸ : ವೆರ್ರಿವಾನಿಕಿನೇಲ ವೇದಾಕ್ಷರಂಬುಲು
ಮೋಟುವಾನಿಕಿ ಮಂಚಿ ಮಾಟಲೇಲ
ಪಸುಲಗಾಪರಿಕೇಲ ಪರತತ್ತ್ವ ಬೋಧಲು
ವಿಟಕಾನಿಕೇಟಿಕೋ ವಿಷ್ಣುಕಥಲು
ಒದರುಶುಂಠಲುಕೇಲ ವ್ರಾತಪುಸ್ತಕಮುಲು
ತಿರುಗುಂದಿಮ್ಮರಿ ಕೇಲ ದೇವಪೂಜ
ದ್ರವ್ಯಲೋಭುಲಕೇಲ ದಾತೃತ್ವ ಗುಣಮುಲು
ದೊಂಗಭಂಟುಕು ಮಂಚಿ ಸಂಗತೇಲ

ತೇಟಗೀತೆ : ಕ್ರೂರಜನುಲುಕು ನೀಮೀದ ಕೋರಿಕೇಲ
ದ್ರೋಹಿ ಪಾಪಾತ್ಮುಲಕು ದಯಾದುಃಖ ಮೇಲ ॥ಭೂ॥

ಅನುವಾದ : ಹುಚ್ಚನಿಗೇತಕೆ ವೇದಾಕ್ಷರಗಳವು
ತಿಳಿಗೇಡಿಗೇತಕ್ಕೆ ಒಳ್ಳೆಮಾತು
ಪಶುಕಾಯ್ವವಗೇಕೆ ಪರತತ್ತ್ವ ಬೋಧೆಯು
ವಿಟಗಾರಗೇತಕೋ ವಿಷ್ಣುಕಥೆಯು
ಒದರುಶುಂಠರಿಗೇಕೆ ಬರೆಯುವಾ ಪುಸ್ತಕ
ಅಲೆಮಾರಿಯವಗೇಕೆ ದೈವಪೂಜೆ
ದ್ರವ್ಯಲೋಭಿಗದೇಕೆ ದಾತೃತ್ವ ಗುಣಗಳು
ಕಳ್ಳಭಂಟನಿಗೇಕೆ ಒಳ್ಳೆ ವಿಷಯು

ತೇಟಗೀತೆ : ಕ್ರೂರ ಜನರಿಗೆ ನಿನ್ನಲ್ಲಿ ಆಶೆಯೇಕೆ ॥ಭೂ॥
ದ್ರೋಹಿ ಪಾಪಾತ್ಮರಿಗೆ ದಯಾದುಃಖವೇಕೆ

ತಾತ್ಪರ್ಯ : ಹುಚ್ಚನಿಗೆ ವೇದವೂ, ತಿಳಿಗೇಡಿಗೆ ಒಳ್ಳೆಯ ಮಾತು, ಹಸು ಕಾಯುವವನಿಗೆ ಪರತತ್ತ್ವವೂ, ವಿಟನಿಗೆ ವಿಷ್ಣು ಕಥೆಯೂ, ಅಲೆಮಾರಿಗೆ ದೈವಪೂಜೆ, ಒದರುಶುಂಠರಿಗೆ ಒಳ್ಳೆ ಮಾತು, ಲೋಭಿಗೆ ದಾನಗುಣ, ದ್ರೋಹಿಗೆ ದಯೆ, ದುಃಖ ಇರುವು ದಿಲ್ಲ. ಅಂತೆಯೇ ಕ್ರೂರರಿಗೆ ಪರಮಾತ್ಮನಲ್ಲಿ ಭಕ್ತಿ ಇರುವುದಿಲ್ಲ.

64. ಸೀಸ : ನಾತಂಡ್ರಿ ನಾದಾತನಾ ಇಷ್ಟದೈವಮಾ
ನನ್ನು ಮನ್ನನಸೇಯು ನಾರಸಿಂಹ
ದಯಯುಂಚು ನಾಮೀದ ದಪ್ಪುಲನ್ನಿ ಕ್ಷಮಿಂಚು
ನಿಗಮಗೋಚರ ನಾಕು ನೀವೆ ದಿಕ್ಕು
ನೇ ದುರಾತ್ಮುಡನಂಚು ನೀಮನಂಬುನ ಗೋಪ
ಗಿಂಪ ಬೋಕುಮಿಸ್ವಾಮಿ ಕೊಂಚಮೈನ
ಮುಕ್ತಿದಾಯಕ ನೀವು ಮ್ರೊಕ್ಕಿನಂದುಕುನನ್ನು
ಕರುಣಿಂಚಿ ರಕ್ಷಿಂಚು ಕಮಲನಾಭ

ತೇಟಗೀತಿ : ದಂಡಿ ದೊರವಂಚು ನೀವೆಂಟ ದಗಿಲಿನಾನು
ನೇಡು ಪ್ರತ್ಯಕ್ಷಮೈ ನನ್ನು ನಿರ್ವಹಿಂಚು ||ಭೂ||

ಅನುವಾದ : ಎನ್ನ ತಂದೆಯೇ ದಾತನೇ ಇಷ್ಟದೈವವೆ
ಎನ್ನ ಮನ್ನಣೆ ಮಾಡು ನಾರಸಿಂಹ
ದಯೆತೋರಿ ಎನ್ನಲ್ಲಿ ತಪ್ಪೆಲ್ಲ ಕ್ಷಮಿಸುನೀ
ನಿಗಮಗೋಚರ ನೀನೆ ಎನಗೆ ದಿಕ್ಕು
ನಾನು ದುರಾತ್ಮನು ಎಂದು ನಿನ್ನ ಮನದಿ ಕೋಪ
ಮಾಡದಿರು ಸ್ವಾಮಿ ಅಲ್ಪ ಸ್ವಲ್ಪ
ಮುಕ್ತಿದಾಯಕ ನಿನ್ನ ಮುಗಿದು ಬೇಡಿದರಿಂದ
ಕರುಣಿಸಿ ರಕ್ಷಿಸೈ ಕಮಲನಾಭ.

ತೇಟಗೀತೆ : ದೊಡ್ಡದೊರೆಯೆನಿಸಿ ನಿನ್ನನಾಶ್ರಯಿಸಿದೆ
ಇಂದು ಪ್ರತ್ಯಕ್ಷನಾಗೆನ್ನ ಸಲಹು ನೀನು ||ಭೂ||

ತಾತ್ಪರ್ಯ : ಕಮಲನಾಭ, ಎನ್ನ ತಂದೆ, ದಾತ, ದೈವ ಎಲ್ಲವೂ ನೀನೆ. ನನ್ನ ತಪ್ಪುಗಳನ್ನು ಕ್ಷಮಿಸು. ನಿನ್ನನ್ನು ಕೈ ಮುಗಿದು ಬೇಡುವೆ. ಮುಕ್ತಿದಾಯಕನೆ, ನಿನ್ನ ಮನದಲ್ಲಿ ಸ್ವಲ್ಪವೂ ಕೋಪ ಮಾಡಿಕೊಳ್ಳದೆ, ಎನ್ನನ್ನು ಕರುಣಿಸಿ ರಕ್ಷಿಸು. ದೊಡ್ಡದೊರೆ ಎಂದು ನಿನ್ನ ನಂಬಿ ಆಶ್ರಯಿಸಿರುವೆನು. ಇಂದು ನೀನು ಎನಗೆ ಪ್ರತ್ಯಕ್ಷವಾಗಿ ಕಾಪಾಡು.

65. ಸೀಸ : ವೇಮಾರು ನೀ ಕಥಲ್ ವಿನುಚುನುಂಡೆಡಿವಾಡು
ಪರುಲಮುಚ್ಚಟಮೀದ ಭ್ರಾಂತಿಪಡಡು
ಅಗಣಿತಂಬುಗನಿನ್ನು ಬೊಗಡನೇರ್ಚಿನವಾಡು
ಚೆಡ್ಡ ಮಾಟಲು ನೋಟ ಚೆಪ್ಪಬೋಡು
ಆಸಕ್ತಿಚೇತ ನಿನ್ನನುಸರಿಂಚೆಡಿ ವಾಡು
ದನಮುದಾಂದುಲವೆಂಟ ದಗುಲಬೋಡು
ಸಂತಸಂಬುನ ನಿನ್ನು ಸ್ಮರಣ ಚೇಸೆಡಿವಾಡು
ಚಿಲಗಿ ನೀಚುಲ ಪೇರು ದಲಪಬೋಡು.

ತೇಟಗೀತೆ : ನಿನ್ನು ನಮ್ಮಿನ ಭಕ್ತುಂಡು ನಿಶ್ಚಯಮುಗ
ಗೋರಿ ಚಿಲ್ಲರ ದೈವಮುಲ ಗೊಲ್ವಬೋಡು ॥ಭೂ॥

ಅನುವಾದ : ಸಾವಿರಾರು ಸಲ ನಿನ್ನ ಕಥೆಯು ಕೇಳುವವನು
ಪರರ ಮೆಚ್ಚುಗೆಯಲಿ ಮಮತೆ ತಳೆಯ
ಅಗಣಿತದೊಳು ನಿನ್ನ ಹೊಗಳಲು ಕಲಿತವ
ಕೆಟ್ಟ ಮಾತುಗಳನು ನುಡಿಯಲಾರ
ಆಸಕ್ತಿಯಿಂದ ನಿನ್ನನ್ನನುಸರಿಸುವವನು
ಧನಮದಾಂದರ ಹಿಂದೆ ತಿರುಗಲಾರ
ಸಂತಸದಲಿ ನಿನ್ನ ಸ್ಮರಣೆ ಮಾಡುವವನು
ಒಪ್ಪಿ ನೀಚರ ಹೆಸರುಚ್ಚರಿಸಲಾರ.

ತೇಟಗೀತೆ : ನಿನ್ನ ನಂಬಿದ ಭಕ್ತಜನ ದಿಟವಾಗಿ
ಕೋರಿಚಿಲ್ಲರೆ ದೈವವ ಸೇವಿಸುವರೆ ॥ಭೂ॥

ತಾತ್ಪರ್ಯ : ಸಾವಿರಾರು ಸಲ ನಿನ್ನ ಕಥೆಯನ್ನು ಆಲಿಸುವವರು, ಇತರರು ಮೆಚ್ಚಬೇಕೆಂದು ಆಶಿಸುವುದಿಲ್ಲ. ವಿಪುಲವಾಗಿ ನಿನ್ನನ್ನು ಹೊಗಳುವವನು ಕೆಟ್ಟ ಮಾತುಗಳನ್ನು ಆಡಲಾರ. ಆಸಕ್ತಿಯಿಂದ ಬಿಡದೆ ನಿನ್ನನ್ನು ಧ್ಯಾನಿಸುವವನು, ಧನವಂತರ ಹಿಂದೆ ತಿರುಗಲಾರ. ಪರಮ ಸಂತೋಷದಿಂದ ನಿನ್ನನ್ನು ಭಜನೆ ಮಾಡುವವನು, ನೀಚರನ್ನು ಕೊಂಡಾಡುವುದಿಲ್ಲ. ನಿನ್ನನ್ನೇ ನಂಬಿ ಸ್ಮರಿಸುವ ಜನ ಚಿಲ್ಲರೆ ದೇವತೆಗಳನ್ನು ಸೇವಿಸುವುದಿಲ್ಲ.

56. ಸೀಸ : ನೇನೆಂತ ವೇಡಿನ ನೀಕೇಲ ದಯರಾದು
ಪಲುಮಾರು ಪಿಲಿಚಿನ ಪಲುಕವೇಮಿ
ಪಲಿಕಿನ ನೀಕುನ್ನ ಪದವೇಮಿ ಪೋವು ನೀ
ಮೋಮ್ಮೈನ ಬೊಡ ಚೂಪವೇಮಿ ನಾಕು
ಶರಣು ಚೊಚ್ಚಿನವಾನಿ ಸವರಿಂಚವಲೆಗಾಕ
ಪರಿಹರಿಂಚುಟ ನೀಕು ಬಿರುದುಗಾದಂ
ನೀದಾಸುಲನು ನೀವು ನಿರ್ವಹಿಂಪಕಯುನ್ನ
ಪರುಲೆವ್ವರಗುದುರು ಪಂಕಜಾಕ್ಷ

ತೇಟಗೀತೆ : ದಾತ ದೈವಂಬು ತಲ್ಲಿಯು ದಂಡ್ರಿ ನೀವೆ
ನಮ್ಮಿಯುನ್ನಾನು ನೀಪಾದ ನಳಿನಮುಲನು ॥ಭೂ॥

ಅನುವಾದ : ನಾನೆಷ್ಟೆ ಬೇಡಲು ನಿನಗೇಕೆ ದಯೆಯಿಲ್ಲ
ಬಹುಬಾರಿ ಕರೆವರು ನುಡಿಯದಿರುವೆ
ನುಡಿದರೆ ನಿನಗಿರುವ ಪದವಿ ಪೋಪುದೇಂ
ಅರವಿಂದವದನವ ತೋರೆಯೇಕೆ
ಶರಣುಹೊಕ್ಕವನ ರಕ್ಷಿಸಬೇಕೆ ಹೊರತಾಗಿ
ಬಿಡುವುದದು ನಿನಗೆ ಬಿರುದೆ ಅಲ್ಲ
ನಿನ್ನ ದಾಸರನು ನೀನು ನಿರ್ವಹಿಸದಿರಲು
ಪರರಾರು ಪೊರೆವರು ಪಂಕಜಾಕ್ಷ

ತೇಟಗೀತೆ : ದಾತ ದೈವವು ತಾಯಿಯು ತಂದೆ ನೀನೆ
ನಂಬಿಕೊಂಡಿರುವೆನು ನಿನ್ನ ಚರಣಕಮಲ ॥ಭೂ॥

ತಾತ್ಪರ್ಯ : ನಾನು ಎಷ್ಟೇ ಬೇಡಿದರೂ ನಿನಗೆ ದಯೆ ಬರಲಿಲ್ಲ. ಮರು ಮಾತನಾಡಲಿಲ್ಲ. ಮಾತನಾಡಿದರೆ ನಿನಗಿರುವ ಪದವಿ ಹೋಗುತ್ತದೆಯೋ ? ನಿನ್ನ ಮುಖವನ್ನಾದರೂ ತೋರಬಾರದೆ ? ಶರಣು ಬಂದವರನ್ನು ಸಲಹಬೇಕೆ ಹೊರತು ತೊಂದರೆಗೊಳಿಸುವುದು, ನಿನಗಿರುವ ಬಿರುದಿಗೆ ಅಪಚಾರ. ನಿನ್ನ ದಾಸರನ್ನು ನೀನು ಸಲಹದಿದ್ದರೆ ಬೇರೆ ಯಾರು ಗತಿ. ದಾತ, ದೈವ, ತಾಯಿ, ತಂದೆ ಎಲ್ಲವೂ ನೀನೆ ಎಂಬುದಾಗಿ ನಿನ್ನ ಚರಣ ಕಮಲವನ್ನು ನಂಬಿರುವೆನು.

67. ಸೀಸ : ವೇದಮುಲ್ ಚೆದುವೆಡು ವಿಪ್ರವರ್ಯುಂಡೈನ
ರಣಮು ಸಾಧಿಂಚೆಡಿ ರಾಜೆಯ್ಯೈನ
ವರ್ತಕಂಬಾಡೆಡು ವೈಶ್ಯಮುಖ್ಯುಂಡೈನ
ವಸುಧ ದುನ್ನೆಡು ಶೂದ್ರವರ್ಯುಡೈನ
ಮೆಚ್ಚು ಖಡ್ಗಮು ಬಟ್ಟಿ ಮೆರಯು ಮ್ಲೇಚ್ಚುಂಡೈನ
ಪ್ರಜಲ ಕಕ್ಕರಪಡು ರಜಕುಡೈನ
ಚರ್ಮ ಮಮ್ಮೆಡಿ ಹೀನ ಚಂಡಾಲ ನರುಡೈನ
ಏ ಮಹಿತಲಮಂದು ನೆವ್ವಡೈನ

ತೇಟಗೀತೆ : ನಿನ್ನು ಗೊನಿಯಾಡು ಚುಂಡೆನಾ ನಿಶ್ಚಯಮುಗ
ವಾಡು ಮೋಕ್ಷಾಧಿಕಾರಿ ಈ ವಸುಧ ಲೋನ ॥ಭೂ॥

ಅನುವಾದ : ವೇದಗಳ ಪಠಿಸೊ ವಿಪ್ರವರ್ಯನಿರಲಿ
ರಣವ ಸಾಧಿಸುವಂತ ರಾಜನಿರಲಿ
ವರ್ತಕ ಮಾಡುವ ವೈಶ್ಯ ಮುಖ್ಯನಿರಲಿ
ಇಳೆಯ ಉಳುವ ಶೂದ್ರ ವರನೆ ಇರಲಿ
ಹೊಳೆವ ಖಡ್ಗವಪಿಡಿದು ಮೆರೆವ ಮ್ಲೇಚ್ಛನಿರಲಿ
ಪ್ರಜೆಗೆ ಅಕ್ಕರೆ ಇರೋ ಅಗಸ ನಿರಲಿ
ಚರ್ಮ ಮಾರುವ ಹೀನ ಚಂಡಾಲನೆ ಇರಲಿ
ಈ ಮಹಿತಳದೊಳ್ ಯಾವನೆ ಆಗಿರಲಿ

ತೇಟಗೀತೆ : ನಿನ್ನ ಕೊಂಡಾಡುತಿರುವನೊ ನಿಶ್ಚಯದೊಳು
ಅವನು ಮೋಕ್ಷಾಧಿಕಾರಿ ಈ ವಸುಧೆಯೊಳಗೆ ॥ಭೂ॥

ತಾತ್ಪರ್ಯ : ವೇದಗಳನ್ನು ಪಠಿಸುವ ಬ್ರಾಹ್ಮಣನಿರಲಿ, ರಣರಂಗದಲ್ಲಿ ಹೋರಾಡುವ ರಾಜನಿರಲಿ, ವರ್ತಕ ಮಾಡುವ ವೈಶ್ಯನಿರಲಿ, ಭೂಮಿ ಉಳುವ ಶೂದ್ರನಿರಲಿ, ಹೊಳೆಯುವ ಖಡ್ಗವನ್ನು ಪಿಡಿದು ಜಳಪಿಸುವ ಚಂಡಾಲ ನಿರಲಿ, ಪ್ರಜೆಗಳಿಗೆ ಮಡಿ ಮಾಡುವ ಮಡಿವಾಳನಿರಲಿ, ಚರ್ಮ ಮಾರುವ ನೀಚನಿರಲಿ, ಯಾವನೆ ಆದರೂ ಈ ಭೂಮಿಯಲ್ಲಿ, ನಿನ್ನನ್ನು ಕೊಂಡಾಡುವನೇ ಮೋಕ್ಷಕ್ಕೆ ಅಧಿಕಾರಿ.

68. ಸೀಸ : ಸಕಲ ವಿದ್ಯಲು ನೇರ್ಚಿ ಸಭ ಜಯಿಂಪಗವಚ್ಚು
ಶೂರುಡೈ ರಣಮುಂದು ಚೋರವಚ್ಚು
ರಾಜರಾಜೈಪುಟ್ಟಿ ರಾಜ್ಯ ಮೇಲಗ ವಚ್ಚು
ಹೇಮ ಗೋದಾನಂಬು ಲಿಯ್ಯವಚ್ಚು
ಗಗನ ಮಂದುನ್ನ ಚುಕ್ಕಲ ನೆಂಚ ಕೋವಚ್ಚು
ಜೀವರಾಸುಲ ಪೇಳ್ಲು ಚೆಪ್ಪವಚ್ಚು
ಅಷ್ಟಾಂಗ ಯೋಗಂಬು ಲಭ್ಯ ಸಿಂಪಗವಚ್ಚು
ಮೇಕ ರೀತಿಗ ಪೂರಿ ಮ್ರಿಂಗವಚ್ಚು

ತೇಟಗೀತಿ : ತಾಮರಸ ಗರ್ಭ ಹರ ಪುರಂದರುಲಕೈನ
ನಿನ್ನುವರ್ಣಿಂಪ ದರ ಮೌನೆ ನೀರಜಾಕ್ಷ ‖ಭೂ‖

ಅನುವಾದ : ಸಕಲ ವಿದ್ಯೆ ಕಲಿತು ಸಭೆಯ ಗೆಲ್ಲಬಹುದು
ಶೂರನಾಗಿ ರಣದಲಿ ನುಗ್ಗಬಹುದು
ರಾಜನಾಗಿ ಜನಿಸಿ ರಾಜ್ಯವಾಳಬಹುದು
ಹೇಮ ಗೋದಾನವ ಕೊಡಲುಬಹುದು
ಗಗನದಲ್ಲಿಹ ಚುಕ್ಕಿಗಳಗಣಿಸಬಹುದು
ಜೀವರಾಶಿ ಹೆಸರು ಹೇಳಬಹುದು
ಅಷ್ಟಾಂಗ ಯೋಗವ ಅಭ್ಯಸಿಸಬಹುದು
ಆಡಿನ ತರ ತೃಣ ಅಗಿಯಬಹುದು

ತೇಟಗೀತೆ : ತಾಮರಸ ಗರ್ಭ ಹರ ಪುರಂದರರವರಿಗು
ನಿನ್ನ ವರ್ಣಿಸಲು ತರವೆ ನೀರಜಾಕ್ಷ ‖ಭೂ‖

ತಾತ್ಪರ್ಯ : ಸಕಲ ವಿದ್ಯಾ ಪಾರಂಗತರಾಗಿ ಸಭೆಯಲ್ಲಿ ಗೆಲ್ಲಬಹುದು. ರಾಜ ರಾಜನಾಗಿ ರಾಜ್ಯವಾಳಬಹುದು. ಕನಕ ಗೋದಾನಗಳ ಮಾಡಬಹುದು. ಶೂರನಾಗಿ ರಣರಂಗದಲ್ಲಿ ಮುನ್ನುಗ್ಗಬಹುದು. ಗಗನದಲ್ಲಿರುವ ನಕ್ಷತ್ರಗಳನ್ನು ಲೆಕ್ಕ ಹಾಕಬಹುದು. ಜೀವರಾಶಿಗಳನ್ನು ಹೆಸರಿಸಬಹುದು. ಅಷ್ಟಾಂಗ ಯೋಗವ ಅಭ್ಯಾಸ ಮಾಡಬಹುದು. ಆಡಿನಂತೆ ಹುಲ್ಲು ಅಗಿದು ನುಂಗಬಹುದು. ಆದರೆ, ನಿನ್ನನ್ನು ವರ್ಣಿಸಲು, ಬ್ರಹ್ಮ, ಈಶ್ವರ ದೇವೇಂದ್ರರಿಗೂ ಸಾಧ್ಯವಿಲ್ಲ.

69. ಸೀಸ : ನರಸಿಂಹ ನೀವಂಟಿ ದೊರನು ಸಂಪಾದಿಂಚಿ
ಕುಮತಿ ಮಾನವುಲ ನೇ ಗೊಲ್ವಜಾಲ
ನೆಕ್ಕು ವೈಶ್ವರ್ಯಂಬು ಲಿಯ್ಯ ಲೇಕುನ್ನನು
ಬೊಟ್ಟಕು ಮಾತ್ರಮು ಪೊಯ್ಯರಾದ
ಘನಮುಗಾದಿದಿ ನೀಕು ಕರವುನ ಬೋಷಿಂಪ
ಕಷ್ಟಮೆಂತಟಿ ಸ್ವಲ್ಪ ಕಾರ್ಯಮಯ್ಯ
ಪೆಟ್ಟಿ ಜಾಲಕ ನಿಲ ಭಿಕ್ಷ ಮೆತ್ತಿಂಚೇವು
ನನ್ನು ಬೀದನು ಚೇಸಿ ನಾವದೇಮಿ

ತೇಟಗೀತೆ : ವಿಮಲ ಕಮಲಾಕ್ಷ ನೇನಿಟ್ಲು ಶ್ರಮಲಪಡಗ
ಗನ್ನುಲಕು ಬಂಡುಗ್ನೆ ನೀಕು ಗಾನ ಬಡುನೇ ॥ಭೂ॥

ಅನುವಾದ : ನರಸಿಂಹ ನಿನ್ನಂಥ ದೊರೆಯ ಸಂಪಾದಿಸಿ
ಕುಮತಿ ಮಾನವರ ನಾ ಹೊಗಳಲಾರೆ
ಹೆಚ್ಚು ಐಶ್ವರ್ಯವ ನೀಡದಿದ್ದರು ಸಹ
ಉದರ ಪೋಷಣೆ ಮಾಡಬಾರದೇನು
ಘನವಲ್ಲವು ನಿನಗೆ ಬರದೊಳು ಪೋಷಿಸೆ
ಕಷ್ಟವೇನು ಸ್ವಲ್ಪ ಕೆಲಸವಯ್ಯ
ಇಡಲಾರದೀ ರೀತಿ ಭಿಕ್ಷ ಮೆತ್ತಿಸುವೆ ನೀ
ಎನ್ನ ಬಡವನ ಮಾಡಿದೆಯದೇನು

ತೇಟಗೀತೆ : ವಿಮಲ ಕಮಲಾಕ್ಷ ನಾನಿಂತು ಕಷ್ಟಪಡಲು
ಕಣ್ಣಿಗಬ್ಬವಾಗಿ ನಿನಗೆ ಕಾಣಬರದೊ ॥ಭೂ॥

ತಾತ್ಪರ್ಯ : ನರಸಿಂಹ ನಿನ್ನಂಥ, ದೊರೆಯನ್ನು ನಾನು ಸಂಪಾದಿಸಿರುವಾಗ ಹೀನ ಮಾನವರನ್ನು ನಾನು ಹೊಗಳಲಾರೆ. ಹೆಚ್ಚು ಐಶ್ವರ್ಯಗಳನ್ನು ಎನಗೆ ನೀಡದಿದ್ದರೂ, ಹೊಟ್ಟೆಗಾದರೂ ಅನ್ನ ಹಾಕಬಾರದೆ ಇದೇನು ದೊಡ್ಡ ವಿಷಯವಲ್ಲ. ಈ ಸ್ವಲ್ಪ ವಿಷಯಕ್ಕೆ ಎನ್ನ ಕೈಯಲ್ಲಿ ಭಿಕ್ಷೆ ಬೇಡುವಂತೆ ಮಾಡಿ ನನ್ನನ್ನು ಬಡವನಾಗಿಸಿದೆ. ನಾನು ಈ ರೀತಿ ಕಷ್ಟಪಡುತ್ತಿದ್ದರೆ, ನಿನಗೆ ಕಣ್ಣಿಗೆ ಹಬ್ಬವಾಗಿ ಕಾಣುತ್ತದೆಯೆ ?

70. ಸೀಸ : ವನಜಾತನಾಭ ನೀ ವದ್ದ ಜೇರಿತಿ ನೇನು
ಗಟ್ಟಿಗಾ ನನು ಕಾವು ಕಾವು ಮನುಚು
ವಚ್ಚಿನಂದುಕು ವೇಗ ವರಮುಲಿವ್ವಕ ಗಾನಿ
ಲೇವ ಬೋಯಿನ ನಿನ್ನು ಲೇವನಿಯ್ಯ
ಗೂಚರ್ಗುಂಡ ಚೆಟ್ಟಿ ನೀ ಕೊಂಗು ಗಟ್ಟಿಗ ಬಟ್ಟಿ
ಪುಚ್ಚುಕೊಂದುನ: ಚೂಡು ಭೋಗಿಶಯುನ
ಯೀವೇಳ ನೀ ಕಡ್ಡ ಮೆವರು ವಚ್ಚಿನಗಾನಿ
ವಾರಿಕೈನನು ಲೊಂಗಿ ವಡಕ ಬೋನು

ತೇಟಗೀತೆ : ಕೋಪಗಾಡನು ನೀವು ನಾ ಗುಣಮು ದೆಲಿಸಿ
ಯಿಪ್ಪುಡೇ ನನ್ನು ರಕ್ಷಿಂಚಿ ಯೇಲು ಕೊಮ್ಮು ॥ಭೂ॥

ಅನುವಾದ : ವನಜಾತನಾಭ ನಿನ್ನ ಸನಿಹ ಸೇರಿದೆ
ಭದ್ರವಾಗೆನ್ನನು ಪೊರೆಯುಲೆಂದು
ಬಂದೆ ನಾದುದರಿಂದ ಬೇಗ ವರವ ನೀಡು
ಎದ್ದು ಹೋದರೆ ನಿನ್ನ ಎಳಗೊಡೆನು
ಎಳೆದು ಕುಳಿಸಿ ನಿನ್ನ ಸೆರಗು ಬಿಗಿ ಹಿಡಿದು
ಪಡೆದುಕೊಳ್ಳುವೆ ನೋಡು ಭೋಗಿಶಯುನ
ಈ ಸಮಯ ನಿನಗೆ ಯಾರೆ ಅಡ್ಡ ಬರಲಿ
ಅವರಿಗಾರಿಗು ಮಣಿದು ಭಯಪಡೆನು

ತೇಟಗೀತೆ : ಕೋಪಗಾರನು ಎಂದೆನ್ನ ಗುಣವನರಿತು
ಈಗಲೇ ಎನ್ನ ರಕ್ಷಿಸಿ ಸಲಹು ನೀನು ॥ಭೂ॥

ತಾತ್ಪರ್ಯ : ಕಮಲನಾಭ, ನಿನ್ನನ್ನು ಆಶ್ರಯಿಸಿದೆ, ಬಿಡದೆ ನನ್ನನ್ನು ಕಾಪಾಡು. ನೀನು ಎದ್ದು ಹೋಗುವುದಾದರೆ, ನಿನ್ನ ಸೆರಗನ್ನು ಹಿಡಿದೆಳೆದು, ಕೂರಿಸಿ ನಿನ್ನಿಂದ ನಾನು ಪಡೆಯುವೆ, ಈ ಸಮಯ ಯಾರೆ ಆಗಲಿ ಅಡ್ಡ ಬಂದರೆ ನಾನು ಭಯಪಡುವುದಿಲ್ಲ. ನಾನು ಕೋಪಗಾರ ಎಂಬುದು ನಿನಗೆ ತಿಳಿದ ವಿಷಯ. ಈಗಲೇ ನನ್ನನ್ನು ಸಲಹು.

71. ಸೀಸ : ಪ್ರಾಹ್ಲಾದು ಡೇಪಾಟಿ ಪೈಡಿಕಾನುಕೆ ಲಿಚ್ಚೆ
ಮದಗಂಜಬೆನ್ನಿಚ್ಚೆ ಮೌಕ್ತಿಕಮುಲು
ನಾರದುಡೆನ್ನಿಚ್ಚೆ ನಗಲು ರತ್ನಂಬುಲ
ಹಲ್ಯ ನೀ ಕೇ ಯಗ್ರಹಾರ ಮಿಚ್ಚೆ
ಉಡುತ ನೀಕೆಪಾಟಿ ಯೂಡಿಗಂಬುಲು ಚೇಸೆ
ಘನ ವಿಭೀಷಣುಡೇಮಿ ಕಟ್ನ ಮಿಚ್ಚೆ
ಪಂಚಪಾಂಡವ್ಪು ಲೇಮಿ ಲಂಚಮಿಚ್ಚರಿ ನೀಕು
ದ್ರೌಪತಿ ನೀಕೆಂತ ದ್ರವ್ಯ ಮಿಚ್ಚೆ

ತೇಟಗೀತೆ : ನೀಕು ನೀರಂದರ್ರೈನಟ್ಲು ನೇನುಗಾನ
ಯೆಂದುಕನಿ ನನ್ನು ರಕ್ಷಿಂಪ ವಿಂದುವದನ ॥ಭೂ॥

ಅನುವಾದ : ಪ್ರಹ್ಲಾದನು ಅದೆಷ್ಟು ಕನಕ ಕಾಣಿಕೆ ಕೊಟ್ಟ
ಇಭತಾನೆನಿತು ಕೊಟ್ಟ ಮೌತ್ತಿಕವನು
ನಾರದ ನೇನಿತ್ತ ನಗನಾಣ್ಯ ಮಣಿಗಳ್ ಅ
ಹಲ್ಯೆ ಯಾವಗ್ರಹಾರವ ನೀಡಿದಳು
ಅಳಿಲದು ನಿನಗಾವ ಊಳಿಗವ ಮಾಡಿತು
ಘನವಿಭೀಷಣನಾವ ಕಪ್ಪ ಕೊಟ್ಟ
ಪಂಚ ಪಾಂಡವರಾವ ಲಂಚವಿತ್ತರು ನಿನಗೆ
ದ್ರೌಪತಿ ನಿನಗೆಷ್ಟು ಧನ ಸಲಿಸಿದಳ್

ತೇಟಗೀತೆ : ನಿನಗೆ ಇವರಿದ್ದ ರೀತಿ ನಾ ಇಲ್ಲವೇನು
ಯಾಕೆ ನನ್ನ ರಕ್ಷಿಸಲಾರೆ ಇಂದು ವದನ ॥ಭೂ॥

ತಾತ್ಪರ್ಯ : ಪ್ರಹ್ಲಾದನು ಎಷ್ಟು ಚಿನ್ನ ನಿನಗೆ ಕಾಣಿಕೆಯಾಗಿ ಕೊಟ್ಟ ? ಗಜೇಂದ್ರ ಎಷ್ಟು ಮುತ್ತುಗಳ ತಂದಿತ್ತ ? ನಾರದನೆಷ್ಟು ಒಡವೆ ರತ್ನಗಳ ಕೊಟ್ಟ ? ಅಹಲ್ಯೆಯು ಯಾವ ಅಗ್ರಹಾರವನ್ನು ನಿನಗೆ ಕೊಟ್ಟಳು ? ಅಳಿಲು ನಿನಗೆ ಯಾವ ಪರಿಚಾರಿಕೆ ಮಾಡಿತು ? ದ್ರೌಪತಿ ನಿನಗೆಷ್ಟು ಧನ ನೀಡಿದಳು ? ಪಾಂಡವರು ಎಷ್ಟು ಲಂಚ ಕೊಟ್ಟರು ? ಅವರು ನಡೆದುಕೊಂಡ ರೀತಿಯಲ್ಲಿ ನಾನು ನಡೆಯಲಿಲ್ಲವೇನು ? ಇಂದುವದನನೆ, ಯಾಕೆ ನನ್ನನ್ನು ರಕ್ಷಿಸದಿರುವೆ, ಅವರಂತೆ ನನ್ನನ್ನು ಕಾಪಾಡು.

72. ಸೀಸ : ವಾಂಚತೋ ಬಲಿ ಚಕ್ರವರ್ತಿ ದಗ್ಗರ ಚೇರಿ
ಭಿಕ್ಷ ಮೆತ್ತಿತಿವೇಲ ಬಿಡಿಯ ಪಡಕ
ಅಡವಿಲೋ ಶಬರಿ ತಿಯ್ಯನ ಫಲಾಲಂದಿಯ್ಯ
ಚೇತು ಲೊಗ್ಗಿತಿವೇಲ ಸಿಗ್ಗು ಪಡಕ
ವೇಡ್ಕತೋ ವೇವೇಗ ವಿದುರುನಿಂಟಿಕಿ ನೇಗಿ
ವಿಂದು ಗೊಂಟಿವದೇಮಿ ವೆಲಿತಿ ಪಡಕ
ನಟುಕುಲಲ್ಪಮು ಕುಚೇ ಲುಡುಗಡಿಂಚುಕ ಚೇರ
ಬೊಕ್ಕಸಾಗಿತಿವೇಲ ಲೆಕ್ಕಗೊನಗ

ತೇಟಗೀತೆ : ಭಕ್ತುಲಕು ನೇವು ಪೆಟ್ಟುಟ ಭಾಗ್ಯಮೌನು
ವಾರಿಕಾಶಿಂಚಿತಿವಿ ತಿಂಡಿ ವಾಡನಗುಚು ॥ಭೂ॥

ಅನುವಾದ : ಹಂಬಲಿಸಿ ಬಲಿಚಕ್ರವರುತಿ ಬಳಿ ಸೇರಿ
ಭಿಕ್ಷೆ ಬೇಡಿದೆಯೇಕೆ ಲಜ್ಜೆಗೆಟ್ಟು
ಅಡವಿಯಲಿ ಶಬರಿ ಸಿಹಿ ಫಲವನು ನೀಡೆ
ಕೈಯ ಚಾಚಿದೆಯೇಕೆ ನಾಚಿಗೊಳದೆ
ಸಂತಸದಲಿ ಬೇಗ ವಿದುರನ ಮನೆ ಸೇರಿ
ಊಟ ಮಾಡಿದೆಯೇನು ಕಡಿಮೆ ಎನದೆ
ಇನಿತವಲಕ್ಕಿ ಕುಚೇಲ ತಂದು ಕೊಡಲು
ಬುಕ್ಕಸಾಗಿದೆಯೇಕೆ ಲೆಕ್ಕಿಸದೆಲೆ

ತೇಟಗೀತೆ : ಭಕ್ತರಿಗೆ ನೀನು ನೀಡುವ ಭಾಗ್ಯವದುವೊ
ಅವರ ಕೋರಿದೆ ನೀ ಹೊಟ್ಟೆಬಾಕನಂತೆ ॥ಭೂ॥

ತಾತ್ಪರ್ಯ : ಲಜ್ಜೆ ಇಲ್ಲದೆ ಬಲಿಚಕ್ರವರ್ತಿಯನ್ನು ಸೇರಿ ಭಿಕ್ಷೆ ಬೇಡಿದೆ, ನಾಚಿಕೆಯಿಲ್ಲದೆ ಶಬರಿ ಕೊಟ್ಟ ಹಣ್ಣಿಗೆ ಕೈ ಚಾಚಿದೆ. ಕಡಿಮೆ ಕುಲದವನೆಂದೆಣಿಸದೆ, ಸಂತೋಷದಿಂದ ವಿದುರನ ಮನೆಯಲ್ಲಿ ಊಟ ಮಾಡಿದೆ. ಹಿಡಿ ಅವಲಕ್ಕಿಯನ್ನು ಕುಚೇಲನು ಕೊಡಲು ಅದನ್ನು ಲೆಕ್ಕಿಸದೆ ಬುಕ್ಕಿದೆ. ಇದೇನು ಭಕ್ತರಿಗೆ ನೀನು ಕೊಡುವ ಭಾಗ್ಯವಿರಬಹುದೆ?

73. ಸೀಸ : ಸ್ಥಂಭಮಂದುನಮಿಂಚಿ ದಾನವೇಂದ್ರುನಿ ದ್ರುಂಚಿ
ಕರುಣತೋ ಪ್ರಹ್ಲಾದು ಗಾಚಿನಾವು
ಮಕರಿಚೇ ಸಾಮಜಮು ದುಃಖಿಂಪಂಗ
ಕೃಪಯುಂಚಿ ವೇಗ ರಕ್ಷಿಂಚಿ ನಾವು
ಶರಣಂಚು ನಾವಿಭೀಷಣುಂಡು ನೀಚಾಟುಕು
ವಚ್ಚಿನಪ್ಪುಡೆ ಲಂಕ ನಿಚ್ಚಿ ನಾವು
ಅಕುಚೇಲುಂಡು ಚೇರೆ ಡಟುಕುಲರ್ಪಿಂಚಿನ
ಬಹು ಸಂಪದಲನಿಚ್ಚಿ ಪಂಪಿನಾವು

ತೇಟಗೀತೆ : ವಾರಿವಲೆನನ್ನು ಬೋಷಿಂಪ ವಶಮುಗಾದ
ಯಿಂತ ವಲಪಕ್ಷ ಮೇಲ ಶ್ರೀಕಾಂತ ನೀಕು ॥ಭೂ॥

ಅನುವಾದ : ಸ್ಥಂಭದಲ್ಲಿಯೆ ಹುಟ್ಟಿ ದಾನವೇಂದ್ರನ ಮೆಟ್ಟಿ
ಕರುಣೆಯಿಂ ಪ್ರಹ್ಲಾದನನು ಸಲಹಿದೆ
ಮಕರದಿಂ ಸಾಮಜವು ಬಹುವಾಗಿ ದುಃಖಿಸಲು
ಕೃಪೆ ಮಾಡಿ ಬೇಗ ರಕ್ಷಿಸಿದೆ ನೀನು
ಶರಣೆಂದು ಆ ವಿಭೀಷಣ ನಿನ್ನಲ್ಲಿಗೆ ಬಂದಾ
ಕ್ಷಣ ನೀಡಿದೆ ಅವಗೆ ಲಂಕಾನಗರ
ಅಕುಚೇಲನು ಹಿಡಿ ಅವಲಕ್ಕಿ ನೀಡಲು
ಬಹು ಸಂಪದ ನೀಡಿ ಕಳುಹಿಸಿದೆಯೊ

ತೇಟಗೀತೆ : ಅವರಂತೆನ್ನ ಪೋಷಿಸೆ ಶಕ್ಯವಾಗದೇನು
ಇನಿತು ಪಕ್ಷಪಾತವದೇಕೆ ಲಕ್ಷ್ಮೀರಮಣ ॥ಭೂ॥

ತಾತ್ಪರ್ಯ : ಸ್ಥಂಭದಲ್ಲಿ ಹುಟ್ಟಿ, ದಾನವೇಂದ್ರನನ್ನು ಕೊಂದು ಪ್ರಹ್ಲಾದನನ್ನು ಸಲಹಿದೆ. ಮಕರದಿಂದ ಆನೆ ಬಹು ಕಷ್ಟಪಡಲು ನೀಬಂದು ಕಾಪಾಡಿದೆ. ವಿಭೀಷಣನು ಶರಣೆಂದಾಗ ಲಂಕಾನಗರವನ್ನೇ ಅವನಿಗೆ ನೀಡಿದೆ. ಆ ಕುಚೇಲನು ಒಂದು ಹಿಡಿ ಅವಲಕ್ಕಿಯನ್ನು ತಂದು ಕೊಡಲು, ಅವನಿಗೆ ಸಿರಿ ಸಂಪದಗಳನ್ನು ಕೊಟ್ಟೆ. ಅವರನ್ನು ಪೋಷಿಸಿದ ರೀತಿ ನನ್ನನ್ನೂ ಪೋಷಿಸಬಾರದೆ ? ಶ್ರೀಕಾಂತ ಎನ್ನಲ್ಲಿ ನಿನಗೆ ಇಷ್ಟೊಂದು ಪಕ್ಷಪಾತವೇ ?

74 ಸೀಸ : ವ್ಯಾಸುಂ ಡೇಕುಲಮಂದು ವಾಸಿಗಾ ಜನಿಯಿಂಚೆ
ವಿದುರುಂ ಡೇಕುಲಮಂದು ವೃದ್ಧಿ ಬೊಂದೆ
ಕರ್ಣುಂಡೇ ಕುಲಮಂದು ಘನ ಮುಗಾವರ್ಧಿಲ್ಲೆ
ನಾವಸಿಷ್ಠುಂಡೆಕ್ಕ ಡವತರಿಂಚೆ
ನಿಂಪ್ರಗಾ ವಾಲ್ಮೀಕು ಡೇಕುಲಂಬುನ ಬುಟ್ಟೆ
ಗುಹುಂಡನು ಪುಣ್ಯುಡೇ ಕುಲಮು ವಾಡು
ಶ್ರೀ ಶುಕಡೆಚ್ಚಟ ಜೆಲಗಿ ಜನ್ಮಿಂಚೆನು
ಶಬರಿ ಯೇಕುಲಮಂದು ಜನ್ಮಮೊಂದೆ

ತೇಟಗೀತೆ : ನೇ ಕುಲಂಬುನ ವೀರಂದ ರೊಚ್ಚಿನಾರು
ನೀ ಕೃಪಾ ಪಾತ್ರುಲಕು ಜಾತಿನೀತು ಲೇಲ ॥ಭೂ॥

ಅನುವಾದ : ವ್ಯಾಸನಾವ ಕುಲದಿ ಮೇಲಾಗಿ ಜನಿಸಿದ
ವಿದುರನಾವ ಕುಲದಿ ವೃದ್ಧಿಯಾದ
ಕರ್ಣನಾವ ಕುಲದಿ ಘನವಾಗಿ ಬೆಳಗಿದ
ಆ ವಶಿಷ್ಠನು ಎಲ್ಲಿ ಅವತರಿಸಿದ
ಇಂಪಾಗಿ ವಾಲ್ಮೀಕಿ ಯಾಕುಲದೊಳುಟ್ಟಿದ
ಗುಹನೆಂಬ ಪುಣ್ಯನಾವಕುಲದವನು
ಶ್ರೀ ಶುಕ ನತಿಶಯದೆಲ್ಲಿ ಜನಿಸಿದನು
ಶಬರಿ ಯಾವ ಕುಲದೊಳುದಯಿಸಿದಳು

ತೇಟಗೀತೆ : ಯಾವ ಕುಲದಿಂದ ಇವರೆಲ್ಲ ಬಂದರಿಳೆಗೆ
ನಿನ್ನ ಕೃಪೆಯುಳ್ಳವನಿಗೆ ಜಾತಿನೀತಿ ಯೇಕೆ ॥ಭೂ॥

ತಾತ್ಪರ್ಯ : ವ್ಯಾಸ, ವಿಧುರ, ಕರ್ಣ, ವಶಿಷ್ಠ, ವಾಲ್ಮೀಕಿ, ಗುಹ, ಶುಕ, ಶಬರಿ ಇವರೆಲ್ಲ ಉಚ್ಛ ಕುಲದವರಲ್ಲದಿದ್ದರೂ ಅವರೆಲ್ಲರೂ ನಿನ್ನ ಕೃಪೆಗೆ ಪಾತ್ರರಾದರು. ನಿನ್ನ ಕೃಪಾ ಪಾತ್ರರಿಗೆ, ಜಾತಿ, ಕುಲ ಇವು ಏಕೆ ಬೇಕು ?

75. ಸೀಸ : ವಸುಧಾಸ್ಥಲಂಬುನ ವರ್ಣ ಹೀನುಡುಗಾನಿ
ಬಹುಳ ದುರಾಚಾರ ಪರುಡಗಾನಿ
ತಡಸಿ ಕಾಸಿಯ್ಯನಿ ಧರ್ಮ ಶೂನ್ಯುಡುಗಾನಿ
ಚದುವ ನೇರನಿ ಮೂಢ ಜನುಡುಗಾನಿ
ಸಕಲ ಮಾನವುಲು ಮೆಚ್ಚನಿ ಕೃತಘ್ನುಡುಗಾನಿ
ಚೂಡ ಸೊಂಪುನು ಲೇನಿ ಶುಂಠಗಾನಿ
ಯಪ್ರತಿಷ್ಟಲಕು ಲೋನೈನ ದೀನುಡುಗಾನಿ
ಮೊದಟಿಕೇಮೆರುಗನಿ ಮೋಟುಗಾನಿ

ತೇಟಗೀತೆ : ಪ್ರತಿದಿನಮು ನೀದು ಭಜಚೇ ಬರಗುನಟ್ಟಿ
ವಾನಿಕೇವಂಕ ಲೇದಯ್ಯ ವಚ್ಚುಮುಕ್ತಿ ॥ಭೂ॥

ಅನುವಾದ : ವಸುದಾಸ್ಥಳದೊಳಗೆ ವರ್ಣಹೀನನಿರಲಿ
ಬಹಳ ದುರಾಚಾರ ಪರನೆ ಇರಲಿ
ಬಿಡಿಕಾಸ ಬಿಡದಿಹ ಧರ್ಮ ಶೂನ್ಯನಿರಲಿ
ಓದು ಕಲಿಯದಿಹ ಮೂಢನಿರಲಿ
ಸಕಲ ಮಾನವರು ಮೆಚ್ಚದ ಕೃತಘ್ನನಿರಲಿ
ನೋಡಲಂದ ವಿರದ ಶುಂಠನಿರಲಿ
ಅಪ್ರತಿಷ್ಟೆಗೆ ಸಿಲುಕಿದ ದೀನನಾಗಲಿ
ಮೊದಲಿಗೆ ಅರಿಯದ ದಡ್ಡನಿರಲಿ

ತೇಟಗೀತೆ : ಪ್ರತಿದಿನ ನಿನ್ನ ಭಜನೆಯೊಳು ಕಾಲ ಕಳೆವ
ನರಗೆ ಯಾವ ಲೋಪವಿರದು ಮುಕ್ತಿ ಪಡೆವ ॥ಭೂ॥

ತಾತ್ಪರ್ಯ : ಪ್ರಪಂಚದಲ್ಲಿ ಜಾತಿ ಹೀನನಾಗಲಿ, ಧರ್ಮವನ್ನು ಮಾಡದೆ ಇರುವವನಾಗಲಿ, ನಂಬಿಕೆ ದ್ರೋಹಿಯಾಗಿರಲಿ, ಓದದ ಮೂಢನಾಗಿರಲಿ, ಶುದ್ಧ ಶುಂಠನಿರಲಿ, ಅಪ್ರತಿಷ್ಠಿತನೆ ಆಗಿರಲಿ, ದಡ್ಡನಿರಲಿ, ಇವರಲ್ಲಿ ಯಾರೆ ಆಗಿರಲಿ, ಪ್ರತಿನಿತ್ಯ ನಿನ್ನ ಧ್ಯಾನ ಮಾಡುವವರಿಗೆ ಯಾವ ಕೊರತೆಯೂ ಇರುವುದಿಲ್ಲ. ಮುಕ್ತಿಯನ್ನು ಪಡೆಯುವರು.

76. ಸೀಸ : ಇಭ ಕುಂ ಭ ಮುಲ ಮೀದಿ ಕೆಗಿರೆಡು ಸಿಂಗಂಬು
ಮುಟ್ಟುನೇ ಕುರುಚೈನ ಮೂಷಕಮುನು
ನವ ಚೂತ ಪತ್ರಮುಲ್ ನಮಲೆಡಿ ಕೋಯಿಲ
ಕೊರುಕುನೇ ಜಿಲ್ಲೇಡು ಕೊನಲು ನೋಟ
ನರವಿಂದ ಮಕರಂದ ಮನುಭವಿಂಚೆಡಿ ತೇಟಿ
ಪೋವುನೇ ಪಲ್ಲೇರು ಪೂಲ ಕಡಕು
ಲಲಿತ ಮೈನ ರಸಾಲಫಲಮು ಗೋರೆಡಿಚಿಲ್ಕ
ಮೆಸವುನೇ ಭ್ರಮನು ನುಮ್ಮೆತ್ತಕಾಯ

ತೇಟಗೀತೆ : ನಿಲನು ನೀ ಕೀರ್ತನಲು ಪಾಡ ನೇರ್ಚಿನತಡು
ಪರುಲ ಕೀರ್ತನ ಬಾಡುನೇ ಯರಸಿ ಚೂಡ ॥ಭೂ॥

ಅನುವಾದ : ಇಭಕುಂಭಗಳ ಮೇಲೆ ಜಿಗಿಯುವಾ ಸಿಂಗವು
ತಾಕುವುದೇ ಕುಬ್ಜವಾದ ಇಲಿಯು
ನವಚೂತ ಪತ್ರವ ಜಿಗಿಯುವ ಕೋಗಿಲೆ
ಆಗಿವುದೆ ಬಾಯಿಂದ ಎಕ್ಕದೆಲೆಯು
ನರವಿಂದ ಮಕರಂದವನುಭವಿಸುವ ತುಂಬಿ
ಸೇರುವುದೇ ನೆಗ್ಗಿಲ ಲತೆ ಸನಿಹ
ಮಧುರವಾದ ರಸಫಲಕೆ ಆಶಿಸುವ ಗಿಳಿ
ಕಡಿವುದೇಂ ಒಲವಿಂದುಮ್ಮತ್ತ ಫಲವ

ತೇಟಗೀತೆ : ವಸುಧೆಯೊಳು ನಿನ್ನ ಭಜಿಸೆ ಕಲಿತ ನರನು
ಪರರ ಹೆಸರ ಸ್ತುತಿಸುವನೆ ಅರಸಿ ನೋಡೆ ॥ಭೂ॥

ತಾತ್ಪರ್ಯ : ಆನೆಯ ಕುಂಭಗಳ ಮೇಲೆ ಜಿಗಿಯುವ, ಸಿಂಹ ಮೂಷಕವನ್ನು ಮುಟ್ಟದ ಹಾಗೆ, ಚಿಗುರು ಮಾವಿನೆಲೆಯ ಕಡಿಯುವ ಕೋಗಿಲೆಯು ಎಕ್ಕದ ಎಲೆಯ ಮುಟ್ಟದ ಹಾಗೆ, ಮಕರಂದವನ್ನು ಹೀರುವ ದುಂಬಿ ನೆಗ್ಗಿಲ ಹೂವನ್ನು ಮುಟ್ಟದ ಹಾಗೆ, ಒಳ್ಳೆ ಹಣ್ಣಿನ ರಸವನ್ನು ಉಣ್ಣುವ ಗಿಳಿ ಉಮ್ಮತ್ತ ಕಾಯಿಯ ಕಡೆ ನೋಡದ ಹಾಗೆ, ಭೂಮಿಯಲ್ಲಿ ಪರಮಾತ್ಮನನ್ನು ಭಜಿಸಲು ಕಲಿತವರು ಇತರರನ್ನು ಕುರಿತು ಸ್ತೋತ್ರ ಮಾಡುವುದಿಲ್ಲ.

77. ಸೀಸ : ಸರ್ವೇಶ ನೀ ಪಾದ ಸರಸಿಜ ದ್ವಯಮಂದು
ಚಿತ್ತ ಮುಂಚಗಲೇನು ಜದರ ಕುಂಡ
ನೀವೈನ ದಯಯುಂಚಿ ನಿಲಚಿಯುಂಡೇಟಟ್ಟು
ಜೇಚಿ ನನ್ನಿಪ್ಪುಡೇಲು ಸೇವಕುಡನು
ವನಜ ಲೋಚನ ನೇನು ವಟ್ಟಿ ಮೂರ್ಖುಡ ಜುಮ್ಮಿ
ನೀ ಸ್ವರೂಪ ಮುನು ಜೂಡ ನೇರ್ಪು ವೇಗ
ತನಕುಮಾರುನಕುಗ್ಗು ತಲ್ಲಿ ಪೋಸಿನಯಟ್ಲು
ಭಕ್ತಿ ಮಾರ್ಗಂಬನು ಪಾಲು ಪೋಸಿ

ತೇಟಗೀತೆ : ಪ್ರೇಮತೋ ನನು ಪೋಷಿಂಚಿ ಪೆಂಚುಕೊನಿಯು
ಘನತ ಕೆಕ್ಕಿಂಚು ನೀದಾಸ ಗಣಮು ಲೋನ ॥ಭೂ॥

ಅನುವಾದ : ಸರ್ವೇಶ ನಿನಪಾದ ಸರಸಿಜ ದ್ವಯದಲ್ಲಿ
ಚಿತ್ತವಿರಿಸಲಾರೆ ಚದುರದಂತೆ
ನೀನಾದರೂ ದಯೆಯಿಟ್ಟು ನಿಲ್ಲಿಸುವಂತೆ
ಮಾಡಿ ಸಲಹು ಎನ್ನ ದಾಸ ನಾನು
ವನಜಲೋಚನ ನಾನು ಬರಿ ಮೂರ್ಖನಾಗಿಹೆ
ನಿನ್ನ ರೂಪವ ನೋಡೆ ಕಲಿಸು ಬೇಗ
ತನ್ನ ತನಯುಗೆ ತಾಯಿ ಉಣಿಸುವ ತೆರನ
ಭಕ್ತಿ ಮಾರ್ಗವೆನುವ ಹಾಲು ಹಾಕಿ

ತೇಟಗೀತೆ : ಪ್ರೇಮದಿಂದಲಿ ಪೋಷಿಸಿ ಬೆಳೆಸು ಎನ್ನ
ಘನತೆ ಗೇರಿಸು ನಿನ್ನ ದಾಸ ಗಣದೊಳಗೆ ॥ಭೂ॥

ತಾತ್ಪರ್ಯ : ಸರ್ವೇಶ, ಚಿತ್ತವು ಚದರದಂತೆ ನಿನ್ನ ಪಾದ ಕಮಲದಲ್ಲಿ ನಿಲ್ಲಿಸಲಾರೆ. ನಿನ್ನ ದಾಸನು ನಾನು, ನನ್ನ ಮನವನ್ನು ನಿನ್ನ ಧ್ಯಾನದಲ್ಲಿ ನೆಲೆಗೊಳ್ಳುವಂತೆ ಅನುಗ್ರಹಿಸು. ನಾನು ಬರಿ ಮೂರ್ಖ. ನಿನ್ನ ದರ್ಶನ ಮಾಡುವ ಮಾರ್ಗವನ್ನು ತೋರಿಸು. ತಾಯಿ, ಮಗುವಿಗೆ ಹಾಲು ಉಣಿಸುವಂತೆ, ಭಕ್ತಿ ಮಾರ್ಗವೆಂಬ ಹಾಲನೆರೆದು ಪೋಷಿಸು. ನಿನ್ನ ದಾಸ ವೃಂದದಲ್ಲಿ ನನಗೆ ಸ್ಥಾನ ಉಂಟು ಮಾಡು.

78. ಸೀಸ : ಜೀಮೂತ ವರ್ಣ ನೀ ಮೋಮುತೋ ಸರಿರಾಕ
ಕಮಲಾರಿ ಯತಿ ಕಳಂಕಮುನು ಬಡಸೆ
ಸೊಗಸೈನ ನೀ ನೇತ್ರ ಯುಗಮುತೋ ಸರಿರಾಕ
ನಳಿನ ಬೃಂದಮು ನೀಳ್ಳ ನಡುಮ ಚೇರೆ
ಗರಿರಾಜ ವರದ ನೀ ಗಳಮುತೋ ಸರಿರಾಕ
ಪೆದ್ದ ಶಂಖಮು ಬೊಬ್ಬ ಪೆಟ್ಟ ದೊಡಗೆ
ಶ್ರೀಪತಿ ನೀ ದಿವ್ಯ ರೂಪುತೋ ಸರಿರಾಕ
ಪುಷ್ಪಬಾಣುಡು ನೀಕು ಪುತ್ರುಡೈಯೆ

ತೇಟಗೀತೆ : ನಿಂದಿರಾದೇವಿ ನಿನ್ನು ಮೋಹಿಂಚಿ ವಿಡಕ
ನೀಕು ಪಟ್ಟಂಬು ರಾಣಯ್ಯೆ ನಿಶ್ಚಯಮುಗ ॥ಭೂ॥

ಅನುವಾದ : ಜೀಮೂತ ವರ್ಣ ನಿನ್ನ ಮುಖವ ಹೋಲದೆ
ಕಮಲಾರಿ ಅತಿ ಕಳಂಕವನು ತಳೆದ
ಸೊಗಸಾದ ನಿನ್ನ ನಯನವ ಹೋಲದೆ
ನಳಿನ ಬೃಂದವು ನೀರ ನಡುವೆ ಹೋಯ್ತು
ಕರಿವರದನೆ ನಿನ್ನ ಕಂಠವ ಹೋಲದೆ
ದೊಡ್ಡ ಶಂಖವು ಬೊಬ್ಬೆ ಹೊಡೆಯಲಾಯ್ತು
ಶ್ರೀಪತಿ ನಿನ್ನ ದಿವ್ಯ ರೂಪವ ಹೋಲದೆ
ಪುಷ್ಪ ಬಾಣ ನಿನಗೆ ಪುತ್ರನಾದ

ತೇಟಗೀತೆ : ಇಂದಿರಾದೇವಿ ನಿನ್ನ ಮೋಹಿಸಿ ಬಿಡದೆಲೆ
ನಿನಗೆ ಪಟ್ಟದ ರಾಣಿ ಎನಿಸಿದಳು ದಿಟ ॥ಭೂ॥

ತಾತ್ಪರ್ಯ : ಮೇಘ ವರ್ಣವುಳ್ಳ ಪರಮಾತ್ಮನೆ ನಿನ್ನ ಮುಖ ಕಾಂತಿಗೆ ಸರಿಸಮನಾಗದೆ ಚಂದ್ರನಿಗೆ ಕಲೆಯುಂಟಾಯಿತು. ಅಂದವಾದ ನಿನ್ನ ಕಣ್ಣುಗಳಿಗೆ ಸರಿಸಮವಾಗದೆ ಕಮಲಗಳ ಸಮೂಹ ನೀರಿನ ನಡುವೆ ಸೇರಿತು. ಕರಿವರದನೆ, ನಿನ್ನ ಕಂಠಕ್ಕೆ ಸರಿಸಮನಾಗದೆ ಶಂಖವು ಅರಚತೊಡಗಿತು. ಹೇ ಶ್ರೀಪತಿಯೆ ನಿನ್ನ ರೂಪಕ್ಕೆ ಸರಿಸಮನಾಗದೆ, ಮನ್ಮಥನು ನಿನಗೆ ಮಗನಾದ. ಇಂದಿರಾದೇವಿ ನಿನ್ನನ್ನು ಮೋಹಿಸಿ ಬಿಡಲಾರದೆ ನಿನಗೆ ಪಟ್ಟದ ರಾಣಿಯಾದಳು.

79. ಸೀಸ : ಹರಿದಾಸುಲನು ನಿಂದ ಲಾಡ ಕುಂಡಿನಚಾಲು
ಸಕಲ ಗ್ರಂಥಂಬುಲು ಚದುವಿನಟ್ಲು
ಭಿಕ್ಷಮಿಯ್ಯಂಗ ದಪ್ಪಿಂಚ ಕುಂಡಿನಚಾಲು
ಚೇಮುಟ್ಟಿ ದಾನಂಬು ಚೇಸಿನಟ್ಲು
ಮಿಂಚಿ ಸಜ್ಜನುಲ ವಂಚಿಂಚ ಕುಂಡಿನಚಾಲು
ನಿಂಪುಗಾ ಬಹುಮಾನ ಮಿಚ್ಚಿನಟ್ಲು
ದೇವಾಗ್ರ ಹಾರಮುಲ್ ದೀಯಕುಂಡಿನ ಚಾಲು
ಗನಕ ಕಂಬಪುಗುಳ್ಳು ಕಟ್ಟಿನಟ್ಲು

ತೇಟಗೀತೆ : ಒಕರಿ ವರ್ಷಾಶನಮು ಮುಂಚಕುನ್ನ ಚಾಲು
ಪೇರು ಕೀರ್ತಿಗ ಸತ್ರಮುಲ್ ಪೆಟ್ಟಿನಟ್ಲು ॥ಭೂ॥

ಅನುವಾದ : ಹರಿದಾಸರನು ನಿಂದೆ ಮಾಡದಿರಲು ಸಾಕು
ಸಕಲ ಗ್ರಂಥಗಳನು ಓದಿದಂತೆ
ಭಿಕ್ಷೆ ಕೊಡಲು ತಪ್ಪಿಸದಿರಲದುವೆ ಸಾಕು
ಕೈಯಿಂದ ದಾನವ ನೀಡಿದಂತೆ
ಹೊಂಚಿ ಸಜ್ಜನರ ವಂಚಿಸದಿದ್ದರದು ಸಾಕು
ಇಂಪಾಗಿ ಬಹುಮಾನ ಕೊಟ್ಟ ಹಾಗೆ
ದೇವಾಗ್ರಹಾರಗಳ ತೆಗೆಯದಿರೆ ಸಾಕು
ಕನಕ ಕಂಬದ ಗುಡಿ ಕಟ್ಟಿದಂತೆ

ತೇಟಗೀತೆ : ಒಬ್ಬರ ವರುಷಾಶನ ನುಂಗದಿರಲು ಸಾಕು
ಹೆಸರಿರುವ ರೀತಿ ಸತ್ರಗಳ ನಡೆಸಿದಂತೆ ॥ಭೂ॥

ತಾತ್ಪರ್ಯ : ಹರಿದಾಸರನ್ನು ನಿಂದಿಸದಿದ್ದರೆ ಸಾಕು, ಅನೇಕ ಗ್ರಂಥಗಳನ್ನು ಓದಿದಂತಾಗುತ್ತದೆ. ಭಿಕ್ಷೆ ನೀಡುವುದನ್ನು ತಡೆಯದಿದ್ದರೆ ಸಾಕು, ತಾನು ಕೈಯೆತ್ತಿ ದಾನ ಕೊಟ್ಟ ಹಾಗೆ. ಸಜ್ಜನರನ್ನು ವಂಚಿಸದಿದ್ದರೆ ಸಾಕು, ಇಂಪಾಗಿ ಬಹುಮಾನ ಕೊಟ್ಟ ಹಾಗೆ. ದೇವಸ್ಥಾನ ಅಗ್ರಹಾರಗಳನ್ನು ಕಿತ್ತುಹಾಕದಿದ್ದರೆ ಸಾಕು, ಕನಕ ಕಂಬದ ಗುಡಿಯು ಕಟ್ಟಿದಂತೆ. ಒಬ್ಬರ ವರುಷಾಶನವನ್ನು ನುಂಗದಿದ್ದರೆ ಸಾಕು, ಹೆಸರಿರುವಂತೆ ಛತ್ರವ ನಿರ್ಮಿಸಿದಂತೆ.

80. ಸೀಸ : ಇಹಲೋಕ ಸೌಖ್ಯಮ್ಮು ಲಿಚ್ಛಗಿಂಚೆದಮನ್ನ
ದೇಹ ಮೆಪ್ಪಟಿಕಿದಾ ಸ್ಥಿರತನೊಂದ
ದಾಯುಷ್ಯಮುನ್ನ ಪರ್ಯಂತಂಬು ಪಟುತಯು
ನೊಕ್ಕ ತೀರುನ ನುಂಡದುರ್ವಿಲೋನ
ಬಾಲ್ಯ ಯೌವನ ಸುದುರ್ಬಲ ವಾರ್ಧಕಮುಲನು
ಮೂಟಿಲೋ ಮುನಿಗೆಡಿ ಮುರುಕಿಬೊಂದ
ಭ್ರಾಂತಿತೋ ದೀನಿ ಗಾ ಪಾಡುದ ಮನುಕೊನ್ನ
ಗಾಲಮೃತ್ಯುವು ಚೇತ ಗೋಲುಪೋವು

ತೇಟಗೀತೆ : ನಮ್ಮರಾದಯ್ಯ ಇದಿ ಮಾಯ ನಾಟಕಂಬು
ಜನ್ಮಮಿಕನೊಲ್ಲ ನನ್ನೇಲು ಜಲಜನಾಭ ॥ಭೂ॥

ಅನುವಾದ : ಇಹಲೋಕ ಸೌಖ್ಯವ ಇಚ್ಛಿಸೋಣ ವೆನಲು
ದೇಹ ಸದಾ ಕಾಲ ಸ್ಥಿರವಿರದು
ಆಯುಷ್ಯ ಪರಿಯಂತ ದೇಹದಾ ಬಲವದು
ಒಂದೇ ರೀತಿ ಇರದು ಉರ್ವಿಯೊಳಗೆ
ಬಾಲ್ಯ ಯೌವನ ಸುದುರ್ಬಲ ವೃದ್ಧಾಪ್ಯವು
ಮೂರೊಳಗೆ ಮುಳುಗುವ ಹೊಲಸು ಕೊಂಪೆ
ಮಮತೆಯಿಂದ ಇದ ಕಾಪಾಡುವ ಎಂದರೆ
ಕಾಲ ಮೃತ್ಯುವಿನಿಂದ ಜಾರಿಹೋಗು

ತೇಟಗೀತೆ : ನಂಬಬಾರದಯ್ಯ ಇದನು ಮಾಯೆ ನಟನೆ
ಜನ್ಮವಿನ್ನು ಬೇಡ ಸಲಹು ಜಲಜನಾಭ ॥ಭೂ॥

ತಾತ್ಪರ್ಯ : ಇಹಲೋಕ ಸುಖಕ್ಕೆ ಆಸೆ ಪಡೋಣವೆಂದರೆ ದೇಹವು ಸದಾ ಕಾಲ ಸ್ಥಿರವಾಗಿ ಇರುವುದಿಲ್ಲ. ಬಾಲ್ಯ, ಯೌವನ, ಮುದಿತನ ಈ ಮೂರರಲ್ಲಿ ಮುಳುಗುವುದು ಈ ಹೊಲಸು ಕೊಂಪೆ. ಪ್ರೀತಿಯಿಂದ ಈ ದೇಹವನ್ನು ರಕ್ಷಿಸೋಣ ವೆಂದರೆ ಕಾಲ ಮೃತ್ಯುವಿನ ಕೈಗೆ ಸಿಕ್ಕಿ, ಬಿದ್ದುಹೋಗುತ್ತದೆ. ಈ ದೇಹವನ್ನು ನಂಬಬಾರದು. ಇದು ಬರೀ ಮಾಯಾ ನಾಟಕ. ಇನ್ನು ಜನ್ಮವೆನಗೆ ಬೇಡ, ಜಲಜನಾಭನೆ ನನ್ನ ಕಾಪಾಡು.

81. ಸೀಸ : ಭಾವಂಬು ನೀನಾಮ ಭಜನ ಗೋರುಚುನುಂಡು
ಜಿಹ್ವ ನೀ ಕೀರ್ತನಲ್ ಚೇಯ ಗೋರು
ಹಸ್ತಯುಗ್ಮಂಬು ನಿನ್ನ ಚೆಂಪ ಗೋರುನು
ಕರ್ಣಮುಲ್ ನೀಮೀದ ಕಥಲು ಗೋರು
ತನುವು ನೀ ಸೇವಯೇ ಘನಮುಗಾ ಗೋರುನು
ನಯನಮುಲ್ ನೀ ದರ್ಶನಂಬು ಗೋರು
ಮೂರ್ಧಮ್ಮು ನೀಪದಂಬುಲು ಮ್ರೊಕ್ಕಗಾ ಗೋರು
ನಾತ್ಮ ನೀದೈಯುಂಡು ನರಸಿ ಚೂಡ

ತೇಟಗೀತೆ : ಸ್ವಪ್ನಮುನ ನೈನ ನೇವೇಳ ಸತತ ಮುಗನು
ಬುದ್ಧಿ ನೀಪಾದ ಮುಲಯಂದು ಬೂನಿಯುಂಡು ॥ಭೂ॥

ಅನುವಾದ : ಭಾವಕ್ಕೆ ನಿನ್ನ ನಾಮ ಭಜನೆಯದೆ ಆಸೆ
ಜಿಹ್ವೆಗೆ ನಿನ್ನ ಕೀರ್ತಿಸುವ ಆಸೆ
ಹಸ್ತ ದ್ವಯಕ್ಕೆ ನಿನ್ನನು ಅರ್ಚಿಸುವ ಆಸೆ
ಕರ್ಣಗಳ್ ನಿನಕಥೆ ಕೇಳ್ವ ಆಸೆ
ತನುವು ನಿನ್ನಯ ಸೇವೆಯನು ಮಾಡುವ ಆಸೆ
ನಯನಕೆ ನಿನ್ನ ದರ್ಶನದ ಆಸೆ
ಮಸ್ತಕ ನಿನ್ನ ಪಾದಕ್ಕೆರಗುವ ಆಸೆ
ಆತ್ಮತಾ ನಿನ್ನದೈ ಅರಸಿ ನೋಡೆ

ತೇಟಗೀತೆ : ಸ್ವಪ್ನದಲ್ಲಾದರೂ ಸದಾಕಾಲದೊಳು ಸತತ
ಬುದ್ಧಿ ನಿನ್ನ ಪಾದಗಳಲಿ ಸೇರಿ ಇಹುದು ॥ಭೂ॥

ತಾತ್ಪರ್ಯ : ಮನಸ್ಸು ನಿನ್ನ ಭಜನೆಯನ್ನು , ನಾಲಿಗೆ ನಿನ್ನ ಕೀರ್ತನೆಯನ್ನು, ಹಸ್ತಗಳು ನಿನ್ನ ಪೂಜೆಯನ್ನು ಬಯಸುತ್ತವೆ. ಕಿವಿಗಳು ನಿನ್ನ ಕಥೆಯನ್ನು ಕೇಳಬೇಕೆನ್ನುತ್ತವೆ. ಶರೀರವು ನಿನ್ನ ಸೇವೆಯನ್ನು ಮಾಡಬೇಕೆನ್ನುತ್ತದೆ. ನಯನಗಳು ಸದಾ ನಿನ್ನ ದರ್ಶನವನ್ನು ಕೋರುತ್ತವೆ. ಮಸ್ತಕವು ನಿನ್ನ ಪಾದಕ್ಕೆ ಎರಗಬೇಕೆನ್ನುತ್ತದೆ. ಆತ್ಮವೇ ನಿನ್ನದಾಗಿದೆ. ಸ್ವಪ್ನದಲ್ಲಿಯೇ ಆಗಲಿ, ಇತರೆ ಯಾವ ಸಂದರ್ಭದಲ್ಲೇ ಆಗಲಿ ಬುದ್ಧಿ ನಿನ್ನ ಪಾದಗಳಲ್ಲಿ ನೆಲೆಸಿರುತ್ತದೆ.

82. ಸೀಸ : ಪದ್ಮಾಕ್ಷ ಮಮತ ಜೇ ಬರಮು ನಂದೆದ ಮಂಚಿ
ವಿರ್ರವೀಗೆದ ಮಯ್ಯ ವೆರ್ರಿಪಟ್ಟಿ
ಮಾಸ್ವತಂತ್ರಂ ಬೈನ ಮದಮುಚೆ ಕಂಡ್ಲಕು ಗಪ್ಪಿ
ಮೊಗಮು ಪಟ್ಟಿದು ಕಾಮ ಮೋಹ ಮುನನು
ಬ್ರಹ್ಮದೇವುಂಡೈನ ಬೈಡಿ ದೇಹಮು ಗಲ್ಗ
ಜೇಸಿ ಪೇಯಕ ಮಮ್ಮು ಚೆರಿಚೆನತಡು
ತುಚ್ಚಮ್ಮ ನಟುವಂಟಿ ತೋಲೆಮ್ಮುಕಲತೋಡಿ
ಮುರಿಕಿ ಚೆತ್ತಲು ಚೇರ್ಚಿ ಮುಪ್ಪು ಬೆಟ್ಟಿ

ತೇಟಗೀತೆ : ಈ ಶರೀರಾಲು ಪಡಿಪೋವು ಟೆರಿಗಿ ವೇಮು
ಕಾಮಕುಲಮೈತಿಮಿಕ ಮಿಮ್ಮುಗಾನಲೇಮು ॥ಭೂ॥

ಅನುವಾದ : ಪದ್ಮಾಕ್ಷ ಮಮತೆಯಿಂ ಪರವ ಹೊಂದುವೆನೆಂದು
ಬಹು ಗರ್ವಿಸುವೆನಯ್ಯ ಹುಚ್ಚು ಹಿಡಿದು
ಸ್ವಂತ ಕಲ್ಪಿತ ಮದ ಕಂಗಳಿಗೆ ಕವಿದು
ಮುಖವು ಸಂಕುಚಿಸಿದೆ ಕಾಮ ಮೋಹ
ಆ ಬ್ರಹ್ಮದೇವನು ಬಂಗಾರ ದೇಹವ
ಮಾಡಿ ಬಿಸುಡದೆಮ್ಮನು ಹಾಳುಗೈದ
ತುಚ್ಚವಾದಂತ ತೊಗಲು ಮೂಳೆಯು ಸಹಿತ
ಕೊಳಕು ಹೊಲಸು ಕೂಡಿ ಮುಪ್ಪನಿಟ್ಟ

ತೇಟಗೀತೆ : ಈ ಶರೀರ ನಶ್ವರವೆಂದು ತಿಳಿದು ನಾವು
ಕಾಮುಕರೆ ಆಗಿ ನಿಮ್ಮನು ಅರಿಯದಿಹೆವು ॥ಭೂ॥

ತಾತ್ಪರ್ಯ : ಪರವನ್ನು ಹೊಂದುವೆನೆಂದು ಬಹು ಗರ್ವದಿಂದ ಹುಚ್ಚು ಹಿಡಿದಂತಿರುವೆವು. ಸ್ವಂತ ಕಲ್ಪಿತ ಮದ ಕಣ್ಣಿಗೆ ಕವಿದು, ಮುಖ ಕಾಂತಿಹೀನವಾಗಿಹುದು. ಆ ಬ್ರಹ್ಮನು ಈ ದೇಹವನ್ನು ಬಂಗಾರದಿಂದಲಾದರೂ ಮಾಡದೆ ನಮ್ಮನ್ನು ಕೆಡಿಸಿದ. ಚರ್ಮ, ಮೂಳೆ, ಹೊಲಸು, ಕೊಳಕುಗಳನ್ನು ಸೇರಿಸಿ, ಮುಪ್ಪನ್ನೂ ಸಹ ಅದರೊಳಿಟ್ಟ. ಈ ಶರೀರವು ನಶ್ವರವೆಂದು ತಿಳಿದೂ ಸಹ ನಾವು ಕಾಮುಕರಾಗಿದ್ದೇವೆ. ಪದ್ಮಾಕ್ಷನೆ ನಿನ್ನನ್ನು ತಿಳಿಯುವ ಬಗೆ ಹೇಗೆ ?

83. ಸೀಸ : ಗರುಡ ವಾಹನ ದಿವ್ಯ ಕೌಸ್ತುಭಾಲಂಕಾರ
ರವಿ ಕೋಟಿ ತೇಜ ಸಾರಂಗವದನ
ಮಣಿಗಣಾನ್ವಿತ ಹೇಮ ಮಕುಟಾಭರಣ ಚಾರು
ಮಕರ ಕುಂಡಲ ಸನ್ಮಂದ ಹಾಸ
ಕಾಂಚನಾಂಬರ ರತ್ನ ಕಾಂಚೀ ವಿಭೂಷಿತ
ಸುರವರಾರ್ಚಿತ ಚಂದ್ರ ಸೂರ್ಯ ನಯನ
ಕಮಲನಾಭ ಮುಕುಂದ ಗಂಗಾಧರ ಸ್ತುತ
ರಾಕ್ಷಸಾಂತಕ ನಾಗರಾಜ ಶಯನ

ತೇಟಗೀತೆ : ಪತಿತ ಪಾವನ ಲಕ್ಷ್ಮೀಶ ಬ್ರಹ್ಮ ಜನಕ
ಭಕ್ತವತ್ಸಲ ಸರ್ವೇಶ ಪರಮ ಪುರುಷ ॥ಭೂ॥

ಅನುವಾದ : ಮೂಲವು ಬಹಳ ರಮ್ಯವಾಗಿದೆ. ಕಾರಣ ಅನುವಾದಿಸಲಿಲ್ಲ. ಕನ್ನಡದಲ್ಲಿ ಬಳಸುವ ಪದ ಸಮೂಹದಿಂದ ಕೂಡಿದೆ.

ತಾತ್ಪರ್ಯ : ಗರುಡ ವಾಹನ ಉಳ್ಳವನೆ, ಕೌಸ್ತುಭ ಮಣಿಯಿಂದ ಅಲಂಕೃತನಾದವನೆ, ಕೋಟಿ ಸೂರ್ಯರ ತೇಜಸ್ಸು ಉಳ್ಳವನೆ, ಮಣಿಗುಚ್ಛಗಳಿಂದಲಂಕರಿಸಿದ ಕಿರೀಟಧಾರಿಯೆ, ಮಕರ ಕುಂಡಲಗಳಿಂದ ಶೋಭಿಸುವವನೆ, ಕಾಂಚನಾಂಬರ ಧರನೇ, ದೇವತೆಗಳಿಂದ ಪೂಜೆ ಪಡೆಯುವವನೆ, ನಾಭಿಯಲ್ಲಿ ಕಮಲ ಉಳ್ಳವನೆ, ಚಂದ್ರ ಸೂರ್ಯರನ್ನು ಕಣ್ಣುಗಳಾಗಿ ಉಳ್ಳವನೆ, ಮೋಕ್ಷದಾಯಕ, ಗಂಗಾಧರನಿಂದ ಸ್ತುತಿಸಲ್ಪಡುವವನೆ, ರಾಕ್ಷಸರನ್ನು ಸಂಹರಿಸುವವನೆ, ನಾಗರಾಜನ ಮೇಲೆ ಮಲಗುವವನೆ, ಪತಿತ ಪಾವನನೆ, ಲಕ್ಷ್ಮೀಶ, ಬ್ರಹ್ಮನ ತಂದೆಯೆ, ಭಕ್ತರನ್ನು ಸಲಹುವವನೆ, ಸರ್ವೇಶ ಪರಮ ಪುರುಷ. (ನಿನಗೆ ಅನಂತ ವಂದನೆಗಳು)

84. ಸೀಸ : ಪಲುಮಾರುದಶರೂಪಮುಲು ಧರಿಂಚಿತಿ ವೇಲ
ನೇಕ ರೂಪಮು ಬೊಂದವೇಲ ನೀವು
ನಯಮುನ ಕ್ಷೀರಾಬ್ಧಿ ನಡುಮು ಚೇರಿತಿ ವೇಲ
ರತ್ನ ಕಾಂಚನ ಮುಂದಿರಮುಲು ಲೇವೆ
ಪನ್ನಗೇಂದ್ರು ನಿ ಮೀದ ಪವ್ವಳಿಂಚಿತಿ ವೇಲ
ಜಲತಾರು ಪಟ್ಟು ಮಂಚಮುಲು ಲೇವೆ
ರೆಕ್ಕಲುಗಲಪಕ್ಷಿ ನೆಕ್ಕಿಸಾಗಿತಿವೇಲ
ಗಜ ತುರಂಗಾಂದೋಳಿ ಕಮುಲು ಲೇವೆ

ತೇಟಗೀತೆ : ವನಜ ಲೋಚನ ಇಟುವಂಟಿ ವೈಭವಮುಲು
ನೀಕು ಸೊಗಸುಗಾ ದೋಚೆನೊ ಸುಂದರಾಂಗ ॥ಭೂ॥

ಅನುವಾದ : ಬಹಳ ಸಲ ದಶರೂಪವಧರಿಸಿದೆ ಏಕೆ
ಒಂದೇ ರೂಪವನೇಕೆ ಹೊಂದದಿರುವೆ
ನಯದೊಳು ಕ್ಷೀರಾಬ್ಧಿ ನಡುವೆ ಸೇರಿದೆ ಏಕೆ
ರತ್ನ ಕಾಂಚನ ಗೃಹವಿಲ್ಲವೇನು
ಪನ್ನಗೇಂದ್ರನ ಮೇಲೆ ಪವ್ವಳಿಸಿದೆ ಏಕೆ
ರೇಶ್ಮೆ ಹೊದಿಕೆ ಮಂಚವಿಲ್ಲವೇನು
ರೆಕ್ಕೆ ಇರುವ ಪಕ್ಷಿ ಹತ್ತಿ ಸಾಗಿದೆ ಏಕೆ
ಗಜತುರಗ ರಥಗಳಿಲ್ಲವೇನು

ತೇಟಗೀತೆ : ವನಜ ಲೋಚನ ನೀ ತೆರ ವೈಭವಗಳು
ನಿನಗೆ ಸೊಗಸಾಗಿ ಕಂಡಿತೇ ಸುಂದರಾಂಗ ॥ಭೂ॥

ತಾತ್ಪರ್ಯ : ವನಜಲೋಚನನೆ, ನೀನು ಒಂದೇ ರೂಪದಿಂದಿರದೆ, ಅನೇಕ ಬಾರಿ ಅನೇಕ ರೂಪಗಳನ್ನು ಏತಕ್ಕೆ ತಾಳಿದೆ ? ರತ್ನ ಕಾಂಚನ ಮಂದಿರಗಳಿರುವಾಗ, ನಯವಾಗಿ ಕ್ಷೀರ ಸಾಗರ ವನ್ನು ಸೇರಿದ ಮರ್ಮವೇನು. ಜರತಾರಿ ಹೊದಿಕೆ ಮಂಚಗಳಿರುವಾಗ, ಹಾವಿನ ಮೇಲೇಕೆ ಮಲಗಿರುವೆ. ಗಜ ತುರಂಗ ರಥಗಳಿರುವಾಗ ರೆಕ್ಕೆಗಳುಳ್ಳ ಪಕ್ಷಿಯನ್ನು ಹತ್ತಿ ಸಾಗುವೆಯೇಕೆ ? ಸುಂದರಾಂಗನೆ, ಇಂಥಹ ವೈಭವಗಳು ನಿನಗೆ ಅಂದವಾಗಿ ಕಂಡು ಬಂದಿತೇ.

85. ಸೀಸ : ತಿರುಪತಿ ಸ್ಥಲಮಂದು ತಿನ್ನಗಾ ನುಂಡಿನ
ವೆಂಕಟೇಶುಂಡು ಮೇತ ವೇಯಲೇಡ
ಪುರುಷೋತ್ತಮುನಕು ನೇ ಬೋಯಿನ ಚಾಲು ಜ
ಗನ್ನಾಥುಡನ್ನಂಬು ಗಡಪ ಲೇಡ
ಶ್ರೀರಂಗ ಮುನಕು ನೇ ಜೇರ ಬೋಯಿನ ಚಾಲು
ಸ್ವಾಮಿ ಗ್ರಾಸಮು ಪೆಟ್ಟಿ ಸಾಕಲೇಡ
ಕಾಂಚೀಪುರಮು ಲೋನ ಗದಿಸಿ ನೇ ಕೊಲುವುನ್ನ
ಗರಿವರದುಡು ಪೊಟ್ಟ ಗಡಪಲೇಡ

ತೇಟಗೀತೆ : ಎಂದು ಬೋಕನು ನೇನು ನೀ ಮಂದಿರಮುನ
ನಿಲ್ಚಿತಿನಿ ನೀಕುನಾಮೀದ ನೆನರು ಲೇದ ॥ಭೂ॥

ಅನುವಾದ : ತಿರುಪತಿ ಸ್ಥಳದಿ ನಾ ಸ್ವಸ್ಥದಿಂದಿರುತಿರೆ
ವೆಂಕಟೇಶನ ಶನವೀಯನೇನು
ಪುರುಷೋತ್ತಮಕೆ ನಾ ಹೋದಡೆ ಸಾಕು
ಜಗದೊಡೆಯನು ಅನ್ನ ಹಾಕನೇನು
ಸಾಗಿ ಶ್ರೀರಂಗದಲಿ ನೆಲೆಸಿದರೆ ಸಾಕು
ಸ್ವಾಮಿ ಗ್ರಾಸವನಿತ್ತು ಸಲಹ ನೇನು
ಕಾಂಚಿಪುರದ ಪೊಕ್ಕು ನಾ ಸೇವೆಗೊಳಿರಲು
ಕರಿವರದನು ಹೊಟ್ಟೆ ಹೊರೆಯನೇನು

ತೇಟಗೀತೆ : ಎಲ್ಲು ಹೋಗದೆ ನಾ ನಿನ್ನ ಮಂದಿರದಲಿ
ನಿಂತೆ ನಿನಗಿನ್ನಲ್ಲಿ ಕರುಣೆ ಬಾರದೇನು ॥ಭೂ॥

ತಾತ್ಪರ್ಯ : ಸ್ವಸ್ಥವಾಗಿ [illegible] ಇದ್ದರೆ, ವೆಂಕಟೇಶನು, ಜಗನ್ನಾಥಕ್ಕೆ ಹೋದರೆ ಆ [illegible]ನ್ನಾಥನು, ಶ್ರೀರಂಗಕ್ಕೆ ಹೋದರೆ ಆ ಶ್ರೀರಂಗನು, [illegible]ಂಚಿಪುರಕ್ಕೆ ಹೋದರೆ, ಕರಿವರದನು, ಎನಗೆ ಅನ್ನವನ್ನು ನೀಡಿ ಸಲಹಲಾರರೇನು ? ಎಲ್ಲಿಗೂ ಹೋಗದೆ ನಿನ್ನ ಮಂದಿರದಲ್ಲಿಯೋ ನಿಂತಿರುವೆನು ಎನ್ನ ಮೇಲೆ ನಿನಗೆ ದಯ ಬಾರದೇನು ?

86. ಸೀಸ : ತಾರ್ಕ್ಷ್ಯವಾಹನ ನೀವು ದಂಡಿದಾತ ವಟಂಚು
ಗೋರಿವೇಡುಕನಿನ್ನು ಗೊಲ್ವವಚ್ಚಿ
ಅರ್ಥಿಮಾರ್ಗಮುನನೇ ನನುಸರಿಂಚಿತಿನಯ್ಯ
ಲಾವೇನು ಬದಿವಾಲ್ಗು ಲಕ್ಷಲೈನ
ವೇಷಮುಲ್ ವೇಸಿ ನಾ ವಿದ್ಯಾ ಚಾತುರ್ಯಂಬು
ಜೂಪಸಾಗಿತಿ ನೀಕು ಸುಂದರಾಂಗ
ಯಾನಂದ ಮೈನ ನೇ ನಡುಗ ವಚ್ಚಿನ ದಿಚ್ಚಿ
ವಾಂಚದೀರ್ಚುಮು ನೀಲವರ್ಣ ವೇಗ

ತೇಟಗೀತೆ : ನೀಕು ನಾ ವಿದ್ಯ ಹರ್ಷಂಬು ಗಾಕಯುನ್ನ
ತೇಪ ತೇಪಕು ವೇಷಮುಲ್‌ದೇನು ಜುಮ್ಮಿ ॥ಭೂ॥

ಅನುವಾದ : ಗರುಡವಾಹನ ನೀನು ದೊಡ್ಡದಾತನು ಎಂದು
ಕೋರಿ ಒಲುಮೆಯಿಂದ ಭಜಿಸೆ ಬಂದೆ
ಅರ್ಥಿಮಾರ್ಗವ ನಾನು ಅನುಸರಿಸಿದೆನಯ್ಯ
ಪಿರಿದೆಂಬತ್ನಾಲ್ಕು ಲಕ್ಷಗಳೆಂಬಂತೆ
ವೇಷ ಧರಿಸಿ ಎನ್ನ ವಿದ್ಯಾ ಪಾಂಡಿತ್ಯವ
ತೋರಿಸೆ ಹೊರಟೆನೈ ಸುಂದರಾಂಗ
ಆನಂದವೆನಿಸೆ ನಾ ಕೇಳ ಬಂದುದ ನಿತ್ತು
ಆಸೆ ತೀರಿಸು ಬೇಗ ನೀಲವರ್ಣ

ತೇಟಗೀತೆ : ನಿನೆಗೆ ಎನ್ನ ವಿದ್ಯೆ ಪ್ರಿಯವಾಗದಿರಲು
ಮಾತು ಮಾತಿಗೆ ವೇಷವ ತಾಳೆನಯ್ಯ ॥ಭೂ॥

ತಾತ್ಪರ್ಯ : ಗರುಡವಾಹನ ನೀನು ದೊಡ್ಡದಾತನೆಂದು ನಂಬಿ, ಪ್ರೀತಿಯಿಂದ ನಿನ್ನ ಭಜನೆ ಮಾಡುವೆನು. ಅರ್ಥಿಮಾರ್ಗವನ್ನು ನಾನು ಅನುಸರಿಸುವೆನು. ಎಂಬತ್ನಾಲ್ಕು ಲಕ್ಷ ವೇಷಗಳನ್ನು ಹಾಕಿ (ಜನ್ಮಗಳನ್ನು ತಳೆದು) ನನ್ನ ವಿದ್ಯಾ ಪಾಂಡಿತ್ಯದಿಂದ ನಿನ್ನನ್ನು ಸ್ತುತಿಸಲು ಹೊರಟಿರುವೆ. ನಿನಗೆ ಆನಂದವಾದರೆ, ನಾನು ಕೇಳುವುದನ್ನು ನೀಡಿ ನನ್ನ ಆಸೆಯನ್ನು ತೀರಿಸು. ನನ್ನ ವಿದ್ಯೆ ನಿನಗೆ ಪ್ರಿಯವಾಗದೆ ಹೋದರೆ ನಾನು ಪದೇ ಪದೇ ವೇಷಗಳನ್ನು ಬದಲಿಸಲಾರೆ.

87. ಸೀಸ : ಅಮರೇಂದ್ರವಿನುತ ನೇ ನತಿ ದುರಾತ್ಮುಡನೆಂಚು
ಗಲಲೋನನ್ನೈನನು ಗನುಲ ಒಡವು
ನೀವು ಪ್ರತ್ಯಕ್ಷಮ್ಮೈ ನಿಲುವ ಕುಂಡಿನ ಮಾನೆ
ದೊಡ್ಡಗಾನೊಕ ಯುಕ್ತಿ ದೊರಕೆನಯ್ಯ
ಗಟ್ಟಿ ಕೊಯ್ಯನುದೆಚ್ಚಿ ಘನಮುಗಾ ಖಂಡಿಂಚಿ
ನೀ ಸ್ವರೂಪಮುಜೇಸಿ ನಿಲುಪು ಕೊಂದು
ಧೂಪದೀಪ ಮುಲಿಚ್ಚಿ ತುಲಸಿ ತೋ ಪೂಜಿಂಚಿ
ನಿತ್ಯ ನೈವೇದ್ಯಮುಲ್ ನೇಮ ಮುಗನು

ತೇಟಗೀತೆ : ನಡುಪುಚುನು ನಿನ್ನು ಗೊಲಿಚೆದ ನಮ್ಮಿ ಬುದ್ಧಿ
ನೀ ಪ್ರಪಂಚಂಬು ಗಲಿಗೆ ನಾಕಿಂತೆ ಚಾಲು ॥ಭೂ॥

ಅನುವಾದ : ಅಮರೇಂದ್ರ ವಿನುತ ನಾ ದುರಾತ್ಮನು ಎಂದು
ಕನಸಿನಲ್ಲಿಯು ಕಣ್ಗೆ ಕಾಣದಿರುವೆ
ನೀನು ಪ್ರತ್ಯಕ್ಷದಿ ನಿಲ್ಲದಿದ್ದರು ಸರಿ
ದೊಡ್ಡ ಯುಕ್ತಿಯದೊಂದು ದೊರಕಿತಯ್ಯ
ಗಟ್ಟಿಕಟ್ಟಿಗೆ ತಂದು ಘನವಾಗಿ ಖಂಡಿಸಿ
ನಿನ್ನ ರೂಪವ ಮಾಡಿ ನಿಲಿಸಿಕೊಳುವೆ
ಧೂಪ ದೀಪವನಿತ್ತು ತುಲಸಿ ಪೂಜೆಯ ಗೈದು
ನಿತ್ಯ ನೈವೇದ್ಯವ ನೇಮದಿಂದ

ತೇಟಗೀತೆ : ನಡೆಸಿ ನಿನ್ನ ನರ್ಚಿಸುವೆನು ನಂಬಿ ಬುದ್ಧಿ
ನಿನ್ನ ಪ್ರಪಂಚ ದೊರಕಿತ್ಮೆ ಇಷ್ಟೆ ಸಾಕು ॥ಭೂ॥

ತಾತ್ಪರ್ಯ : ಅಮರೇಂದ್ರನಿಂದ ಪೂಜಿಸಲ್ಪಡುವವನೆ, ನಾನು ದುರಾತ್ಮನೆಂದು ಕನಸಿನಲ್ಲಿಯೂ ಕಾಣದಿರುವೆ. ನೀನು ನನ್ನೆದುರಿಗೆ ಪ್ರತ್ಯಕ್ಷವಾಗಿ ಬಂದು ನಿಲ್ಲದಿದ್ದರೂ ಸರಿ, ನನಗೆ ಒಂದು ಉಪಾಯ ಹೊಳೆದಿದೆ. ಗಟ್ಟಿಯಾದ ಒಂದು ಕಟ್ಟಿಗೆಯನ್ನು ತಂದು ಅದರಲ್ಲಿ ನಿನ್ನ ಮೂರ್ತಿಯನ್ನು ಮಾಡಿ, ನಿಲ್ಲಿಸಿ, ಧೂಪ ದೀಪ ನೈವೇದ್ಯಗಳನ್ನಿತ್ತು ಪೂಜಿಸುವೆ. ಬುದ್ಧಿ ಪೂರ್ವಕವಾಗಿ ನಿನ್ನನ್ನು ನಂಬಿದುದಕ್ಕೆ ನಿನ್ನ ಪ್ರಪಂಚವು ದೊರಕಿತೆನಗೆ ಅಷ್ಟೆ ಸಾಕು.

88. ಸೀಸ : ಲಕ್ಷ್ಮೀಶ ಗೋವಿಂದ ರವಿಕೋಟಿ ಸಂಕಾಶ
ಪಕ್ಷಿವಾಹನ ಭಕ್ತ ಪಾರಿಜಾತ
ಯಂಭೋಜ ಭವರುದ್ರ ಜಂಬಾರಿ ಸನ್ನುತ
ಸಾಮಗಾನ ವಿಲೋಲ ಸಾರಸಾಕ್ಷ
ವನದಿ ಗಂಭೀರ ಶ್ರೀವತ್ಸ ಕೌಸ್ತುಭವಕ್ಷ
ಶಂಕಚಕ್ರಗದಾಸಿ ಶಾಂಜ್ಞ್ರ್ಗ ಹಸ್ತ
ದೀನ ರಕ್ಷಕ ವಾಸುದೇವ ದೈತ್ಯವಿನಾಶ
ನಾರದಾರ್ಚಿತ ದಿವ್ಯ ನಾಗಶಯನ

ತೇಟಗೀತೆ : ಚಾರು ನವರತ್ನ ಕುಂಡಲ ಶ್ರವಣಯುಗಳ
ವಿಬುಧ ವಂದಿತ ಪಾದಾಬ್ಜ ವಿಶ್ವರೂಪ ॥ಭೂ॥

ಅನುವಾದ : ಇದು ಪ್ರಾರ್ಥನೆ. ಮೂಲದ ರಮ್ಯತೆಯನ್ನು ಉಳಿಸಲು ಮತ್ತು ಮೂಲದಲ್ಲಿ ಬರುವ ಪದ ಗುಚ್ಛಗಳು ಕನ್ನಡ ದಲ್ಲಿಯೂ ಬಳಸುವುವಾದ್ದರಿಂದ, ಅನುವಾದ ಮಾಡಿಲ್ಲ.

ತಾತ್ಪರ್ಯ : ಲಕ್ಷ್ಮೀ ಒಡೆಯನೆ, ಗೋವಿಂದ, ಕೋಟಿ ಸೂರ್ಯ ಪ್ರಕಾಶ ಉಳ್ಳವನೆ, ಗರುಡವಾಹನ, ಭಕ್ತರಿಗೆ ಪಾರಿಜಾತ ದಂತೆ ಬೇಡಿದ ವರವ ನೀಡುವವನೆ, ಬ್ರಹ್ಮ, ರುದ್ರ, ಇಂದ್ರರಿಂದ ಪೂಜಿಸಲ್ಪಡುವವನೆ, ಸಾಮಗಾನ ಪ್ರಿಯನೆ, ಕಮಲದಂಥ ಕಣ್ಣುಳ್ಳವನೆ, ಅಲೆಯಿಲ್ಲದ ಸಮುದ್ರದಂತೆ, ಗಂಭೀರವಾಗಿರುವವನೆ, ಶ್ರೀವತ್ಸ, ಕೌಸ್ತುಭ ಮಣಿಯನ್ನು ವಕ್ಷಸ್ಥಳದಲ್ಲಿ ಧರಿಸಿರುವವನೆ, ಶಂಖ ಚಕ್ರ ಗದೆ ಬಿಲ್ಲು ಗಳನ್ನು ಹಸ್ತದಲ್ಲಿ ಧರಿಸಿರುವವನೆ, ದೀನರನ್ನು ಪೋಷಿಸುವವನೆ, ವಾಸುದೇವನೆ, ದೈತ್ಯವಿನಾಶಕನೆ, ನಾರದನಿಂದ ವಂದಿತನೆ, ನಾಗರಾಜನ ಮೇಲೆ ಶಯನಿಸು ವವನೆ, ಮನೋಹರ ನವರತ್ನ ಕುಂಡಲಗಳನ್ನು ಕಿವಿಯಲ್ಲಿ ಧರಿಸಿದವನೆ, ದೇವತೆಗಳಿಂದ ವಂದಿಸಲ್ಪಡುವ ಕಮಲದಂತಹ ಪಾದಗಳುಳ್ಳ, ವಿಶ್ವರೂಪನೆ ನಿನಗೆ ಪ್ರಣಾಮಗಳು.

**89.** ಸೀಸ :

ನಾಗೇಂದ್ರಶಯನ ನೀ ನಾಮ ಮಾಧುರ್ಯಂಬು
ಮೂಡು ಕನ್ನುಲ ಸಾಂಬಮೂರ್ತಿ ಕೆರುಕ
ಪಂಕತಾಜಾಕ್ಷ ನೀ ಬಲಪರಾಕ್ರಮಮೆಲ್ಲ
ಭಾರತೀ ಪತಿಯೈನ ಬ್ರಹ್ಮ ಕೆರುಕ
ಮಧು ಕೈಟಬಾರಿ ನೀ ಮಾಯಾಸಮರ್ಥತ
ವಸುಧಲೋ ಬಲಿಚಕ್ರವರ್ತಿ ಕೆರುಕ
ಪರಮಾತ್ಮ ನೀದಗು ಪಕ್ಷಪಾತಿತ್ವಂಬು
ದಶ ಶತಾಕ್ಷುಲ ಪುರಂದರುನ ಕೆರುಕ

ತೇಟಗೀತೆ :

ವೀರಿಕೆರುಕಗು ನೀ ಕಥಲ್ ವಿಂತಲೆಲ್ಲ
ನರುಲ ಕೆರುಕನ್ನ ನೆವರೈನ ನವ್ವಿ ಪೋರೆ ॥ಭೂ॥

ಅನುವಾದ :

ನಾಗೇಂದ್ರಶಯನ ನಿನ್ನಯ ನಾಮ ಮಾಧುರ್ಯ
ಮೂರು ಕಣ್ಗಳ ಸಾಂಬಮೂರ್ತಿ ಯರಿವ
ಪಂಕತಾಜಾಕ್ಷ ನಿನ್ನ ಬಲಪರಾಕ್ರಮ
ಭಾರತೀ ಪತಿಯಾದ ಬ್ರಹ್ಮನರಿವ
ಮಧು ಕೈಟಬಾರಿ ನಿನ್ನಯ ಮಾಯಾ ಸಾಮರ್ಥ್ಯ
ವಸುಧೆಯೊಳ್ ಬಲಿಚಕ್ರವರ್ತಿ ಅರಿವ
ಪರಮಾತ್ಮ ನಿನ್ನದಾದ ಪಕ್ಷಪಾತತ್ವವ
ದಶಶತಾಕ್ಷಗಳುಳ್ಳ ಇಂದ್ರನರಿವ

ತೇಟಗೀತೆ :

ಇವರಿಗರಿವು ನಿನ್ನ ಕಥೆ ವಿಚಿತ್ರಗಳವು
ನರರಿಗರಿವೆನೆ ನಗುವರ್ಕೈ ಯಾರೆ ಇರಲು ॥ಭೂ॥

ತಾತ್ಪರ್ಯ :

ಶೇಷನ ಮೇಲೆ ನಿದ್ರಿಸುವವನೆ, ನಿನ್ನ ಹೆಸರಿನ ಮಾಧುರ್ಯ ಮುಕ್ಕಣ್ಣ, ಸಾಂಬಮೂರ್ತಿ, ಅರಿವರ್ಕೈ, ಪದ್ಮ ಕಮಲದಂತೆ ಕಣ್ಣುಳ್ಳವನೆ, ನಿನ್ನ ಬಲಪರಾಕ್ರಮಗಳು ಭಾರತೀ ಪತಿ ಬ್ರಹ್ಮ ತಿಳಿದಿದ್ದಾನೆ. ಮಧು ಕೈಟಬರಿಗೆ ಶತ್ರುವೇ, ನಿನ್ನ ಮಾಯಾ ಸಮರ್ಥನೆ ಬಲಿಚಕ್ರವರ್ತಿಗೆ ತಿಳಿದಿದೆ. ನಿನ್ನ ಪಕ್ಷಪಾತತ್ವವನ್ನು ಸಾವಿರ ಕಣ್ಣುಗಳ ಇಂದ್ರನರಿಯುವನು. ಇವರಿಗೆ ತಿಳಿದಿರುವ ನಿನ್ನ ಕಥೆ ವಿಲಾಸಗಳೆಲ್ಲ ನರ ಮಾನವರಿಗೆ ತಿಳಿಯುತ್ತದೆ ಎಂದರೆ ನಗೆಗೇಡು.

90\. **ಸೀಸ** : ಅಂದರೇಮ್ಮೆನನಿನ್ನಡುಗ ವಚ್ಚೆದರಂಚು
ಕ್ಷೀರಸಾಗರ ಮಂದು ಚೇರಿನಾವು
ನೀ ಚುಟ್ಟು ಸೇವಕುಲ್‌ನಿಲುಪ ಕುಂಡುಟಕು ನೈ
ಭಯದ ಸರ್ಪಮುಮೀದ ಬಂಡಿನಾವು
ಭಕ್ತ ವೃಂದಮು ವೆಂಟಬಡಿ ಚರಿಂಚೆದರಂಚು
ನೆಗಸಿ ಪೋಯೆಡಿ ಪಕ್ಷಿ ನೆಕ್ಕಿ ನಾವು
ದಾಸುಲುನೀ ದ್ವಾರ ಮಾಸಿಂಪ ಕುಂಟಕು
ಮಂಚಿ ಯೋಧುಲ ಕಾವಲುಂಚಿನಾವು

**ತೇಟಗೀತೆ** : ಲಾವುಗಲವಾಡವೈತಿ ವೇಲಾಗು ನೇನು
ನಿನ್ನುಜೂತುನು ನಾ ತಂಡ್ರಿ ನೀರಜಾಕ್ಷ ॥ಭೂ॥

**ಅನುವಾದ** : ಎಲ್ಲರೇನಾದರೂ ಬಂದು ಕೇಳುವರೆಂದು
ಕ್ಷೀರಸಾಗರ ಸೇರಿರುವೆ ನೀನು
ನಿನ್ನ ಸೇವಕ ಜನ ಬಳಿ ಸಾರದಿರಲೆಂದು
ಭಯದ ಸರ್ಪದ ಮೇಲೆ ಪವಳಿಸಿರುವೆ
ಭಕ್ತ ವೃಂದವು ಹಿಂದೆಬಾರದೇ ಇರಲೆಂದು
ನೆಗೆದು ಪೋಗುವ ಪಕ್ಷಿ ಏರಿ ಕುಳಿತೆ
ದಾಸರು ನಿನ್ನ ದ್ವಾರವ ಅಸರಿಸದಿರಲ್
ಒಳ್ಳೆಯೋಧರ ಕಾವಲಿಗಿರಿಸಿರುವೆ

**ತೇಟಗೀತೆ** : ಶಕ್ತಿಯುಳ್ಳವ ನಾದೆಯ್ಯ ಯಾವ ವಿಧದಿ
ನಾ ಕಾಣುವೆ ನಿನ್ನ ಜನಕನೆ ನೀರಜಾಕ್ಷ ॥ಭೂ॥

**ತಾತ್ಪರ್ಯ** : ಎಲ್ಲರೂ ಏನಾದರೂ ನಿನ್ನನ್ನು ಬೇಡಲು ಬರುತ್ತಾರೆಂದು ತಿಳಿದು ಕ್ಷೀರಸಾಗರದಲ್ಲಿ ಸೇರಿರುವೆ. ನಿನ್ನ ಸುತ್ತ ಸೇವಕರು ನಿಲ್ಲದಿರಲೆಂದು ಭಯದ ಸರ್ಪದ ಮೇಲೆ ಮಲಗಿರುವೆ. ನಿನ್ನ ಭಕ್ತ ಜನ ನಿನ್ನ ಹಿಂದೆ ಬರುವರೆಂದು, ಹಾರಿ ಪೋಗುವ ಪಕ್ಷಿಯನ್ನು ಹತ್ತಿ ಕುಳಿತಿರುವೆ. ದಾಸರು ನಿನ್ನ ದ್ವಾರವನ್ನು ಆಶ್ರಯಿಸುವರೆಂದು ಬಲವಾದ ಯೋಧರ ಕಾವಲಿರಿಸಿರುವೆ. ನೀನು ಬಹಳ ಶಕ್ತಿವಂತ. ನಾನು ನಿನ್ನ ಕಾಣುವ ಬಗೆ ಹೇಗೆ ತಂದೆ ನೀರಜಾಕ್ಷ.

91. ಸೀಸ : ನೀ ಕಥಲ್ ಚೆವುಲಲೋ ಸೋಕಂಟ ಮೊದಲುಗಾ
ಬುಲಕಾಂಕುರಮು ಮೇನ ಬುಟ್ಟುವಾಡು
ನಯಮೈನ ನೀ ದಿವ್ಯ ನಾಮಕೀರ್ತನ ಲೋನ
ಮಗ್ನುಡೈ ದೇಹಂಬು ಮರಚುವಾಡು
ಫಾಲಂಬು ತೋ ನೀದು ಪಾದಯುಗ್ಮ ಮುನಕು
ಪ್ರೇಮತೋದಂಡ ಮರ್ಪಿಂಚುವಾಡು
ಹಾ ಪುಂಡರೀಕಾಕ್ಷ ಹಾ ರಾಮ ಹರಿಯಂಚು
ವೇಡ್ಕತೋ ಗೇಕಲು ವೇಯುವಾಡು

ತೇಟಗೀತೆ : ಚಿತ್ತ ಕಮಲಂಬುನನಿನ್ನು ಜೇರ್ಚುವಾಡು
ನೀದು ಲೋಕಂಬು ನಂದುಂಡು ನೀರಜಾಕ್ಷ ॥ಭೂ॥

ಅನುವಾದ : ನಿನ್ನ ಕಥೆ ಕಿವಿಗಳಿಗೆ ಸೋಂಕಿದೊಡನೆ
ದೇಹದೊಳು ಪುಲಕಿತ ಗೊಳುವಾತ
ನಯವಾದ ನಿನ ದಿವ್ಯ ನಾಮ ಕೀರ್ತನೆಯಲಿ
ಮಗ್ನನಾಗುತ ದೇಹ ಮರೆಯುವಾತ
ಫಾಲದಿಂ ನಿನ್ನಯ ಪಾದ ಯುಗ್ಮಗಳಿಗೆ
ಪ್ರೇಮದಿಂ ದಂಡ ಸಮರ್ಪಿಸುವವ
ಹಾ ಪುಂಡರೀಕಾಕ್ಷ ಹಾ ರಾಮ ಹರಿಯೆಂದು
ಹರ್ಷದಿಂದಲಿ ಕೇಕೆ ಹಾಕುವಾತ

ತೇಟಗೀತೆ : ಚಿತ್ತ ಕಮಲದೊಳಗೆ ನಿನ್ನ ಹೊಂದುವಾತ
ನಿನ್ನ ಲೋಕದೊಳಿರುವನು ನೀರಜಾಕ್ಷ ॥ಭೂ॥

ತಾತ್ಪರ್ಯ : ನೀರಜಾಕ್ಷ ನಿನ್ನ ಕಥೆಯನ್ನು ಕೇಳಿದಾಕ್ಷಣ ರೋಮಾಂಚನ ಗೊಳ್ಳುವವನು, ನಿನ್ನ ಕೀರ್ತನೆಯನ್ನು ಹಾಡುತ್ತ ಮೈಮರೆಯುವವನು, ಮಸ್ತಕದಿಂದ ನಿನ್ನ ಪಾದಕ್ಕೆ ಪ್ರೇಮದಿಂದ ನಮಸ್ಕಾರ ಮಾಡುವವನು, 'ಹಾ, ರಾಮಾ' ಪುಂಡರೀಕಾಕ್ಷ 'ಹೇ ಹರಿ' ಎಂದು ಬೊಬ್ಬೆ ಹಾಕುವವನು, ಚಿತ್ತದೊಳು ನಿನ್ನ ಸ್ಮರಿಸುವಾತ, ಇವರೆಲ್ಲ ನಿನ್ನ ಲೋಕದಲ್ಲಿ ವಿಹರಿಸುವರು.

92\. **ಸೀಸ** : ನಿಗಮ ಗೋಚರ ನೇನು ನೀಕು ಮೆಪ್ಪುಗುನಟ್ಲು
ಲೆಸ್ಸಗಾ ಬೂಜಿಂಪ ಲೇನು ಸುಮ್ಮಿ
ನಾಕು ದೋಚಿನ ಭೂಷಣಮುಲು ಪೆಟ್ಟೆದನನ್ನ
ಕೌಸ್ತುಭಮಣಿ ನೀಕು ಗಲದು ಮುಂದೆ
ಭಕ್ಷ್ಯ ಭೋಜ್ಯಮುಲ ನರ್ಪಣಮು ಜೇಸದ ನನ್ನ
ನೀವು ಪೆಟ್ಟಿತಿವಿ ಸುಧ ನಿರ್ಜರುಲಕು
ಗಲಿಮಿ ಕೊದ್ದಿಗ ಗಾನುಕಲ ನೊಸಂಗೆದ ನನ್ನ
ಭಾರ್ಗವೀದೇವಿ ನೀಭಾರ್ಯಯಯ್ಯೆ

**ತೇಟಗೀತಿ** : ನನ್ನಿಗಲವಾಡ ನಿಖಿಲ ಲೋಕಾದಿ ಪತಿವಿ
ನೀಕು ಭೂಷಣಾದುಲು ಬೆಟ್ಟ ನೇರ್ವಲೇನು ॥ಭೂ॥

**ಅನುವಾದ** : ನಿಗಮ ಗೋಚರ ನೀನು ಮೆಚ್ಚುವಾ ತೆರದೊಳು
ಸರಿಯಾಗಿ ಪೂಜೆಯ ಮಾಡಲಾರೆ
ನನಗೆ ತೋಚಿದ ಭೂಷಣಗಳ ಕೊಡುವೆನೆನಲು
ಕೌಸ್ತುಭಮಣಿ ನಿನ್ನೊಳು ಮೊದಲೆ ಇಹುದು
ಭಕ್ಷ್ಯ ಭೋಜ್ಯಗಳರ್ಪಣೆಯ ಮಾಡುವೆನೆನಲು
ನೀ ನಿಟ್ಟೆ ಅಮೃತವ ದೇವಗಣಕೆ
ಉಳ್ಳಷ್ಟು ಕಾಣಿಕೆ ಅರ್ಪಿಸುವೆನೆನಲು
ಭಾರ್ಗವೀದೇವಿಯೇ ನಿನ್ನರ್ಧಾಂಗಿ

**ತೇಟಗೀತಿ** : ಎಲ್ಲ ಉಳ್ಳ ನಿಖಿಲ ಲೋಕದೊಡೆಯ ನೀನು
ನಿನಗೆ ಭೂಷಣಗೈಯ ಶಕ್ಯವಿಲ್ಲ ॥ಭೂ॥

**ತಾತ್ಪರ್ಯ** : ವೇದಗಳಿಂದ ಗುರುತಿಸಲ್ಪಡುವವನೆ, ನೀನು ಮೆಚ್ಚುವಂತೆ ಪೂಜೆಯನ್ನು ಮಾಡಲಾರೆ. ನನಗೆ ತೋಚಿದ ಉಡುಗೊರೆ ನಿನಗೆ ಕೊಡೋಣವೆಂದರೆ, ನಿನ್ನಲ್ಲಿ ಈಗಾಗಲೆ ಕೌಸ್ತುಭ ಮಣಿ ಇದೆ. ಭಕ್ಷ್ಯ ಭೋಜ್ಯಗಳನ್ನು ನಿನಗೆ ನೀಡೋಣ [illegible] ನೀನು ದೇವತೆಗಳಿಗೆ ಅಮೃತ ನೀಡಿರುವೆ. [illegible] ನಿನಗೆ ಕಾಣಿಕೆ ನೀಡೋಣವೆಂದರೆ, ಶ್ರೀ ಲಕ್ಷ್ಮೀದೇವಿಯೇ ನಿನ್ನ ಅರ್ಧಾಂಗಿ. ಎಲ್ಲವೂ ಇರುವ ನಿಖಿಲ ಲೋಕದೊಡೆಯ ನೀನು. ನಿನಗೆ ಉಡುಗೊರೆ ಕೊಡಲು ನಾನು ಶಕ್ತನಲ್ಲ.

93\. ಸೀಸ : ನವ ಸರೋಜದಳಾಕ್ಷ ನನ್ನು ಪೋಷಿಂಚೆಡಿ
ದಾತವು ನೀವಂಚು ಧೈರ್ಯ ಪಡಿತಿ
ನಾ ಮನಂಬುನ ನಿನ್ನು ನಮ್ಮಿ ನಂದುಕು ತಂಡ್ರಿ
ಮೇಲುನಾ ಕೊನರಿಂಚು ನೀಲದೇಹ
ಭಳಿ ಭಳಿ ನೀವಂಟಿ ಪ್ರಭುನೆಕ್ಕಡ ಜೂಡ
ಬುಡಮಿಲೋ ನೀ ಪೇರು ಪೊಗಡವಚ್ಚು
ಮುಂದು ಜೇಸಿನ ಪಾಪಮುಲು ನಶಿಂಪ ಜೇಸಿ
ನಿರ್ವಹಿಂಪುಮು ನನ್ನು ನೇರ್ಪುತೋಡ

ತೇಟಗೀತೆ : ಪರಮ ಸಂತೋಷಮಾಯೆನಾ ಪ್ರಾಣಮುಲಕು
ನೀ ಋಣಮು ತೀರ್ಚುಕೋನೇರ ನೀರಜಾಕ್ಷ ॥ಭೂ॥

ಅನುವಾದ : ನವಸರೋಜ ದಳಾಕ್ಷ ಎನ್ನ ಪೋಷಿಸುವಂತ
ದಾತನು ನೀಯೆಂದು ಧೈರ್ಯ ತಳೆದೆ
ಎನ್ನ ಮನದಿ ನಿನ್ನ ನಂಬಿದುದಕೆ ತಂದೆ
ಶುಭವನೊಸಗೆನಗೆ ನೀಲದೇಹ
ಭಲೆ ಭಲೆ ನಿನ್ನಂಥ ಪ್ರಭುವನೆಲ್ಲೂ ಕಾಣೆ
ಭುವಿಯೊಳ್ ನಿನ್ನ ಹೆಸರ ಹೊಗಳಲಹುದು
ಮುಂದೆ ಮಾಡಿದ ಪಾಪಗಳನು ಪರಿಹರಿಸಿ
ಸಲಹಬೇಕೆನ್ನನು ಜಾಣತನದಿ

ತೇಟಗೀತೆ : ಪರಮಸಂತೋಷವಾಯ್ತೆನ್ನ ಪ್ರಾಣಗಳಿಗೆ
ನಿನ್ನ ಋಣವ ತೀರಿಸಲರಿಯೆ ನೀರಜಾಕ್ಷ ॥ಭೂ॥

ತಾತ್ಪರ್ಯ : ಪದ್ಮಾಕ್ಷನೆ, ನನ್ನನ್ನು ಸಲಹುವವನು ನೀನೆಂದು ಧೈರ್ಯ ತಳೆದೆ. ಎನಗೆ ಒಳ್ಳೆಯದನ್ನು ಉಂಟುಮಾಡು. ನಿನ್ನಂಥ ಒಡೆಯನನ್ನು ನಾನು ಎಲ್ಲೂ ಕಾಣೆ. ಪ್ರಪಂಚದಲ್ಲಿ ನಿನ್ನ ಹೆಸರನ್ನು ಹೊಗಳುವುದು ಸಾರ್ಥಕ. ಹಿಂದೆ ಮಾಡಿದ ಪಾಪಗಳನ್ನು ಹೋಗಲಾಡಿಸಿ ನನ್ನನ್ನು ಕಾಪಾಡು, ಪರಮ ಸಂತೋಷವಾಯ್ತು ಎನಗೆ. ನಿನ್ನ ಋಣವನ್ನು ನಾನು ಯಾವರೀತಿ ತೀರಿಸಲಿ.

94. ಸೀಸ : ಫಣುಲ ಪುಟ್ಟಲಮೀದ ಬವ್ವಳಿಂಚಿನಯಟ್ಲು
ಪುಲುಲ ಗುಂಪುನ ಚೇರ ಬೋಯಿನಟ್ಲು
ಮಕರಿವರ್ಗಂಬುನ್ನ ಮಡುಗು ಜೊಚ್ಚಿನಯಟ್ಲು
ಗಂಗದಾಪುನ ನಿಂಡ್ಲು ಗಟ್ಟಿನಟ್ಲು
ಚಿದಲ ಭೂಮಿನಿ ಚಾಪಚೇತ ಬರಚಿನಟ್ಲು
ಓಟಿ ಬಿಂದೆಲಪಾಲು ನುಂಚಿನಟ್ಲು
ವೆರ್ರಿವಾನಿಕಿ ಬಹುವಿತ್ತ ಮಿಚ್ಚಿನಯಟ್ಲು
ಕಮ್ಮ ಗುಡಿಸಮಂದು ಕಾಲ್ಚಿನಟ್ಲು.

ತೇಟಗೀತೆ : ಸ್ವಾಮಿ ನೀ ಭಕ್ತವರುಲು ದುರ್ಜನುಲ ತೋಡ
ಚೆಲಿಮಿ ಚೇಸಿಯಟ್ಲಯಿನ ಚೇಟುವಚ್ಚು ॥ಭೂ॥

ಅನುವಾದ : ಫಣೆಯಿರೊ ಹುತ್ತದ ಮೇಲ್ ಪವಡಿಸುವಂತೆ
ಹುಲಿಯು ಗುಂಪನು ಸೇರಹೋಗುವಂತೆ
ಮೊಸಳೆಗಳ್ ವಾಸಿಸುವ ಮಡುವ ಹೊಕ್ಕಂತೆ
ನದಿಯು ಅಂಚಲಿ ಮನೆ ಕಟ್ಟಿದಂತೆ
ಗೆದ್ದಲು ಭೂಮಿಯೊಳ್ ಚಾಪೆ ಹರಡಿದಂತೆ
ತೂತು ಬಿಂದಿಗೆಯೊಳ್ ಹಾಲಿಟ್ಟಂತೆ
ಹುಚ್ಚನಿಗೆ ಬಹಳ ವಿತ್ತವನಿತ್ತಂತೆ
ತಾಳ ಗುಡಿಲ ಮದ್ದು ಸಿಡಿಸಿದಂತೆ,

ತೇಟಗೀತೆ : ಸ್ವಾಮಿ ನಿನ್ನ ಭಕ್ತವರರು ದುರುಳರೊಡನೆ
ಮೈತ್ರಿ ಮಾಡಿದುದಾದರೆ ಕೇಡುಬಹುದು ॥ಭೂ॥

ತಾತ್ಪರ್ಯ : ಹೇ ಸ್ವಾಮಿ, ಹಾವು ಇರುವ ಹುತ್ತದ ಮೇಲೆ ಮಲಗುವಂತೆ, ಹುಲಿಯು ಗುಂಪಿಗೆ ಹೋಗಿ ಸೇರುವಂತೆ, ಮೊಸಳೆ ಇರುವ ಮಡುವಲಿ ಮುಳುಗುವಂತೆ ನದಿಯು ಅಂಚಿನಲ್ಲಿ ಮನೆಯು ಕಟ್ಟುವಂತೆ, ಗೆದ್ದಲು ಭೂಮಿಯಲ್ಲಿ ಚಾಪೆ ಹರಡಿದಂತೆ, ತೂತು ಬಿಂದಿಗೆಯಲ್ಲಿ ಹಾಲು ತುಂಬಿಡುವಂತೆ ಹುಚ್ಚನಿಗೆ ಹೆಚ್ಚು ಹಣವ ಕೊಡುವಂತೆ, ತಾಳೆಗರಿಯ ಗುಡಿಸಿಲಿನಲ್ಲಿ ಸಿಡಿಮದ್ದು ಸಿಡಿಸಿದಂತೆ, ನಿನ್ನ ಭಕ್ತರು ದುರ್ಜನರೊಡನೆ ಮೈತ್ರಿಯನ್ನು ಬೆಳೆಸಿದುದೇ ಆದರೆ, ಖಂಡಿತ ಕೇಡನ್ನು ಅನುಭವಿಸಬೇಕಾಗುತ್ತದೆ.

95. ಸೀಸ : ದನುಜ ಸಂಹಾರ ಚಕ್ರಧರ ನೀಕು ದಂಡಂಬು
ಲಿಂದಿರಾಧಿಪ ನೀಕು ವಂದನಂಬು
ಪತಿತಪಾವನ ನೀಕು ಬಹು ನಮಸ್ಕಾರಮುಲ್
ನೀರಜಾತದಳಾಕ್ಷ ನೀಕು ಶರಣು
ವಾಸವಾರ್ಚಿತ ಮೇಘವರ್ಣ ನೀಕು ಶುಭಂಬು
ಮಂದರಧರ ನೀಕು ಮಂಗಳಂಬು
ಕಂಬುಕಂಧರ ಶಾರ್ಙ್ಗಧರ ನೀಕು ಭದ್ರಂಬುನಿ
ದೀನರಕ್ಷಕ ನೀಕು ದಿಗ್ವಿಜಯಮು

ತೇಟಗೀತೆ : ಸಕಲವೈಭವಮುಲು ನೀಕು ಸಾರ್ವಭೌಮ
ನಿತ್ಯ ಕಲಾಣಮುಲುನಗು ನೆಪ್ಪುಡು ॥ಭೂ॥

ಅನುವಾದ ; ದನುಜ ಸಂಹಾರ ಚಕ್ರಧರ ನಿಂಗೆರಗುವೆ
ಇಂದಿರಾಧಿಪ ನಿನಗೆ ನನ್ನ ನಮನ
ಪತಿತ ಪಾವನ ನಿಂಗೆ ಬಹು ನಮಸ್ಕಾರವೈ
ನೀರ ಜಾತದಳಾಕ್ಷ ನಿನಗೆ ಶರಣು
ವಾಸವಾರ್ಚಿತ ಮೇಘ ವರ್ಣ ನಿನಗೆ ಶುಭವು
ಮಂದರ ಗಿರಿಧರ ನಿನಗೆ ಒಳಿತು
ಕಂಬುಕಂಧರ ಧನುರ್ಧರ ನಿನಗೆ ಸುಖವು
ದೀನರಕ್ಷಕ ನಿಂಗೆ ದಿಗ್ವಿಜಯವು.

ತೇಟಗೀತೆ : ಸಕಲ ವೈಭವವು ನಿನಗೆ ಸಾರ್ವಭೌಮ
ನಿತ್ಯ ಕಲ್ಯಾಣ ಜರುಗುವುದು ಸದಾ ನಿನಗೆ ॥ಭೂ॥

ತಾತ್ಪರ್ಯ : ದನುಜ ಸಂಹಾರ, ಚಕ್ರಧರ, ಇಂದಿರಾರಮಣ, ಪತಿತ ಪಾವನ, ನೀರಜಾಕ್ಷ, ನಿನಗೆ ಅನಂತಾನಂತ ನಮಸ್ಕಾರಗಳು. ವಾಸವಾರ್ಚಿತ ಮೇಘವರ್ಣ ಮಂದರಗಿರಿಧರನೆ, ಕಂಬು ಕಂದರ ಧನುರ್ಧರ ನಿನಗೆ ಶುಭವಾಗಲಿ, ಸುಖವಾಗಲಿ, ದಿಗ್ವಿಜಯ ಉಂಟಾಗಲಿ, ಸಕಲ ವೈಭವವೂ ನಿನಗಿರಲಿ, ನಿತ್ಯಕಲ್ಯಾಣವು ಜರುಗಲಿ.

96. ಸೀಸ : ಮತ್ಸ್ಯಾವತಾರಮೈ ಮಡುಗುಲೋಜೊಚ್ಚಿ
ಸೋಮಕಾಸುರುದ್ರುಂಚಿ ಚೋದ್ಯಮುಗನು
ದೆಚ್ಚಿ ವೇದಮುಲೆಲ್ಲ ಮೆಚ್ಚ ದೇವತಲೆಲ್ಲ
ಬ್ರಹ್ಮಕಿಚ್ಚಿತಿವಿ ನೀವು ಭಳಿಯನಂಗ
ನಾವೇದಮುಲನಿಯ್ಯ ನಾಚಾರನಿಷ್ಠಲ
ನನುಭವಿಂಚುಚುನುಂಡು ರವನಿಜನುಲು
ಸಕಲ ಪಾಪಮುಲು ಸಮಸಿಪೋವುನಟಂಚು
ಮನುಜುಲಂದುರು ನೀದು ಮಹಿಮದೆಲಿಯ

ತೇಟಗೀತಿ : ಕುಂದುರರವಿಂದ ನಯನ ನೀ ಯುನಿಕಿ ದೆಲಿಯ
ವಾರಲಕು ವೇಗ ಮೋಕ್ಷಂಬು ವಚ್ಚುನಪುಡು ||ಭೂ||

ಅನುವಾದ : ಮತ್ಸ್ಯಾವತಾರದೊಳು ಮಡಿವಿನೊಳ ಹೊಕ್ಕು
ಸೋಮಕಾಸುರ ಕೊಂದು ವಿಸ್ಮಯದೊಳು
ತಂದು ವೇದವ ದೇವತೆಗಳು ಮೆಚ್ಚುವಂತೆ
ಬ್ರಹ್ಮಗಿತ್ತೆ ಅದನು ಪ್ರೀತಿಯಿಂದ
ಆ ವೇದಗಳನೀಡೆ ಆಚಾರ ನಿಷ್ಠೆಯ
ಅನುಭವಿಸುತಿರುವ ರವನಿ ಜನರು
ಸಕಲ ಪಾಪಗಳು ಸವೆದು ಹೋಗುವುವೆನುತ
ಮನುಜರೆಲ್ಲರು ನಿನ್ನ ಮಹಿಮೆ ತಿಳಿಯೆ.

ತೇಟಗೀತಿ : ಕುಂದುರರವಿಂದ ನಯನ ನಿನ್ನಿರವು ತಿಳಿಯ
ವಂತಹ ಜನಕೆ ಬೇಗನೆ ಮೋಕ್ಷಲಭಿಸು ||ಭೂ||

ತಾತ್ಪರ್ಯ : ಮತ್ಸ್ಯಾವತಾರವನು ತಾಳಿ, ಮಡುವಿನೊಳಗೆ ಪ್ರವೇಶಿಸಿ, ಸೋಮಕಾಸುರನನ್ನು ಕೊಂದು, ವೇದಗಳನ್ನು ತಂದು ಬ್ರಹ್ಮನಿಗೆ ಪ್ರೀತಿಯಿಂದ ಕೊಟ್ಟೆ. ಆದರಿಂದ ಭೂಮಿಯಲ್ಲಿ ಜನರು ನೇಮ ನಿಷ್ಠಾದಿಗಳನ್ನು ಆಚರಿಸುತ್ತಿದ್ದಾರೆ. ನಿನ್ನನ್ನು ನಂಬಿ ಧ್ಯಾನಿಸಲು ಸಕಲ ಪಾಪಗಳು ಸವೆದು ಹೋಗುತ್ತವೆ. ಪರಮಾತ್ಮ ಪದ್ಮಾಕ್ಷ, ನೀನಿರುವುದು ಜನಕೆ ತಿಳಿದರೆ ಬೇಗ ಮೋಕ್ಷ ಪ್ರಾಪ್ತಿಯಾಗುವುದು.

97. ಸೀಸ : ಕೂರ್ಮಾವತಾರವೈ ಕುದರಂಬು ಕ್ರಿಂದನು
ಕೋರ್ಕೆತೋನುಂಡವಾ ಕೊಮರುಮಿಗುಲ
ವಾರಾಹಮೂರ್ತಿವೈ ವನಭೂಮುಲಂಜೊಚ್ಚಿ
ಶಿಕ್ಷಿಂಪವಾ ಹಿರಣ್ಯಾಕ್ಷನವುಡು
ನರಸಿಂಹಮೂರ್ತಿವೈ ನರಭೋಜನು ಹಿರಣ್ಯ
ಕಶಪುನಿ ದ್ರುಂಚವಾ ಕ್ರಾಂತಿವೀರ
ವಾಮನ ರೂಪಿವೈ ವಸುಧಲೋ ಬಲಿಚಕ್ರ
ವರ್ತಿನಣಂಪವಾ ವೈರಮುಂಚಿ

ತೇಟಗೀತಿ : ಯಿಟ್ಟಿ ಪನುಲೆಲ್ಲ ಚೇಯಗಾ ನೆವ್ವರಿಕಿನಿ
ದಗುನು ನರಸಿಂಹ ನೀಕಿದಿ ದಗುನಗಾಕ ॥ಭೂ॥

ಅನುವಾದ : ಕೂರ್ಮಾವತಾರದೊಳ್ ಕುಂದರದಡಿಯಲಿ
ಪ್ರೀತಿಯಿಂದಿರುವೆ ನೀ ಒಪ್ಪುವಂತೆ
ವಾರಾಹ ಮೂರ್ತಿಯಾಗಿ ವನಭೂಮಿಯು ಹೊಕ್ಕು
ಶಿಕ್ಷಿಸಿದೆಯಲ್ಲ ಹಿರಣ್ಯಾಕ್ಷನನು
ನರಸಿಂಹಮೂರ್ತಿಯಾಗಿ ನರಭಕ್ಷ ಹಿರಣ್ಯ
ಕಶಿಪನ ಕೊಂದೆಯೋ ಶೌರ್ಯಮಿಂಚಿ
ವಾಮನಮೂರ್ತಿಯಾಗಿ ಭುವಿಯೊಳ್ ಬಲಿಚಕ್ರ
ವರ್ತಿಯು ತುಳಿದೆಯೊ ವೈರ ತಳೆದು

ತೇಟಗೀತೆ : ಇಂತ ಕೆಲಸಗಳನು ಮಾಡಲಾರಿಗೆಂತು
ಸಾಧ್ಯ ನರಸಿಂಹ ನಿನಗೆ ಮಾತ್ರ ಇದು ಸಾಧ್ಯ ॥ಭೂ॥

ತಾತ್ಪರ್ಯ : ಕೂರ್ಮಾವತಾರವೆತ್ತಿ ಬೆಟ್ಟದಡಿಯಲ್ಲಿ ಪ್ರೀತಿಯಿಂದ ವಾಸ ಮಾಡಿದೆ. ವರಾಹಮೂರ್ತಿಯಾಗಿ ವನಭೂಮಿಗಳಲ್ಲಿ ಸಂಚರಿಸಿ ಹಿರಣ್ಯಾಕ್ಷನನ್ನು ಕೊಂದೆ. ನರಸಿಂಹಮೂರ್ತಿಯಾಗಿ ನರಭಕ್ಷಕ ಹಿರಣ್ಯಕಶ್ಯಪನನ್ನು ಕೊಂದೆ. ವಾಮನಮೂರ್ತಿಯಾಗಿ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದೆ. ಈ ಅದ್ಭುತವಾದ ಕೆಲಸಗಳು ನಿನ್ನಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ.

98. ಸೀಸ : ಲಕ್ಷ್ಮೀಶ ನೀ ದಿವ್ಯ ಲಕ್ಷಣ ಗುಣಮುಲ
ವಿನಜಾಲ ಕೆಪ್ಪುಡು ವೆರ್ರಿನೈತಿ
ನಾ ವೆರ್ರಿ ಗುಣಮುಲು ನಯಮುಗಾ ಖಂಡಿಂಚಿ
ನನ್ನು ರಕ್ಷಿಂಚುಮೋ ನಳಿನನೇತ್ರ
ನಿನ್ನು ನೇ ನಮ್ಮಿತಿನಿತರ ದೈವಮುಲ ನೇ
ನಮ್ಮಲೇದಿಪ್ಪುಡು ನಾಗಶಯನ
ಕಾಪಾಡಿನನು ನೀವೆ ಕಷ್ಟಪೆಟ್ಟಿನ ನೀವೆ
ನೀಪಾದ ಕಮಲಮುಲ್ ನಿರತನೇನು.

ತೇಟಗೀತೆ : ನಮ್ಮಿಯುನ್ನಾನು ನೀಪಾದ ನಳಿನ ಭಕ್ತಿ
ವೇಗ ದಯಚೇಸಿ ರಕ್ಷಿಂಚು ವೇದ ವೇದ್ಯ ॥ಭೂ॥

ಅನುವಾದ : ಲಕ್ಷ್ಮೀಶ ನಿನದಿವ್ಯ ಲಕ್ಷಣ ಗುಣಗಳ
ಕೇಳಲಾರದೆ ಸದಾ ಹುಚ್ಚನಾದೆ
ನನ್ನ ಹುಚ್ಚು ಗುಣವ ನಯವಾಗಿ ಖಂಡಿಸಿ
ನನ್ನ ರಕ್ಷಿಸು ನೀನು ನಳಿನನೇತ್ರ
ನಿನ್ನ ನಾ ನಂಬಿದೆ ಇತರ ದೈವಗಳ ನಾ
ನಂಬಲಿಲ್ಲವು ಈಗ ನಾಗಶಯನ
ಕಾಪಾಡಿದರು ನೀನೆ ಕಷ್ಟಕೊಟ್ಟರು ನೀನೆ
ನಿನ್ನ ಪಾದ ಕಮಲ ನಿರತನಾನು

ತೇಟಗೀತೆ : ನಂಬಿರುವೆ ನಿನ್ನಯ ಚರಣ ನಳಿನ ಭಕ್ತಿ
ಬೇಗ ದಯಮಾಡಿ ರಕ್ಷಿಸೈ ವೇದ ವೇದ್ಯ ॥ಭೂ॥

ತಾತ್ಪರ್ಯ : ಲಕ್ಷ್ಮೀಶನೆ ನಿನ್ನ ದಿವ್ಯ ಗುಣಗಳನ್ನು ಸದಾ ನನ್ನ ಕಿವಿಗಳಲ್ಲಿ ಕೇಳಬೇಕೆಂಬ ಹಂಬಲದಿಂದ ಹುಚ್ಚನಾಗಿರುವೆ. ನನ್ನ ಈ ಹುಚ್ಚು ಗುಣವನ್ನು ಖಂಡಿಸಿ ನನ್ನನ್ನು ರಕ್ಷಿಸು. ಇತರ ದೈವಗಳನ್ನು ನಾನು ನಂಬಲಿಲ್ಲ. ನಿನ್ನನ್ನೇ ನಂಬಿರುವೆನು. ನೀನು ಕಾಪಾಡಿದರೂ ಸರಿ, ಕಷ್ಟಕೊಟ್ಟರೂ ಸರಿ, ನಾನು ಮಾತ್ರ ನಿನ್ನ ಧ್ಯಾನಮಗ್ನನಾಗಿರುವೆನು. ನಿನ್ನ ಚರಣ ಕಮಲವನ್ನು ಪೂರ್ಣವಾಗಿ ನಂಬಿರುವ ನನ್ನ ಬೇಗ ದಯಮಾಡಿ ರಕ್ಷಿಸು.

99. ಸೀಸ : ಅಮರೇಂದ್ರ ವಿನುತ ನಿನ್ನನುಸರಿಂಚಿನವಾರು
ಮುಕ್ತಿಬೊಂದಿರಿ ವೇಗ ಮುದಮು ತೋಡ
ನೀಪಾದ ಪದ್ಮಮುಲ್ ನೆರನಮ್ಮಿಯುನ್ನಾನು
ನಾಕು ಮೋಕ್ಷಮುನಿಮ್ಮು ನಳಿನನೇತ್ರ
ಕಾಚಿರಕ್ಷಿಂಚುನನ್ನು ಗಡತೇರ್ಚು ವೇಗವೇ
ನೀ ಸೇವಕುನಿ ಚೇಯು ನಿಶ್ಚಯಮುಗ
ಗಾಪಾಡಿನನು ನೀಕು ಗೈಂಕರ್ಯಪರುಡನೈ
ಚೆಲಗಿ ನೀ ಪನುಲನು ಚೇಯುವಾಡ.

ತೇಟಗೀತೆ : ನನುಚು ಪಲುಮಾರು ವೇಡೆದ ನಬ್ಜನಾಭ
ನಾಕು ಪ್ರತ್ಯಕ್ಷಮಗು ನಿನ್ನೆ ನಮ್ಮಿನಾನು ||ಭೂ||

ಅನುವಾದ : ಅಮರೇಂದ್ರ ವಿನುತ ನಿನ್ನ ನಂಬಿದವರು
ಮುದದೊಳು ಮುಕ್ತಿ ಪಡೆದರು ಬೇಗ
ನಿನ್ನ ಪಾದಕಮಲ ನೆರೆನಂಬಿದೆನೊ ನಾನು
ಎನಗೆ ಮೋಕ್ಷವ ನೀಡು ನಳಿನನೇತ್ರ
ಕಾದು ರಕ್ಷಿಸು ಎನ್ನ ಕಡೆಹಾಯ್ಸು ಬೇಗನೆ
ನಿನ್ನ ಸೇವಕನಾಗಿ ಸ್ವೈ ನಿಶ್ಚಯದಿ
ಕಾಪಾಡಿದರೆ ನಿನ್ನ ಕೈಂಕರ್ಯ ಪರನಾಗಿ
ಒಪ್ಪಿ ನಿನ್ನಯ ಸೇವೆ ಗೈವೆ ನಾನು

ತೇಟಗೀತೆ : ಎನುತ ಬಹುವಿಧ ಭಜಿಸುವೆ ನಬ್ಜನಾಭ,
ಎನಗೆ ಪ್ರತ್ಯಕ್ಷವಾಗೈ ನಿನ್ನೆ ನಂಬಿರುವೆನೊ ||ಭೂ||

ತಾತ್ಪರ್ಯ : ದೇವೇಂದ್ರನಿಂದ ಪೂಜಿಸಲ್ಪಡುವವನೆ, ನಿನ್ನ ಮೊರೆ ಹೊಕ್ಕವರು ಸಂತಸದಿ, ಮುಕ್ತಿ ಪಡೆದಿರುವರು. ನಿನ್ನ ಪಾದಕಮಲವನ್ನು ಬಿಡದೆ ನಂಬಿರುವೆನು ನಾನು. ನಳಿನ ನೇತ್ರ, ಎನಗೆ ಮೋಕ್ಷವನ್ನು ಕರುಣಿಸು. ನಿನ್ನ ಸೇವಕ ನಾಗಿ ನಿಯಮಿಸಿಕೊ. ನಿನ್ನ ಕೈಂಕರ್ಯಪರನಾಗಿ ನಿನ್ನ ಸೇವೆಯನ್ನು ತಪ್ಪದೆ ಮಾಡುವೆನು. ಈ ರೀತಿ ಅನೇಕ ವಿಧದಲ್ಲಿ ನಿನ್ನನ್ನು ಪ್ರಾರ್ಥಿಸುವೆನು. ಪ್ರತ್ಯಕ್ಷವಾಗಿ ಎನ್ನನ್ನು ರಕ್ಷಿಸು.

100. ಸೀಸ : ಶೇಷಪ್ಪಯನು ಕವಿ ಚೆಪ್ಪಿನ ಪದ್ಯಮುಲ್
ಚೆವುಲಕಾನಂದಮೈ ಚೆಲುಗು ಚುಂಡು
ನೇಮನುಜುಂಡೈನ ನೆಲಿಮಿ ನೀ ಶತಕಂಬು
ಭಕ್ತಿತೋ ವಿನ್ನ ಸತ್ಪಲಮು ಗಲುಗು
ಚೆಲಗಿ ಈ ಪದ್ಯಮುಲ ಚೇರ್ಚಿ ವ್ರಾಸಿನವಾರು
ಕಮಲಾಕ್ಷು ಕರುಣಿಸನು ಗಾಂಚುರೆಪುಡು
ನಿಂಪುಗಾಬುಸ್ತಕಂ ಬೆಪ್ರುಡು ಪೂಜಿಂಚಿನ
ದುರಿತ ಚಾಲಂಬುಲು ದೊಲಗಿ ಪೋವು

ತೇಟಗೀತಿ : ನಿದ್ಧಿ ಪುಣ್ಯಾಕರಂಬನಿ ಯೆಪುಡು ಜನುಲು
ಕಷ್ಟಮನುಕ ಪಠಿಂಚಿನಂ ಗಲುಗು ಮುಕ್ತಿ
ಭೂಷಣ ವಿಕಾಸ ಶ್ರೀ ಧರ್ಮಪುರ ನಿವಾಸ
ದುಷ್ಟ ಸಂಹಾರ ನರಸಿಂಹ ದುರಿತ ದೂರ

ಅನುವಾದ : ಶೇಷಪ್ಪ ಕವಿ ತಾನು ಹೇಳಿದ ಪದ್ಯಗಳು
ಕರ್ಣಾನಂದವೆನಿಸಿ ಒಪ್ಪುತಿಹುದು
ಯಾ ಮನುಜನೊಲುಮೆ ಯಿಂದೀ ಶತಕವನು
ಭಕ್ತಿಯಿಂದಾಲಿಸೆ ಶುಭವು ಲಭಿಸು
ಮುಂದದಿ ಈ ಪದ್ಯಗಳ ಸೇರಿಸಿ ಬರೆದವ
ಕಮಲಾಕ್ಷ ಕರುಣೆಯ ಪೊಂದುವವನು
ಇಂಪಾಗಿ ಪುಸ್ತಕವನು ಪೂಜಿಸಲು ಸದಾ
ದುರಿತ ಜಾಲಗಳೆಲ್ಲ ತೊಲಗಿ ಪೋಗು

ತೇಟಗೀತಿ : ಇದನು ಪುಣ್ಯಾಕರವೆನುತ ಜನರು ಸತತ
ಕಷ್ಟವೆನದೆ ಪಠಿಸಿದರೆ ದೊರೆಗು ಮುಕ್ತಿ
ಭೂಷಣ ವಿಕಾಶ ಶ್ರೀ ಧರ್ಮಪುರ ನಿವಾಸ
ದುಷ್ಟ ಸಂಹಾರ ನರಸಿಂಹ ದುರಿತ ದೂರ

ತಾತ್ಪರ್ಯ : ಶೇಷಪ್ಪ ಕವಿ ಹೇಳಿದ ಈ ಪದ್ಯಗಳು ಕಿವಿಗಳಿಗೆ ಆನಂದವನ್ನುಂಟುಮಾಡುವುವು. ಪ್ರೀತಿಯಿಂದ ಯಾವ ಮನುಜನೇ ಆಗಲಿ, ಈ ಶತಕವನ್ನು ಭಕ್ತಿಯಿಂದ ಆಲಿಸಿದರೆ ಒಳ್ಳೆಯ ಫಲಗಳು ಉಂಟಾಗುವುವು. ಈ ಪದ್ಯಗಳ ಜತೆಗೆ ಇನ್ನಷ್ಟು ಸೇರಿಸಿ ಬರೆದರೆ ಕಮಲಾಕ್ಷನ ಕರುಣೆಯನ್ನು ಪಡೆಯುತ್ತಾರೆ. ಈ ಪುಸ್ತಕವನ್ನು ಸದಾ ಪೂಜಿಸಿದರೆ ದುರಿತ ಜಾಲಗಳು ತೊಲಗಿ ಹೋಗುವುವು. ಇದು ಪುಣ್ಯಾಕರವೆಂದು ಜನರು ಕಷ್ಟವೆನ್ನದೆ ಪಠಿಸಿದರೆ, ಮುಕ್ತಿ ಲಭಿಸುತ್ತದೆ. ೦

# ಪ್ರಸ್ತಾವನೆ

ಯೋಗಿ ವೇಮನನು, ತೆಲುಗು ಭಾಷೆಯನ್ನು ಮಾತನಾಡುವ ಆಂಧ್ರ ಪ್ರದೇಶ, ಕರ್ನಾಟಕ, ತಮಿಳುನಾಡಿನಲ್ಲಿ ವಾಸಿಸುವ ಜನರಲ್ಲಿ ಬಹಳ ಜನಪ್ರಿಯನಾಗಿದ್ದಾನೆ. ಈತನ ಲಲಿತ ಸುಂದರವಾದ ಪದ್ಯಗಳು ಜನರ ಮನಸ್ಸನ್ನು ಸೂರೆಗೊಂಡಿವೆ. ಜನರ ಮನದಲ್ಲಿ ಆವನ ಹೆಸರು ಅಳಿಯದೆ ಉಳಿಯುವಲ್ಲಿ ಆವನ ಪದ್ಯಗಳು ಕಾರಣವಾಗಿದೆ. ಈತನು ಒಬ್ಬ ವರಕವಿ.

ವೇಮನು ಛಂದಸ್ಸನ್ನು ಅಭ್ಯಸಿಸಿ, ಕವಿಯಾಗಿ ಹೆಸರು ಗಳಿಸಬೇಕೆಂಬ ಅಭಿಲಾಷೆಯಿಂದ ಗ್ರಂಥ ಬರೆದವನಲ್ಲ. ಈತನ ಸತ್ಯಾನ್ವೇಷಣೆ, ಸತ್ಯಸಂದತೆ, ಪರಿಪಕ್ವತೆ, ವಿರಕ್ತಿ, ಪರಮಾತ್ಮನ ಸಾಕ್ಷಾತ್ಕಾರ ಇವು ವೇಮನನ್ನು ವರಕವಿಯಾಗಿ ಸಿದವು. ವೇಮನ ಯೋಚಿಸಿ ಒಂದೆಡೆಯಲ್ಲಿ ಕುಳಿತು, ಇತರ ಗ್ರಂಥಗಳಿಂದ ಉತ್ತೇಜನಗೊಂಡು ಪದ್ಯಗಳನ್ನು ರಚಿಸಿದವನಲ್ಲ. ಆಗಿನ ಕಾಲದ ಸಾಮಾಜಿಕ, ಧಾರ್ಮಿಕ ನ್ಯೂನತೆ, ಕೌಟುಂಬಿಕ ಎಡರು ತೊಡರು, ರಾಜಕೀಯ ರೀತಿನೀತಿ, ಮತಾಂಧತೆ ಇವುಗಳನ್ನು ಕಣ್ಣಾರೆ ಕಂಡು ಮನನೊಂದು ಯಾರ ಹಂಗೂ, ಭಯವೂ ಇಲ್ಲದೆ ಸತ್ಯವನ್ನು ಪದ್ಯರೂಪದಲ್ಲಿ ಹೇಳಿದ್ದಾನೆ. ಈತನ ಪದ್ಯಗಳು ಬಹುತೇಕ ಆಟವೆಲದಿ ಛಂದಸ್ಸಿನಲ್ಲಿವೆ. ಕೆಲವನ್ನು ತೇಟಗೀತೆ ಮತ್ತು ಕಂದ ಛಂದಸ್ಸಿನಲ್ಲಿ ಹೇಳಿದ್ದಾನೆ. ಈತನು ನಿರಾಯಾಸವಾಗಿ ಛಂದೋಬದ್ಧವಾಗಿ ವಿಷಯ ನಿರೂಪಣೆ ಮಾಡಿದ್ದಾನೆ.

ಈತನು ಸ್ವಹಸ್ತದಿಂದ ಗ್ರಂಥವನ್ನು ರಚಿಸಿದಂತೆ ಕಾಣುವುದಿಲ್ಲ. ಸಮಾಜದ ಆಗುಹೋಗುಗಳನ್ನು, ರೀತಿ ನೀತಿಗಳನ್ನು ಸತ್ಯಕ್ಕೆ ಹೋಲಿಸಿ ತನ್ನದೇ ಆದ ತೀರ್ಮಾನಗಳನ್ನು ತಿಳುಹಿಸಿದ್ದಾನೆ. ಈತನು ಹೇಳಿದ ಮಾತುಗಳನ್ನು ಈತನ ಶಿಷ್ಯರು ಬರೆದಂತೆ ಕಂಡುಬರುತ್ತದೆ. ಕೆಲವು ಬಾರಿ ಹೋಲಿಕೆಗಳು ಬೇರೆ ಬೇರೆ ಪದ್ಯಗಳಲ್ಲಿ ಮರುಕಳಿಸಿರುವುದು ಇದನ್ನು ತೋರಿಸುತ್ತದೆ. ಮಹನೀಯರು, ದಾರ್ಶನಿಕರು ಇತರರಿಗೆ ನೇರವಾಗಿ ಬೋಧಿಸುವ ಬದಲು ತಮಗೆ ತಾವೇ ಬೋಧಿಸಿ ಕೊಳ್ಳುತ್ತಾರೆ. ಇದರಿಂದ ಉತ್ತೇಜಿತರಾಗಿ ಜನರು ಅನುಕರಣೆ ಮಾಡುತ್ತಾರೆ. ವೇಮನನು ಇದಕ್ಕೆ ಹೊರತಲ್ಲ. ಈತನು ಪರವನ್ನು ಸಾಧಿಸಿದ ಪರಮಹಂಸ. ತಾನು ಹೇಳಿದ ವಿಷಯಗಳನ್ನು ಪದ್ಯರೂಪದಲ್ಲಿ ಮೊದಲ ಎರಡು ಸಾಲುಗಳಲ್ಲಿ ರೂಪಗೊಂಡು ಮೂರನೆಯ ಸಾಲಿನಲ್ಲಿ ಜನರ ಮನದಲ್ಲಿ ಆ ವಿಷಯ ಹೆಚ್ಚು ಕಾಲ ಉಳಿಯಲು ಒಂದು ಹೋಲಿಕೆಯನ್ನು ಕೊಟ್ಟು ನಾಲ್ಕನೇ ಸಾಲಿನಲ್ಲಿ ತನ್ನನ್ನು ತಾನೆ ಸಂಬೋಧಿಸಿಕೊಂಡಿದ್ದಾನೆ. ನಾಲ್ಕನೆಯ ಸಾಲಿನಲ್ಲಿ ಬರುವ

ವಿಶ್ವದಾಭಿರಾಮ ವಿನುರ ವೇಮ ಎನ್ನುವಲ್ಲಿ ವಿಶ್ವಕ್ಕೆ ಮಂಗಳಕರವಾದುದನ್ನು ಕೇಳೊ ವೇಮ ಎಂದಿರಬಹುದೇ ? ಇದಕ್ಕೆ ಸರಿಯಾದ ಅರ್ಥ ಕೊಡುವುದು ಕಷ್ಟ.

ಈತನ ಭಾಷಾಶೈಲಿ, ವಿದ್ವಾಂಸರಲ್ಲದ ಸಾಮಾನ್ಯ ಜನತೆಯೂ ಅರ್ಥಮಾಡಿಕೊಳ್ಳಬಹುದಾದ ಸರಳ ಪದಗಳಿಂದ ಕೂಡಿವೆ. ವೇಮನನ ಪದ್ಯಗಳು ಸುಮಾರು 4000 ಎಂಬುದಾಗಿ ರಚನಕಾರರು ಅಭಿಪ್ರಾಯ ಪಡುತ್ತಾರೆ. ಈತನ ಕಾಲವನ್ನು ನಿಖರವಾಗಿ ಹೇಳುವ ಆಧಾರಗಳು ಇದ್ದಂತೆ ಕಂಡು ಬರುವುದಿಲ್ಲ. ಸುಮಾರು ಹದಿನೇಳನೇ ಶತಮಾನದ ಅಂತ್ಯ ಭಾಗದಲ್ಲಿ ಜೀವಿಸಿದ್ದಂತೆ ಅನೇಕರು ಭಾವಿಸಿದ್ದಾರೆ. ಈತನು ಶ್ರೀಮಂತ ವಂಶದಲ್ಲಿ ಹುಟ್ಟಿ ಬೆಳೆದವನು. ಆದರೂ ದಲಿತರ, ಬಡವರ, ದೀನರ ಸ್ಥಿತಿಗತಿ, ಕಷ್ಟ ಕಾರ್ಪಣ್ಯಗಳನ್ನು ಕಣ್ಣಾರೆ ಕಂಡು ಅವರ ಬಗ್ಗೆ ಅನುಕಂಪವನ್ನು ವ್ಯಕ್ತಪಡಿಸಿದವನು. ಈತನು ದಯಾಪರನು, ವಿವೇಚನಾಶೀಲನು, ಧಾತನೂ ಆಗಿದ್ದನು. ಕೊನೆಗೆ ಕಾರಣಾಂತರಗಳಿಂದ ಕಷ್ಟ ಪರಂಪರೆಗಳಿಗೆ ಸಿಲುಕಿದವನಾಗಿ ಸಂಸಾರವನ್ನು ತೊರೆದು ಅದ್ವೈತ ಸಿದ್ಧಾಂತದಲ್ಲಿ ತುತ್ತ ತುದಿಯನ್ನೇರಿ ಯೋಗೀಶನೂ ಪರಮಹಂಸನೂ ಆದನು. ಸಮಾಜದಲ್ಲಿನ ಶ್ರೀಮಂತಿಕೆಯ ಆಡಂಬರ ಕಪಟ, ಮತಾಂಧತೆ, ಲೋಭ, ದುರ್ಗುಣ, ಮೂರ್ಖತನ, ಅಜ್ಞಾನ ಇವುಗಳನೆಲ್ಲಾ ಖಂಡಿಸಿ, ಜೀವನ ಮೌಲ್ಯಗಳ ನಿಜರೂಪವನ್ನು ಜನರಿಗೆ ತಿಳಿಯ ಹೇಳಿದ್ದಾನೆ.

ಈತನ ವಿಚಾರಧಾರೆಯಲ್ಲಿನ ಕೆಲವು ಪದ್ಯಗಳನ್ನು ನೋಡೋಣ. ಲೋಭಿತನವನ್ನು ಕುರಿತು ವೇಮನನು ಈ ರೀತಿ ಹೇಳುತ್ತಾನೆ. ಲೋಭಿಯಂತೂ ಕೊಡುವುದಿಲ್ಲ. ಆದರೆ ದಾನ ಕೊಡುವವನ ಹತ್ತಿರ ಲೋಭಿ ಇದ್ದರೆ, ದಾನ ಮಾಡುವವನನ್ನು ತಡೆಯುತ್ತಾನೆ. ಇದಕ್ಕೆ ಒಂದು ಹೋಲಿಕೆಯನ್ನ ಕೊಡುತ್ತಾನೆ. ಕಲ್ಪತರುವ ಕೆಳಗೆ ಮುಳ್ಳಿನಿಂದ ಕೂಡಿದ ಗಜ್ಜುಗದ ಗಿಡ ಬೆಳೆದರೆ ಆ ಕಲ್ಪವೃಕ್ಷದಿಂದ ಇತರರಿಗೆ ಪ್ರಯೋಜನವಾಗುವುದಿಲ್ಲ.

ಕೊಡುವವನ ಸನಿಹ ಕೊಡದವನು ಇರುತಿರೆ  
ಜೀವ ಬಿಡುವ ಕೊಡುಗೆ ಸಾಗಗೊಡನು  
ಕಲ್ಪತರುವ ಕೆಳಗೆ ಗಜ್ಜುಗ ಬೆಳೆದಂತೆ  
ವಿಶ್ವದಾಭಿರಾಮ ಕೇಳೈ ವೇಮ

ಲೋಭಿಯ ಮನೆಯಲ್ಲಿ ಯಾರಾದರೂ ಸತ್ತರೆ ಶವ ಸಂಸ್ಕಾರಕ್ಕೆ ವೆಚ್ಚ ಮಾಡಿ ಮನೆಗೆ ಬಂದು ಬಿಕ್ಕಿ ಬಿಕ್ಕಿ ಅಳುತ್ತಾನೆ ಎಂಬುದಾಗಿ ಅಣಕ ಮಾಡಿದ್ದಾನೆ.

ಕೃಪಣನ ಮನೆಯಲ್ಲಿ ಕುಣಪವು ಹೊರಡಲು
ಬೊಂಬು ಅರಿವೆ ಹುರಿಗೆ ಕಾಸು ತೆತ್ತು
ವೆಚ್ಚವಾಯಿತೆನುತ ಬಿಕ್ಕಿ ಬಿಕ್ಕಿ ಅಳುವ
ವಿಶ್ವದಾಭಿರಾಮು ಕೇಳ್ವೈ ವೇಮ

ಅನ್ನದಾನಕ್ಕೆ ಮಿಗಿಲಾದ ದಾನವಿಲ್ಲ. ಅನ್ನದಾನದಿಂದ ಪುಣ್ಯ ಲೋಕ ಪ್ರಾಪ್ತಿಯಾಗುತ್ತದೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾನೆ.

ಕೊಂಚ ಅನ್ನ ನೀಡಿ ಈಶ್ವರಾರ್ಪಣವೆನೆ
ಪುಣ್ಯ ಲೋಕವನ್ನು ಪಡೆವನಾತ
ಅನ್ನದಾನಕೆ ಸರಿದಾನವಿಲ್ಲವೈ
ವಿಶ್ವದಾಭಿರಾಮು ಕೇಳ್ವೈ ವೇಮ

ದಾನ ಮಾಡುವಾಗ ಪಾತ್ರಾಪಾತ್ರಗಳನ್ನರಿತು ಮಾಡಬೇಕು ಎಂಬುದನ್ನು ಪ್ರತಿಪಾದಿಸಿದ್ದಾನೆ.

ಅನ್ನ ಕೇಳದವಗೆ ಅನ್ನವ ನೀಡಲು
ಬಿಸುಡಲವನದನು ಬಂದ ಫಲವೇನು
ಧನಿಕನಿಗೆಸಗುವ ದಾನವು ಅದೇ ತೆರನದ್ಧೈ
ವಿಶ್ವದಾಭಿರಾಮು ಕೇಳ್ವೈ ವೇಮ

ಹಸಿದು ಬಂದವಗೆ ಅಸನವ ನೀಡಲು
ಹರಿಗೆ ಅರ್ಪಿತವೆನುತ ಅರಗಿಸುವ
ಧನವಿಹೀನನಿಗೆ ದಾನವು ಅದೇ ತೆರನದ್ಯೆ
ವಿಶ್ವದಾಭಿರಾಮು ಕೇಳ್ವೈ ವೇಮ

ಸಾಲ ಮಾಡುವುದು, ಚಿನ್ನ ಅಡ ಇಡುವುದು, ಸುಳ್ಳು ಹೇಳುವುದು, ಮೂರ್ಖನ ಸ್ನೇಹ ಮಾಡುವುದು ಸರಿಯಲ್ಲ. ಇದರಿಂದ ಕಷ್ಟಗಳಿಗೆ ಸಿಲುಕಬೇಕಾಗುತ್ತದೆ ಎಂದಿದ್ದಾನೆ.

ಸಾಲ ಮಾಡೆ ಹೇಯಹರಿಹರಾದಿಗಳಿಗುಂ
ಮೂರ್ಖನ ಸ್ನೇಹವದು ಮೊದಲೆ ಹೇಯ
ಸುಳ್ಳು ಹೇಳೆ ಹೇಯ ಅಡವಿಡಲದು ಹೇಯ
ವಿಶ್ವದಾಭಿರಾಮ ಕೇಳ್ಳೈ ವೇಮ

ಆಚಾರಕ್ಕೆ ಆತ್ಮಶುದ್ಧಿಯೂ, ಪಾಕಕ್ಕೆ ಬಾಂಡ ಶುದ್ಧಿಯೂ, ಶಿವಪೂಜೆಗೆ ಚಿತ್ತಶುದ್ಧಿಯೂ ಅತ್ಯಾವಶ್ಯಕ ಎಂದಿದ್ದಾನೆ.

ಆತ್ಮಶುದ್ಧಿ ಇರದ ಆಚಾರವದು ಏಕೆ
ಬಾಂಡಶುದ್ಧಿ ಇರದ ಪಾಕವೇಕೆ
ಚಿತ್ತಶುದ್ಧಿ ಇರದ ಶಿವಪೂಜೆಯೇತಕ್ಕೆ
ವಿಶ್ವದಭಿರಾಮ ಕೇಳ್ಳೈ ವೇಮ

ವೇಮನ ತತ್ತ್ವಜ್ಞಾನಿಯಾದರೂ ಸಮಾಜದ, ರೀತಿ ನೀತಿಗಳಿಗೆ ಸ್ಪಂದಿಸಿ ಸಮಾಜದ ಏಳಿಗೆಗೆ ಸದಾಚಾರಕ್ಕೆ ನೆಮ್ಮದಿಯ ಜೀವನಕ್ಕೆ ಸಾಮಾನ್ಯ ನೀತಿಯನ್ನು ಬೋಧಿಸಿದ್ದಾನೆ.

ಅಲ್ಪ ಮನುಜ ನುಡಿವ ಆಡಂಬರದಿ ಸದಾ
ಸಜ್ಜನನುನುಡಿವ ಸೌಮ್ಯದಿಂದ
ಕಂಚುಧ್ವನಿಗೈವಂತೆ ಕನಕ ತಾಂಗೈವುದೇ
ವಿಶ್ವದಾಭಿರಾಮ ಕೇಳ್ಳೈ ವೇಮ

ಆಸೆಯಿಂದ ಮನುಜ ಆಯುವ ಪರಿಯಂತ
ತಿರುಗುತಿಹನು ಚಪಲ ತೊರೆಯಲರಿಯ
ಮುಸುರೆ ಪಾತ್ರೆಯಲ್ಲಿ ಮುಸುರು ನೊಣಗಳಂತೆ
ವಿಶ್ವದಾಭಿರಾಮ ಕೇಳ್ಳೈ ವೇಮ

ಮೆಟ್ಟಿನಲ್ಲಿ ಕಲ್ಲು ಕಿವಿಯೊಳಗೆ ತೊಣಚಿ
ಕಣ್ಣಿನಲ್ಲಿ ಧೂಳು ಕಾಲಮುಳ್ಳು
ಮನೆಯೊಳಗಿನ ಸಮರ ಅಷ್ಟಿಷ್ಟು ಅಲ್ಲವೈ
ವಿಶ್ವದಾಭಿರಾಮ ಕೇಳ್ಳೈ ವೇಮ

ಪ್ರತಿಯೊಬ್ಬ ಮಾನವನು ಇತರರಲ್ಲಿ ತಪ್ಪುಗಳನ್ನು ಹುಡುಕದೆ ತನ್ನಲ್ಲಿ ತಾನು ಆತ್ಮಶೋಧನೆ ಮಾಡಿಕೊಳ್ಳಬೇಕು ಎಂದಿದ್ದಾನೆ ವೇಮನ. ಸಮಾಜವನ್ನು ತಿದ್ದಲು ಮಾರ್ಗದರ್ಶಕನಾಗಿದ್ದಾನೆ.

ತಪ್ಪನೆಣಿಸುವವರು ತಂಡೋಪ ತಂಡವು
ಉರ್ವಿ ಜನರಲೆಲ್ಲ ಇಹುದು ತಪ್ಪು
ತಪ್ಪನೆಣಿಸುವ ಜನ ತಮ್ಮ ತಪ್ಪರಿಯರೈ
ವಿಶ್ವದಾಭಿರಾಮ ಕೇಳ್ನೆ ವೇಮ

ವೇಮನನ ಪದ್ಯಗಳು ಮೂಲತಃ ತೆಲುಗಿನಲ್ಲಿದ್ದು, ಕನ್ನಡಕ್ಕೂ ಅನುವಾದ ಗೊಂಡಿವೆ. ಆದರೂ ಕನ್ನಡಿಗರಿಗೆ ಇನ್ನೂ ಸರಿಯಾಗಿ ವೇಮನನ ಪರಿಚಯು ವಾಗಲಿಲ್ಲ. ಒಂದು ಶತಕದಷ್ಟು ವೇಮನನ ಪದ್ಯಗಳನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡಿಗರಿಗೆ ಆತನ ಪರಿಚಯು ಮಾಡಿಸಲು ಇದು ಒಂದು ಕಿರು ಪ್ರಯತ್ನವಾಗಿದೆ. ಅನುವಾದವನ್ನು ಆಟವೆಲದಿ ಛಂದಸ್ಸಿನಲ್ಲೇ ಮಾಡಲಾಗಿದೆ. ಮೂಲವನ್ನು ತೆಲುಗು ಭಾಷೆ ಮತ್ತು ಕನ್ನಡ ಲಿಪಿಯಲ್ಲಿ ಕೊಡಲಾಗಿದೆ. ಅನುವಾದದ ಕೆಳಗೆ ತಾತ್ಪರ್ಯ ವನ್ನೂ ಸಹ ನೀಡಲಾಗಿದೆ. ಅನುವಾದ ಮಾಡುವಾಗ ಮೂಲದಲ್ಲಿನ ಮಾಧುರ್ಯ ಉಳಿಸಲು ನಾಲ್ಕನೇ ಸಾಲಿನ "ವಿಶ್ವದಾಭಿರಾಮ" ಎಂಬ ರೂಪವನ್ನು ಅನುವಾದ ದಲ್ಲಿಯೂ ಉಳಿಸಿಕೊಳ್ಳಲಾಗಿದೆ. ಅನುವಾದದಲ್ಲಿರಬಹುದಾದ ಅರೆಕೊರೆಗಳನ್ನು ಓದುಗರು ಮನ್ನಿಸಿ, ಈ ಕೃತಿಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

—ಎಂ. ದೇವರ ಕೊಂಡಪ್ಪ

# ವೇಮನ ಪದ್ಯಗಳು

1. ಮೂಲ : ತೇಟಗೀತೆ : ಶ್ರೀ ಕರಂಬುಗ ವೇಮನ ಚೆಪ್ಪಿನಟ್ಟಿ
ಪದ್ಯಮುಲ ನೆವ್ವಡೇನಿಯು ಬಠನ ಸೇಯು
ನಟ್ಟಿಪುರುಷುಡು ಮನಮುನ ನಿಟ್ಟಿದನುಚು
ಚೆಪ್ಪರಾನಟ್ಟಿ ವಸ್ತುವು ಚೇರು ವೇಮ

ಅನುವಾದ : ಶ್ರೀಕರದಿ ಶ್ರೀ ವೇಮನ ಕವಿ ಪೇಳಿದ
ಪದಗಳನು ಯಾವೊಬ್ಬನು ಮುದದಿ ಪಠಿಸಲು
ನಪ್ಪುರುಷನು ಮನದಿ ಇಂಥಹದೆನುವಂತೆ
ಹೇಳಬರದಂತ ವಸ್ತುವ ಪಡೆವ ವೇಮ

ತಾತ್ಪರ್ಯ : ಮಂಗಳಕರವಾಗಿ ವೇಮನ ಕವಿ ಹೇಳಿರುವ ನೀತಿ ಪದ್ಯಗಳನ್ನು ಯಾವ ಮನುಜನೇ ಆಗಲಿ ಮಾನಸದಲ್ಲಿ ಮನನ ಮಾಡಿದರೆ, ಅವನ ಮನಸ್ಸಿನಲ್ಲಿ ಇಂಥಹುದೇ ಎಂದು ವಿವರಿಸಲಾಗದ ವಸ್ತು ಉದಯಿಸುತ್ತದೆ. ಅಂದರೆ ತತ್ತ್ವಜ್ಞಾನಿಯಾಗುತ್ತಾನೆ.

2. ಮೂಲ ಆಟವೆಲದಿ : ಅಲ್ಪುಡೆಪ್ಪುಡು ಬಲ್ಕು ನಾಡಂಬರಮುಗಾನು
ಸಜ್ಜನುಂಡು ಪಲುಕು ಚಲ್ಲಗಾನು
ಕಂಚು ಮ್ರೋಗಿ ನಟ್ಲು ಕನಕಂಬುಮ್ರೋಗುನಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಅಲ್ಪ ಮನುಜ ನುಡಿವ ಆಡಂಬರದಿ ಸದಾ
ಸಜ್ಜನನು ನುಡಿವ ಸೌಮ್ಯದಿಂದ
ಕಂಚು ಧ್ವನಿಗೈವಂತೆ ಕನಕತಾಂಗೈವುದೇ
ವಿಶ್ವದಾಭಿರಾಮ ಕೇಳ್ಕೈ ವೇಮ

ತಾತ್ಪರ್ಯ : ಕಡಿಮೆ ಬೆಲೆಯ ಲೋಹಗಳ ಮಿಶ್ರಣದಿಂದಾದ ಕಂಚನ್ನು ಬಡಿದರೆ ಅದು ಚಪಳ ಶಬ್ದ ಮಾಡುತ್ತದೆ. ಹೆಚ್ಚಿನ ಬೆಲೆಯ ಬಂಗಾರವನ್ನು ಬಡಿದರೆ ಅದು ಹೆಚ್ಚಾಗಿ ಶಬ್ದ ಮಾಡುವುದಿಲ್ಲ. ಅಂತೆಯೇ ಅಲ್ಪನಾದವನು ಸದಾ ಆಡಂಬರದ ಮಾತುಗಳನ್ನಾಡುತ್ತಾನೆ. ಆದರೆ ಸಜ್ಜನ ಪುರುಷನು ಬಹಳ ಸೌಮ್ಯದಿಂದ ಮಾತನಾಡುತ್ತಾನೆ.

3. **ಮೂಲ** : ಅನಗ ಅನಗ ರಾಗ ಮತಿಶಯಿಲ್ಲುಚು ನುಂಡು
ದಿನಗ ದಿನಗ ವೇಮು ತೀಯನುಂಡು
ಸಾಧನಮುಲ ಬನುಲು ಸಮಕೂರು ಧರಲೋನ
ವಿಶ್ವದಾಭಿರಾಮ ವಿನುರ ವೇಮ

**ಅನುವಾದ** : ನುಡಿಯೆ ನುಡಿಯೆ ರಾಗ ಅತಿಶಯಗೊಳುವುದು
ಜಗಿಯೆ ಜಗಿಯೆ ಜಗಿಯೆ ಬೇವು ಸಿಹಿ ಎನಿಪುದು
ಸಾಧನದೊಳು ಕೆಲಸ ಕೈಗೂಡು ಧರೆಯಲ್ಲಿ
ವಿಶ್ವದಾಭಿರಾಮ ಕೇಳ್ಳೈ ವೇಮ

**ತಾತ್ಪರ್ಯ** : ಹಾಡುತ್ತ ಹಾಡುತ್ತ ರಾಗ ಅತಿಶಯವಾಗಿ ಕುದುರುತ್ತದೆ. ತಿನ್ನುತ್ತ ತಿನ್ನುತ್ತ ಬೇವೂ ಸಹ ಸಿಹಿಯಾಗಿಯೇ ಕಾಣುತ್ತದೆ. ಆದ್ದರಿಂದ ಯಾವುದಕ್ಕೂ ಸಾಧನೆ ಬೇಕು. ಸಾಧನೆಯಿಂದ ಪ್ರಪಂಚದಲ್ಲಿ ಎಲ್ಲಾ ಕೆಲಸಗಳು ನೆರವೇರುತ್ತವೆ.

4. **ಮೂಲ** : ಅನುವುಗಾನಿ ಚೋಟ ನದಿಕುಲಮುನರಾದು
ಕೊಂಚ ಮುಂಡುಟೆಲ್ಲಗೊದುವಗಾದು
ಕೊಂಡ ಮದ್ದಮಂದು ಗೊಂಚೆ ಮ್ಮೈಯುಂಡದಾ
ವಿಶ್ವದಾಭಿರಾಮ ವಿನುರ ವೇಮ

**ಅನುವಾದ** : ತರವಲ್ಲದ ತಾಣದಿ ಅಧಿಕನೆನೆಸಲ್ಲ
ಸ್ವಲ್ಪವಿರುವುದೆಲ್ಲ ಕಡಿಮೆಯಲ್ಲ
ಬೆಟ್ಟ ದರ್ಪಣದಲಿ ಚಿಕ್ಕದಾಗಿರದೇನು
ವಿಶ್ವದಾಭಿರಾಮ ಕೇಳ್ಳೈ ವೇಮ

**ತಾತ್ಪರ್ಯ** : ತಿಳಿಗೇಡಿಗಳು ಕಂಡ ಕಂಡ ಸ್ಥಳಗಳಲ್ಲಿ ತಾವು ದೊಡ್ಡವರು ತಮ್ಮ ಸಮಾನವಿಲ್ಲವೆಂಬುದಾಗಿ ಹೇಳುತ್ತಾರೆ. ನಮ್ರತೆಯಿಂದ ನಡೆದುಕೊಂಡರೆ ಅದು ಅವರ ಘನತೆಗೆ ಕುಂದಕ ತರುವುದಿಲ್ಲ. ಬೆಟ್ಟವು ಕನ್ನಡಿಯಲ್ಲಿ ಚಿಕ್ಕದಾಗಿ ಕಾಣುತ್ತದೆ. ಆದರೆ ಅದರ ಘನತೆ, ಗಾತ್ರ ಕಡಿಮೆಯಾಯಿತೇ ?

5. ಮೂಲ : ಅಂಕಿ ಲಂಗಿ ಮಾಟಲಾಡ ನೇರ್ಚಿನಪುಡೆ
ಪಿನ್ನಪೆದ್ದತನಮು ಲೆನ್ನ ನೇಲ
ಪಿನ್ನಚೇತಿ ದಿವ್ವೆ ಪೆದ್ದಗಾ ವೆಲುಗದಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ತಾರತಮ್ಯವರಿತು ನುಡಿಯಲು ಅರಿತಿರೆ
ಹಿರಿದು ಕಿರಿದು ಎಂದು ಗಣಿಸಲೇಕೆ
ಕಿರಿಯು ನಲಿ ಕೈದೀಪ ಹಿರಿದಾಗಿ ಬೆಳಗದೇಂ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಸಮಯಾ ಸಂದರ್ಭಕ್ಕೆ ತಕ್ಕಂತೆ ಯುಕ್ತಾಯುಕ್ತದಿಂದ ಮಾತನಾಡಲು ತಿಳಿದಿದ್ದರೆ, ಚಿಕ್ಕವರು, ದೊಡ್ಡವರು ಎಂಬ ಭೇದವೇಕೆ. ಸಣ್ಣ ಮಗುವಿನ ಕೈಯಲ್ಲಿರುವ ದೀಪ ಹೆಚ್ಚಾಗಿ ಬೆಳಕನ್ನು ಕೊಡುವುದಿಲ್ಲವೆ ?

6. ಮೂಲ : ಅಲ್ಪ ಬುದ್ಧಿವಾನಿ ಕಧಿಕಾರಮಿಚ್ಚಿನ
ದೊಡ್ಡವಾರಿನೆಲ್ಲ ದೊಲಗಗೊಟ್ಟು
ಚೆಪ್ಪುತಿನ್ನಕುಕ್ಕ ಚೆರಕು ದೀಪೆರಗುನಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಅಲ್ಪ ಬುದ್ಧಿಯವಗೆ ಅಧಿಕಾರವೀಯಲು
ದೊಡ್ಡವರನೆಲ್ಲ ದೂರಕೆಸೆದು ಬಿಡುವ
ಕೆರಕಡಿವ ಶುನಕವೆಂತರಿಗು ಕರ್ವಸಿಹಿಯು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಮೆಟ್ಟು ಕಚ್ಚುವ ನಾಯಿಗೆ ಕಬ್ಬಿನ ರುಚಿ ತಿಳಿಯುತ್ತದೆಯೋ? ಅದರಂತೆ ಅಲ್ಪನಿಗೆ ಹಿರಿಯರ ಗುಣಗಳು ಅರಿವಾಗುವುದಿಲ್ಲ. ಅಲ್ಪನಿಗೆ ಅಧಿಕಾರವನ್ನು ಕೊಟ್ಟರೆ ಹಿರಿಯರನೆಲ್ಲಾ ದೂರ ತೊಲಗಿಸಿಬಿಡುತ್ತಾನೆ.

7. ಮೂಲ : ಅಪ್ಪುದೀಯ ರೋತ ಹರಿಹರಾದುಲಕ್ಕೈನ
ಮೊಪ್ಪೆತೋಡ ಮೈತ್ರಿ ಮೊದಲೆ ರೋತ
ತಪ್ಪುಬಲುಕ ರೋತ ತಾ ಕಟ್ಟಡಿನ ರೋತ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಸಾಲ ಮಾಡೆ ಹೇಯ ಹರಿಹರಾದಿಗಳಿಗಂ
ಮೂರ್ಖನ ಸ್ನೇಹವದು ಮೊದಲೆ ಹೇಯ
ಸುಳ್ಳು ಹೇಳೆ ಹೇಯ ಅಡವಿಡಲದು ಹೇಯ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಸಾಲ ತರುವುದು ಹೇಯವಾದ ಕೆಲಸ. ಹರಿಹರರಾದರೂ ಸಾಲ ಮಾಡಿದಲ್ಲಿ ಸಂಕಟಪಡಬೇಕಾಗುತ್ತದೆ. ಮೂರ್ಖನ ಸ್ನೇಹವು ಬಹು ಅಸಹ್ಯವಾದುದು. ಅಂತೆಯೆ ಸುಳ್ಳು ಹೇಳುವುದು ಅಡಯಿಟ್ಟು ಸಾಲ ಪಡೆಯುವುದು ಬಹಳ ಹೇಯವಾದ ಕೆಲಸಗಳು.

8. ಮೂಲ : ಅಧಿಕುಡಯಿನ ರಾಜು ಅಲ್ಪುನಿ ಚೇಬಟ್ಟಿ
ವಾನಿ ಮಾಟೆ ಚೆಲ್ಲು ವಸುಧ ಲೋನ
ಗಣಕು ಲೊಪ್ಪಿಯುನ್ನ ಗವ್ವಲು ಚೆಲ್ಲವಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಅಧಿಕನಾದ ಅರಸ ಅಲ್ಪನ ಪೋಷಿಸೆ
ಅವನ ಮಾತೆ ನಡೆಗು ಅವನಿಯಲ್ಲಿ
ಅರಸನೊಪ್ಪೆ ಕವಡೆ ಬಳಕೆಗೆ ಬರವೇನು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಕವಡೆಗಳಿಗೆ ಬೆಲೆ ಬಹಳ ಕಡಿಮೆ. ಅರಸನು ಅದೇ ಕವಡೆಗಳನ್ನು ನಾಣ್ಯಕ್ಕೆ ಬದಲಾಗಿ ಚಲಾವಣೆಗೆ ತಂದರೆ ಅವು ಚಲಾವಣೆಯಾಗುತ್ತವೆ. ಅದೇ ರೀತಿ ಸರ್ಕಾರ ಅಲ್ಪರನ್ನು ದುಷ್ಟರನ್ನು ಗೌರವಿಸಿದರೆ ಆ ದುಷ್ಟರ ಮಾತು ದೇಶದಲ್ಲಿ ಚಲಾವಣೆಯಾಗುತ್ತದೆ. ಆದ್ದರಿಂದ ಸರ್ಕಾರ (ರಾಜ) ಅಲ್ಪರಿಗೆ ಆಶ್ರಯ, ಮನ್ನಣೆ ಕೊಡಬಾರದು.

9. ಮೂಲ : ఆన్నమడుగ నతని కన్నంబు బెట్టిన
బారవేయు దాని ఫలితమేమి ?
ధనికునకు నొసంగు దానంబు నటువలె
విశ్వదాభిరామ వినుర వేమ

ಅನುವಾದ : ಅನ್ನ ಕೇಳದವಗೆ ಅನ್ನವ ನೀಡಲು
ಅವನು ಅದನು ಬಿಸುಡೆ ಫಲಿತವೆಂತು
ಧನಿಕನಿಗೆ ಸಗುವ ದಾನವು ಅದೇ ರೀತಿಯೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಯಾಚಿಸದೇ ಇರುವವನಿಗೆ ಅನ್ನವನ್ನು ನೀಡಿದರೆ ಅವನು ಅದನ್ನು ಬಿಸಾಡುತ್ತಾನೆ. ಹಸಿವಿಲ್ಲದಿರುವಾಗ ಅವನಿಗೆ ಅದರ ಬೆಲೆ ತಿಳಿಯುವುದಿಲ್ಲ. ಅಲ್ಲದೆ ಕೊಟ್ಟವನಿಗೆ ಯಾವ ಪುಣ್ಯವೂ ಬರುವುದಿಲ್ಲ. ಅದೇ ರೀತಿ ಧನಿಕನಿಗೆ ಕೊಡುವ ದಾನದಿಂದ ಯಾವ ಫಲವೂ ಇಲ್ಲ.

10. ಮೂಲ : ఆకలన్న వాని కన్నంబు బెట్టితే
హరునకర్పితముగ నారగించు
ధనవిహీననునకును దానము నటువలె
విశ్వదాభిరామ వినుర వేమ

ಅನುವಾದ : ಹಸಿದು ಬಂದವಗೆ ಅಸನವನು ನೀಡಲು
ಹರಿಗೆ ಅರ್ಪಿತವೆನುತ ಅರಗಿಸುವ
ಧನವಿಹೀನನಿಗೆ ದಾನವು ಅದೇ ತೆರನದೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಹಸಿದು ಬಂದು ಅನ್ನವನ್ನು ಕೇಳಿದವನಿಗೆ ಅನ್ನವನ್ನು ನೀಡಿದರೆ, ಅವನು ಸ್ವೀಕರಿಸಿ, ಹರಿಗೆ ಅರ್ಪಿತ ಎಂಬುದಾಗಿ ಹೇಳಿ ಊಟ ಮಾಡುತ್ತಾನೆ. ಅದರಿಂದ ದಾನ ಮಾಡಿದವನಿಗೆ ಪುಣ್ಯ ಪ್ರಾಪ್ತಿಯಾಗುತ್ತದೆ. ಅದೇ ರೀತಿ ಬಡವನಿಗೆ ಕೊಡುವ ದಾನದಿಂದ ಪುಣ್ಯಫಲ ಬರುತ್ತದೆ.

11. ಮೂಲ : ಅಪದಂದು ಜೂಡು ಮಾರಯು ಬಂಧುಲ
ಭಯಮುವು ವೇಳ ಜೂಡು ಭಂಟು ಗುಣಮು
ಪೇದ ವಡ್ಡವೆನುಕ ಪೆಂಡ್ಲಾಮು ಗತಿ ಚೂಡು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಆಪದದಲಿ ನೋಡು ಅರಿಯೆ ಬಂಧುಗಳನು
ಭಯದ ಸಮಯ ನೋಡು ಭಟನ ಗುಣವ
ಬಡತನದಲಿ ನೋಡು ಸತಿಯ ಆದರವ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಬಂಧುಗಳ ನಿಜವಾದ ಪ್ರೀತಿ ಆದರಗಳನ್ನು ತಿಳಿಯ ಬೇಕಾದರೆ ತೊಂದರೆ ಉಂಟಾದಾಗ ಅವರನ್ನು ಆಶ್ರಯಿಸಿ ನೋಡಬೇಕು. ಅಪಾಯ ಒದಗಿದಾಗ ಭಟನ ಭಕ್ತಿ, ಶಕ್ತಿಗಳನ್ನು ತಿಳಿಯಬೇಕು. ಅಂತೆಯೇ ಹೆಂಡತಿಯ ಒಳ್ಳೆಯತನವನ್ನು ಬಡತನ ಬಂದಾಗ ತಿಳಿಯ ಬೇಕಾಗುತ್ತದೆ.

12. ಮೂಲ : ಆತ್ಮಶುದ್ಧಿ ಲೇನಿ ಯಾಚಾರಮದಿಯೇಲ
ಭಾಂಡಶುದ್ಧಿ ಲೇನಿ ಪಾಕಮೇಲ
ಚಿತ್ತಶುದ್ಧಿ ಲೇನಿ ಶಿವಪೂಜಲೇಲರಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಆತ್ಮಶುದ್ಧಿ ಇರದ ಆಚಾರವದು ಏಕೆ
ಭಾಂಡಶುದ್ಧಿ ಇರದ ಪಾಕವೇಕೆ
ಚಿತ್ತಶುದ್ಧಿ ಇರದ ಶಿವಪೂಜೆಯೇತಕೆ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಆತ್ಮಶುದ್ಧಿ ಇಲ್ಲದೆ ಮಾಡುವ ಆಚಾರ, ಪಾತ್ರೆಶುದ್ಧಿ ಇಲ್ಲದೆ ಮಾಡುವ ಅಡುಗೆ, ಚಿತ್ತಶುದ್ಧಿ ಇಲ್ಲದೆ ಮಾಡುವ ಶಿವಪೂಜೆ ಇವು ವ್ಯರ್ಥವಾದವುಗಳು.

13. ಮೂಲ : ఆశచేత మనుజు లాయువు గలవారు
దిరుగు చుందురు భ్రమ దిప్పలేక
మురికి భాండమందు ముసరు నీగల భంగి
విశ్వదాభిరామ వినుర వేమ

ಅನುವಾದ : ಆಸೆಯಿಂದ ಮನುಜ ಆಯುವ ಪರಿಯಂತ
ತಿರುಗುತಿಹನು ಚಪಲ ತೊರೆಯಲರಿಯ
ಮುಸರೆ ಪಾತ್ರೆಯಲ್ಲಿ ಮುಸುರು ನೊಣಗಳಂತೆ
ವಿಶ್ವದಾಭಿರಾಮ ಕೇಳ್ಯೆ ವೇಮ

ತಾತ್ಪರ್ಯ : ಬುದ್ಧಿ ಬಂದಲಾಗಾಯ್ತು ಸಾಯುವವರೆಗೆ ಮನುಜನು ಅನೇಕ ವಿಷಯ ಭೋಗಗಳಿಗೆ ಆಸೆಪಟ್ಟು ಅದರಲ್ಲಿಯೇ ಮಗ್ನನಾಗಿ ಪುರುಷಾರ್ಥಗಳನ್ನು ಮರೆತುಬಿಡುತ್ತಾನೆ. ಇದು ಯಾವ ರೀತಿ ಎಂದರೆ, ಮುಸರೆ ಪಾತ್ರೆಗಳನ್ನು ತೊಳೆಯಲು ಹೊರಗೆ ಇಟ್ಟಾಗ ಅದರಲ್ಲಿನ ಮುಸರೆಗೆ ನೊಣಗಳು ಮುತ್ತುತ್ತವೆ. ಹಾಗೆಯೇ ಮಾನವನು ದುಃಖದಾಯಕವಾದ ಆಸೆಗಳನ್ನು ಹೊತ್ತು ಅದನ್ನು ಬಿಡುವ ದಾರಿ ಕಾಣದೆ ಜೀವನವೆಲ್ಲಾ ಅದರಲ್ಲಿಯೇ ಕಳೆಯುತ್ತಾನೆ.

14. ಮೂಲ : ఇనుము విరిగె నేని యినుమారు మ్ముమ్మారు
కాచియతుక నేర్చు కమ్మరీడు
మనసు విరిగె నేని మరియంటనేర్చునా
విశ్వదాభిరామ వినుర వేమ

ಅನುವಾದ : ಲೋಹ ಮುರಿಯೆ ಎರಡು ಮೂರು ಬಾರಿ ಅದನು
ಕಾಸಿ ಬೆಸೆಯಲರಿವ ಕೊಲಿಮೆಯವನು
ಮನವು ಮುರಿಯಲದನು ಬೆಸೆಯಲರಿವನೇನು
ವಿಶ್ವದಾಭಿರಾಮ ಕೇಳ್ಯೆ ವೇಮ

ತಾತ್ಪರ್ಯ : ಕಬ್ಬಿಣ ಮುರಿದರೆ ಅದನ್ನು ಅನೇಕ ಬಾರಿ ಕಾಯಿಸಿ ಬೆಸೆದು ಸರಿಮಾಡುವ ವಿಧಾನವನ್ನು ಕಮ್ಮಾರ ತಿಳಿದಿರುತ್ತಾನೆ. ಆದರೆ ಮನಸ್ಸು ಮುರಿದರೆ ಅದನ್ನು ಯಾರಿಂದಲೂ ಬೆಸೆಯಲಾಗದು.

15. ಮೂಲ : ಇಚ್ಚುವಾನಿ ಯೊದ್ದ ನೀನಿವಾಡುಂಡಿನ
ಚಚ್ಚುಗಾನಿ ಯೀವಿ ಸಾಗನೀಡು
ಕಲ್ಪತರುವು ಕ್ರಿಂದ ಗಚ್ಚಚೆಟ್ಟುನ್ನಟಲ್ಲಿ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೊಡುವವನ ಸನಿಹ ಕೊಡದವನು ಇರುತಿರೆ
ಜೀವ ಬಿಡುವ ಕೊಡುಗೆ ಸಾಗಗೊಡನು
ಕಲ್ಪತರುವ ಕೆಳಗೆ ಗಜ್ಜುಗ ಬೆಳೆದಂತೆ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಕಲ್ಪವೃಕ್ಷದ ಕೆಳಗೆ ಗಜ್ಜುಗದ ಗಿಡ ಇದ್ದರೆ ಅದರ ಹತ್ತಿರ ಯಾರೂ ಹೋಗುವುದಕ್ಕೆ ಆಗುವುದಿಲ್ಲ. ಆ ಕಲ್ಪವೃಕ್ಷದ ಫಲಗಳನ್ನು ಯಾರೂ ಅನುಭವಿಸುವುದಕ್ಕೆ ಆಗುವುದಿಲ್ಲ. ಅದೇ ರೀತಿ ದಾನ ಮಾಡುವವನ ಹತ್ತಿರ ಲೋಭಿ ಸೇರಿಕೊಂಡರೆ, ದಾನ ಮಾಡುವುದಕ್ಕೆ ಬಿಡುವುದಿಲ್ಲ.

16. ಮೂಲ : ಇಂಚುಕ ಕಂತಕು ಬೋವ ಮೀಶ್ವರಾರ್ಪಣಮನ್ನ
ಪುಣ್ಯಲೋಕ ಮುನಕು ಬೋವು ನತಡು
ಅನ್ನದಾನ ಮುನಕು ನಧಿಕದಾನಮು ಲೇದು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೊಂಚ ಅನ್ನ ನೀಡಿ ಈಶ್ವರಾರ್ಪಣವೆನೆ
ಪುಣ್ಯಲೋಕವನ್ನು ಪಡೆವ ನಾತ
ಅನ್ನದಾನಕೆ ಸರಿದಾನವದಿಲ್ಲವೈ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಸ್ವಲ್ಪ ಅನ್ನವನ್ನಾದರೂ ದಾನ ಮಾಡಿ, ಅದು ಈಶ್ವರಾರ್ಪಣೆ ಎನ್ನುವವನು ಪುಣ್ಯಲೋಕವನ್ನು ಸೇರುತ್ತಾನೆ. ಅನ್ನದಾನಕ್ಕಿಂತ ಅಧಿಕ ದಾನ ಮತ್ತೊಂದಿಲ್ಲ.

17. ಮೂಲ : ಇಮ್ಮುದಪ್ಪುವೇಳ ನೆಮ್ಮಲನ್ನಿಯು ದಪ್ಪಿ
ಕಾಲಮೊಕ್ಕ ರೀತಿ ಗಡುಪ ವಲಯು
ವಿಜಯುಡನುವುದಪ್ಪಿ ವಿರಟುನಿಗೊಲುವಡಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ನೆಲೆತಪ್ಪಿ ಶಾಂತಿ ಸಂತಸ ತಪ್ಪಲು
ಕಾಲಪೊಂದು ರೀತಿ ಕಳೆಯಬೇಕು
ವಿಜಯ ನೆಲೆ ತಪ್ಪಿ ವಿರಟನನುಪಚರಿಸನೆ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಸ್ಥಾನಮಾನಗಳು ತಪ್ಪಿದಾಗ ಕಾಲವನ್ನು ಒಂದು ಬಗೆಯಾಗಿ ಆಡಂಬರವಿಲ್ಲದೆ ಕಳೆಯಬೇಕು. ಇಲ್ಲದಿದ್ದರೆ ಇನ್ನೂ ಹೆಚ್ಚಿನ ತೊಂದರೆಗಳಿಗೆ ಸಿಕ್ಕಬೇಕಾಗುತ್ತದೆ. ಅರ್ಜುನನು ತನ್ನ ನೆಲೆಯನ್ನು ಕಳೆದುಕೊಂಡಾಗ ತಲೆ ಮರಸಿಕೊಂಡು ವಿರಾಟಪುರದರಸನಲ್ಲಿ ಊಳಿಗ ಮಾಡಬೇಕಾಯಿತು. ಪರಾಕ್ರಮಿಯಾದ ಅರ್ಜುನನಿಗೆ ಆ ಪರಿಸ್ಥಿತಿ ಒದಗಿದಾಗ ಬೇರೆಯವರ ಪಾಡೇನು ?

18. ಮೂಲ : ಉಪ್ಪು ಕಪ್ಪುರಂಬು ನೊಕ್ಕಪೋಲಿಕೆನುಂಡು
ಚೂಡ ಚೂಡ ರುಚುಲ ಜಾಡವೇರೆ
ಪುರುಷುಲಂದು ಪುಣ್ಯ ಪುರುಷುಲು ವೇರಯಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಉಪ್ಪು ಕಪ್ಪುರ ಒಂದೆ ಹೋಲಿಕೆಯವು
ನೋಡೆ ನೋಡೆ ರುಚಿಯು ರೀತಿ ಬೇರೆ
ಪುರುಷರಲ್ಲಿ ಪುಣ್ಯ ಪುರುಷರು ಬೇರೆಯ್ಯೆ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಉಪ್ಪು ಮತ್ತು ಕರ್ಪೂರ ಇವು ನೋಡುವುದಕ್ಕೆ ಒಂದೇ ರೀತಿಯಾಗಿ ಕಾಣುತ್ತವೆ. ಆದರೆ ಅವುಗಳ ರುಚಿಗಳನ್ನು ನೋಡಿದಾಗ ಬೇರೆ ಬೇರೆಯಾಗಿ ಕಾಣುತ್ತವೆ. ಅದೇ ರೀತಿ ಎಲ್ಲಾಪುರುಷರೂ ನೋಡುವುದಕ್ಕೆ ಒಂದೇ ರೀತಿಯಾಗಿ ಕಂಡರೂ ಅವರ ಗುಣಗಳು ಬೇರೆ ಬೇರೆಯಾಗಿರುತ್ತವೆ. ಮನುಷ್ಯನ ಯೋಗ್ಯತೆಯನ್ನು ಅವನ ಗುಣಗಳಿಂದ ಗುರುತಿಸಬೇಕು.

19. ಮೂಲ : ఉత్తము కడుపున నోగు జన్మించిన
వాడు చెరచువాని వంశమెల్ల
చెరకు వెన్ను బుట్టి చెరపదా తీపెల్ల
విశ్వదాభిరామ వినుర వేమ

ಅನುವಾದ : ಉತ್ತಮನುದರದಲಿ ಮೂರ್ಖನು ಜನಿಸಲು
ಕೆಡಿಸುವನವ ಅವನ ವಂಶವೆಲ್ಲ
ಕಬ್ಬಿನಲ್ಲಿ ಹೂ ಹುಟ್ಟಿ ಕೆಡಿಸದೇ ಸಿಹಿಯೆಲ್ಲ
ವಿಶ್ವದಾಭಿರಾಮ ಕೇಳ್ವೆ ವೇಮ

ತಾತ್ಪರ್ಯ : ಕಬ್ಬಿನಲ್ಲಿ ತೆನೆ ಹೊರಟರೆ ಅದರ ಸಿಹಿ ಕೆಡುತ್ತದೆ. ಅದೇ ರೀತಿ ಉತ್ತಮರಿಗೆ ಮೂರ್ಖನಾದ ಮಗನು ಹುಟ್ಟಿದರೆ ಅವನ ವಂಶದ ಒಳ್ಳೆಯ ಹೆಸರನ್ನು ಕೆಡಿಸುತ್ತಾನೆ.

20. ಮೂಲ : ఉర్వి జనులు పరమ యోగీశ్వరు నిచూచి
తెగడువారు కాని తెలియలేరు
అమృతపు రుచులు పస్తమో మెరుగును
విశ్వదాభిరామ వినుర వేమ

ಅನುವಾದ : ಉರ್ವಿ ಜನರು ಪರಮ ಯೋಗೀಶ್ವರನ ಕಂಡು
ತೆಗಳುವರೆ ಹೊರತು ಮಹಿಮೆಯರಿಯರು
ಅಮೃತ ರುಚಿಯ ಪಸ್ತ ತಾನರಿವುದೇ
ವಿಶ್ವದಾಭಿರಾಮ ಕೇಳ್ವೆ ವೇಮ

ತಾತ್ಪರ್ಯ : ಅಂಗೈಯಲ್ಲಿ ಹಾಲನ್ನು ಹಿಡಿದಾಗ ಹಾಲಿನ ರುಚಿಯನ್ನು ಪಸ್ತ ತಿಳಿಯಲಾಗುತ್ತದೆಯೆ. ಅಂತೆಯೇ ಅಜ್ಞಾನಿಗಳು ಯೋಗೀಶ್ವರನ ಮಹತ್ವವನ್ನು ಅರಿಯಲಾರರು.

21. ಮೂಲ : ఎరుక మాలువాడు ఏమేమి చదివిన
చదివి సంత సేపు సద్గుణియగు
కదిసి తామరందు గప్పకూర్చున్నట్లు
విశ్వదాభిరామ వినుర వేమ

ಅನುವಾದ : ಜ್ಞಾನ ಹೀನ ಮನುಜ ತಾನೇನ ಓದಲು
ಓದುವಷ್ಟು ಕಾಲ ಸುಗುಣಿ ಎನಿಪ
ಒಂದು ತಾವರೆಯಲಿ ಕಪ್ಪೆ ಕೂರುವ ಪರಿ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಕಪ್ಪೆಯು ತಾವರೆ ಎಲೆಯಲ್ಲಿ ಕುಳಿತಿರುವಷ್ಟು ಕಾಲ ಅದು ಸುಗುಣಿಯಂತೆ ಕಾಣುತ್ತದೆ. ತಾವರೆ ಎಲೆಯಿಂದ ನೀರಿಗಿಳಿದರೆ ಅದು ಮತ್ತೆ ಹುಳುಗಳನ್ನು ಭೇಟಿ ಮಾಡಲು ಪ್ರಾರಂಭಿಸುತ್ತದೆ. ಅದರಂತೆ ಮತಿಹೀನನು ಓದುವಷ್ಟು ಕಾಲ ಕೇಳುವಷ್ಟು ಕಾಲ ಸುಗುಣಿಯಂತೆ ಕಂಡರೂ, ಮರುಕ್ಷಣ ತನ್ನ ಮೊದಲಿನ ದುರ್ಗುಣಗಳಲ್ಲೇ ತೊಡಗುತ್ತಾನೆ.

22. ಮೂಲ : ఎవ్వరిగుణములు నేమున్న మానవు
చక్క జేయరాదు కుక్క తోక
గడకురాలు మగని గంపబెట్టిమ్మురా
విశ్వదాభిరామ వినుర వేమ

ಅನುವಾದ : ಯಾರ ಗುಣಗಳ ಏನೆನ್ನಲು ಮಾಸವು
ನೇರ ಮಾಡೆ ಬರದು ನಾಯಿ ಬಾಲ
ಗಯ್ಯಾಳಿ ಪತಿಯ ತೆಗಳಿ ಬಯಲಿಗಿಡುವಳೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಮಾನವರಲ್ಲಿ ಅವರ ಹುಟ್ಟು ಗುಣಗಳು ಯಾರು ಎಷ್ಟೇ ಉಪದೇಶ ಮಾಡಿದರೂ ಬದಲಾವಣೆಯಾಗುವುದಿಲ್ಲ. ಅವರ ಬುದ್ಧಿ ನಾಯಿ ಬಾಲವನ್ನು ನೇರ ಮಾಡಲಾಗದಂತೆ ಸರಿ ಮಾಡಲಾಗದು. ಗಯ್ಯಾಳಿಯು ಗಂಡನನ್ನು ನಿರ್ಲಕ್ಷ್ಯದಿಂದ ಕಂಡು, ತೆಗಳಿ ಹೀಯಾಳಿಸುತ್ತಾಳೆ.

23. ಮೂಲ : ಎರುಗುವಾನಿ ದೆಲುಪ ನೆವ್ವಡೈನನು ಚಾಲು
ನೊರುಲ ವಶಮುಃ ಗಾದು ನೋಗುಃದೆಲ್ಪ
ಯೇಟಿ ವಂಕ ದೀರ್ಪ ನೆವ್ವರಿ ತರಮಯಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಅರಿಯುವವಗೆ ಅರುಹೆ ಆರಿಗಾದರು ಸಾಧ್ಯ
ಯಾರಿಗುಂ ಅಸದಳ ಮೂರ್ಖಗರುಹೆ
ನದಿಯ ಡೊಂಕ ತಿದ್ದಲಾರಿಂದ ಸಾಧ್ಯವೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ನದಿಯು ಸುತ್ತಿ ಬಳಸಿ ಹರಿಯುತ್ತಿದ್ದರೆ ಅದರ ವಕ್ರ ಗತಿಯನ್ನು ತಿದ್ದಿ ನೇರವಾಗಿ ಹರಿಯುವಂತೆ ಮಾಡಲು ಸಾಧ್ಯವಿಲ್ಲ. ವಿವೇಕವಿರುವವನಿಗೆ ತಿಳಿಯಹೇಳಲು ಯಾರಿಗಾದರೂ ಸುಲಭ. ಮೂರ್ಖನಿಗೆ ತಿಳಿಸಬೇಕಾದರೆ ಯಾರಿಂದಲೂ ಸಾಧ್ಯವಿಲ್ಲ.

24. ಮೂಲ : ಎಂತ ಚದುವು ಚದವಿ ಎನ್ನಿವಿನ್ನನು ಗಾನಿ
ಹೀನಡವಗುಣಂಬು ಮಾನಲೇಡು
ಬೊಗ್ಗು ಪಾಲ ಗಡುಗ ಬೋವುನಾ ಮಲಿನಂಬು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಎನಿತು ಓದಿ ಓದಿ ಎಷ್ಟು ಕೇಳಿದರೇನು
ಹೀನ ತನ್ನವಗುಣ ತೊರೆಯಲರಿಯ
ಕರಿಯ ಹಾಲಿನಿಂ ತೊಳೆಯೆ ಬಿಡದು ಕರುಕು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಇದ್ದಿಲನ್ನು ಹಾಲಿನಲ್ಲಿ ಪಲವಾರು ಬಾರಿ ತೊಳೆದರೂ ಅದರ ಕರುಕು ಹೋಗುವುದಿಲ್ಲ. ಅಂತೆಯೇ ಗುಣಹೀನನನು ಧರ್ಮಶಾಸ್ತ್ರಗಳನ್ನು ನೀತಿಶಾಸ್ತ್ರಗಳನ್ನು ಎಷ್ಟೇ ಓದಿದರೂ, ಏನೆಲ್ಲ ನೀತಿ ಕತೆಗಳನ್ನು ಕೇಳಿದರೂ ಅವನು ತನ್ನ ಹೀನ ಗುಣಗಳನ್ನು ಬಿಡುವುದಿಲ್ಲ.

25. ಮೂಲ : ಎಡ್ಡಿದೆಲುಪವಚ್ಚು ನೇಡಾದಿ ಕೈನನು
ಮೌನಿದೆಲುಪವಚ್ಚು ಮಾಸಮಂದು
ಮೊಪ್ಪೆದೆಲುಪರಾದು ಮುಪ್ಪದೇಡ್ಲಕುನೈನ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ದಡ್ಡಗರುಹ ಬಹುದು ವರ್ಷ ಒಂದಾದರು
ಮೌನಿಗರುಹ ಬಹುದು ಮಾಸದೊಳಗೆ
ಮೂರ್ಖಂಗರುಹ ಬರದು ಮೂವತ್ತು ವರುಷಕು
ವಿಶ್ವದಾಭಿರಾಮ ಕೇಳ್ವೈ ವೇಮ

ತಾತ್ಪರ್ಯ : ತಿಳಿವಳಿಕೆ ಇಲ್ಲದವನಿಗೆ ಒಂದು ವರ್ಷವೇ ಆಗಲಿ ತಿಳಿಯ ಹೇಳಬಹುದು. ಮೌನಿಯಾದವನಿಗೆ ಒಂದು ಮಾಸದೊಳಗೆ ತಿಳಿಸಬಹುದು. ಆದರೆ ಮೂರ್ಖನಿಗೆ ಮಾತ್ರ ಮೂವತ್ತು ವರುಷ ಕಷ್ಟಪಟ್ಟರೂ ಅವನಿಗೆ ತಿಳಿಸಲಾಗದು.

26. ಮೂಲ : ಏರುದಾಟಿ ಮಿಟ್ಟಕೇಗಿನ ಪುರುಷುಂಡು
ಪುಟ್ಟಿ ಸರಕು ಗೊನಕ ಪೋಯಿನಟ್ಲು
ಯೋಗ ಪುರುಷುಡೇಲಯೊಡಲ ಪಾಟಿಂಚುರಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಹೊಳೆಯ ದಾಟಿ ದಡವ ಸೇರಿದ ಪುರುಷನು
ನಾವೆ ಗೊಡವೆ ತೊರೆದು ಸಾಗಿದಂತೆ
ಯೋಗ ಪುರುಷನೇಕೆ ಒಡಲ ಪಾಟಿಸುವನ್ನೆ
ವಿಶ್ವದಾಭಿರಾಮ ಕೇಳ್ವೈ ವೇಮ

ತಾತ್ಪರ್ಯ : ಹೊಳೆಯನ್ನು ದಾಟಿ ಮುಂದೆ ನಡೆದ ಮನುಷ್ಯನು ನಾವೆಯನ್ನು ಲಕ್ಷ್ಯ ಮಾಡದೆ ತನ್ನ ದಾರಿಯಲ್ಲಿ ಸಾಗುವಂತೆ ಯೋಗ ಪುರುಷನು ಹಸಿವಿನ ಬಾಧೆಯನ್ನು ಲಕ್ಷ್ಯ ಮಾಡುವುದಿಲ್ಲ. ಹೊಟ್ಟೆ ಹೊರೆದುಕೊಳ್ಳುವ ಯಾವ ಕೆಲಸವನ್ನೂ ಅವನು ಮಾಡುವುದಿಲ್ಲ.

27. ಮೂಲ : ಒಕರಿ ನೋರು ಗೊಟ್ಟಿ ನೊಕರು ಭಕ್ಷಿಂತುರು
ವಾರಿ ನೋರು ಮಿತ್ತಿ ವರುಸ ಗೊಟ್ಟು
ಚೇಪಪಿಂಡು ನೆಲ್ಲ ಚೇಪಲ ಚಂಪುನು
ಜನಮು ಚೇಪಪಿಂಡು ಚಂಪು ವೇಮ

ಅನುವಾದ : ಒಬ್ಬ ಮತ್ತೊಬ್ಬನ ಬಾಯಿ ಬಡಿದು ತಿನ್ನುವ
ಅವನ ಬಾಯಿ ಯಮನು ಬಿಡದೆ ಬಡಿವ
ಮೀನು ಮರಿಗಳನ್ನು ಮೀನುಗಳು ತಾ ಕೊಲ್ಲಲು
ಮೀನುಗಳ ಜನರು ಕೊಲ್ಲುವರು ವೇಮ

ತಾತ್ಪರ್ಯ : ಸಣ್ಣ ಮೀನುಗಳನ್ನು ದೊಡ್ಡ ಮೀನುಗಳು ನುಂಗುತ್ತವೆ. ದೊಡ್ಡ ಮೀನುಗಳನ್ನು ಜನರು ಹಿಡಿದು ತಿನ್ನುತ್ತಾರೆ. ಅದರಂತೆ ಜನರು ಒಬ್ಬರ ಬಾಯಿ ಒಬ್ಬರು ಬಡಿದು ಮೋಸ ಮಾಡಿ ಬದುಕುತ್ತಾರೆ. ಆದರೆ ಅವರನ್ನು ಯಮನು ಬಿಡದೆ ಬಡಿದು ಎಳೆದೊಯ್ಯುತ್ತಾನೆ.

28. ಮೂಲ : ಓಗು ನೋಗು ಮೆಚ್ಚು ನೊನರಂಗ ನಜ್ಞಾನಿ
ಭಾವ ಮಿಚ್ಚಿ ಮೆಚ್ಚು ಪರಮ ಲುಬ್ಧು
ಪಂದಿ ಬುರದ ಮೆಚ್ಚು ಪನ್ನೀರು ಮೆಚ್ಚುನಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಮೂರ್ಖ ಮೂರ್ಖಂಗೊಲಿವ ಒಪ್ಪುತ ಅಜ್ಞಾನಿ
ಮನವ ಕೊಟ್ಟು ಬೆರೆವ ಪರಮಲುಬ್ಧ
ಹಂದಿ ಕೆಸರ ಮೆಚ್ಚು ಪನ್ನೀರ ಮೆಚ್ಚದೈ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಹಂದಿಯ ಮೇಲೆ ಸುವಾಸನೆಯುಳ್ಳ ಪನ್ನೀರನ್ನು ಸುರಿದರೆ ಅದಕ್ಕೆ ಮೆಚ್ಚುಗೆಯಾಗುವುದಿಲ್ಲ. ಕೆಸರನ್ನು ಅದರ ಮೇಲೆ ಸುರಿದರೆ ಆಗ ಅದಕ್ಕೆ ಆನಂದವಾಗುತ್ತದೆ. ಅದೇ ರೀತಿ ಮೂರ್ಖರು ಮೂರ್ಖರನ್ನು ಮಾತ್ರ ಬಹುವಾಗಿ ಮೆಚ್ಚುತ್ತಾರೆ.

29. ಮೂಲ : ಕನಿಯು ಗಾನ ಲೇಡು ಕದಲಿಂಪಡಾ ನೋರು
ವಿನಿಯು ವಿನಗಲೇಡು ವಿಸ್ಮಯಮುನ
ಸಂಪದ ಗಲವಾನಿ ಸನ್ನಿಪಾತಕಮದಿ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕಂಡು ಕಾಣದಿಪನು ಕದಲಿಸ ತುಟಿಗಳ
ಕೇಳಿ ಕೇಳದಂತಿಪನು ವಿಸ್ಮಯದಿ
ಸಂಪದ ವಿರುವವನ ಸನ್ನಿಪಾತವೆದುವೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ನೋಡುವವರಿಗೆ ಆಶ್ಚರ್ಯವಾಗುವಂತೆ, ಸಂಪತ್ತುಳ್ಳವನು ಇತರರು ತನ್ನಲ್ಲಿಗೆ ಬಂದಾಗ ನೋಡಿಯೂ ನೋಡದಂತೆ, ಇತರರು ಮಾತನಾಡಿಸಿದರೆ, ಕೇಳಿಯೂ ಕೇಳಿಸದಂತೆ ಇದ್ದು ಬಿಡುತ್ತಾನೆ. ಇದು ಸಂಪತ್ತು ಇರುವವನಿಗೆ ತಗಲುವ ಸನ್ನಿಪಾತದಂತಹ ಒಂದು ಖಾಯಿಲೆ.

30. ಮೂಲ : ಕನ್ನು ಪೋವುವಾಡು ಗಾಳ್ಳು ಪೋಯಿನವಾಡು
ನುಭಯು ಲರಯು ಗೂಡಿ ನುಂಡು ನಟ್ಲು
ಪೇದ ಪೇದಗೂಡಿ ಪೆನಗೊನಿಯುಂದುರು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕಣ್ಣು ಹೋದವನು ಕಾಲಿಲ್ಲದ ಕುಂಟನು
ಈರ್ವರು ಜತೆಗೂಡಿ ಇರುವ ತೆರದಿ
ಬಡವ ಬಡವ ಸೇರಿ ತೆಕ್ಕೆಗೊಂಡಿರುವರು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಕಾಲಿಲ್ಲದವನು ಕಣ್ಣಿಲ್ಲದವನು ಒಟ್ಟಿಗೆ ಸೇರಿ ಒಬ್ಬರಿಗೊಬ್ಬರು ಸಹಾಯ ಮಾಡುತ್ತಾ ಜೀವನವನ್ನು ಸಾಗಿಸುತ್ತಾರೆ. ಅದೇ ರೀತಿ ಬಡವರು ಅನ್ಯೋನ್ಯದಿಂದ ಕೂಡಿಕೊಂಡಿರುತ್ತಾರೆ. ಬಡವನ ಕಷ್ಟಗಳು ಬಡವನಿಗೆ ಅರಿವಾಗುತ್ತದೆಯೇ ವಿನಃ ಶ್ರೀಮಂತರಿಗೆ ಅರಿವಾಗುವುದಿಲ್ಲ.

31. ಮೂಲ : ಕಸ್ತೂರಿ ಪುಟು ಚೂಡ ಕಾಂತಿ ನಲ್ಲಗ ನುಂಡು
ಪರಿಮಳಿಂಚು ದಾನಿ ಪರಿಮಳಂಬು
ಗುರುವುಲಯಿನ ವಾರಿ ಗುಣಮುಲೀಲಾಗುರಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕಸ್ತೂರಿಯದು ನೋಡೆ ಕಾಂತಿ ಕಪ್ಪಗಿಹುದು
ಪರಿಮಳಿಸುವುದು ಅದರ ಪರಿಮಳವು
ಗುರುಗಳಾದವರ ಗುಣಗಳಾತೆರನಿಹುದೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ನೋಡುವುದಕ್ಕೆ ಕಸ್ತೂರಿ ಇದ್ದಲಿನಂತೆ ಕಪ್ಪಗೆ ಕಾಣುತ್ತದೆ. ಆದರೆ ಅದು ತನ್ನ ಪರಿಮಳಗಳನ್ನು ಬೀರುತ್ತಿರುತ್ತದೆ. ಅಂತೆಯೇ ಗುರುಗಳಾದವರು ಇತರೆ ಮನುಷ್ಯರಂತೆ ಕಂಡರೂ ಅವರು ಸದ್ಗುಣ ಸಂಪನ್ನರಾಗಿರುತ್ತಾರೆ. ಅವರ ಅಂತರಂಗ ಪರಿಶುದ್ಧವಾಗಿರುತ್ತದೆ.

32. ಮೂಲ : ಕಲಿಮಿ ಗಲಿಗೆ ನೇನಿ ಕಾಮುಗಾ ಚೂತುರು
ಲೇಮಿ ಚೇತ ಚಿಕ್ಕಿ ಲೇಮಲಧಿಪು
ಮದನು ವಂಟಿವಾನಿ ಮಾಲಗಾ ಚೂತುರು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಸಂಪದ ವಿರೆ ಮದನನಂತೆಯೆ ಕಾಂಬರು
ಬಡತನಕ್ಕೆ ಸಿಕ್ಕಿ ತೊಳಲುತಿರಲವನು
ಮಾರನಂತಿರಲು ಹೊಲೆಯನಂತೆ ಕಾಣುವರು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಜನ, ಐಶ್ವರ್ಯ ಉಳ್ಳವನನ್ನು ಮನ್ಮಥನಂತೆ ಕಾಣುತ್ತಾರೆ. ಬಡತನದಲ್ಲಿ ಸಿಲುಕಿ ತೊಂದರೆಗಳಲ್ಲಿದ್ದರೆ, ಅವನು ಮನ್ಮಥನಂತಿದ್ದರೂ ಹೊಲೆಯನಂತೆ ಕಾಣುತ್ತಾರೆ. ಹಣವಿದ್ದರೆ ಜನಮನ್ನಣೆ ಸಿಗುತ್ತದೆ.

33. ಮೂಲ : ಕಡುಪುಕೇಲ ಮೀರು ಕಳವಳಪಡೆದರು
ಕಡುಪುಕೇಲ ತೃಪ್ತಿ ಕಲುಗ ಕುಂಡು
ಗಡುಪು ರಾತಿಲೋನಿ ಕಪ್ಪಕು ಗಲುಗದಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಹೊಟ್ಟೆಗೇಕೆ ನೀವು ಕಳವಳಪಡುವಿರಿ
ಹೊಟ್ಟೆಗೇಕೆ ತೃಪ್ತಿ ದೊರೆಯದಿಹುದು
ಹೊಟ್ಟೆ ಕಲ್ಲಿನೊಳಗಿಪ್ಪಾ ಕಪ್ಪೆಗಿರದೇಂ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಹೊಟ್ಟೆಪಾಡಿಗೋಸ್ಕರ ಏನೆಲ್ಲಾ ಕೆಲಸಗಳನ್ನು ಮಾಡುತ್ತಾರೆ. ಜನಗಳಿಗೆ ಹೊಟ್ಟೆಯ ಚಿಂತೆ ಬಹಳಷ್ಟು. ಹೊಟ್ಟೆಗೆ ತೃಪ್ತಿ ಇರುತ್ತೆ. ಅದನ್ನು ತೃಪ್ತಿಗೊಳಿಸುವ ಬಗೆ ಬೇರೆ. ಹೊಟ್ಟೆ ಎಂಬುದು ಕಲ್ಲಿನೊಳಗೆ ಅಡಗಿರುವ ಕಪ್ಪೆಗೆ ಇಲ್ಲವೇನು ? ಅದು ಹೇಗೆ ತನ್ನ ಹೊಟ್ಟೆಯನ್ನು ಹೊರೆಯುತ್ತದೆ. ಪರಮಾತ್ಮನು ಎಲ್ಲವನ್ನೂ ಸರಿತೂಗಿಸುತ್ತಾನೆ.

34. ಮೂಲ : ಕುಲಮು ಲೋನ ನೊಕಂಡು ಗುಣವಂತುಡುಂಡೆನಾ
ಕುಲಮು ವೆಲಯು ವಾನಿ ಗುಣಮು ಚೇತ
ವೆಲಯು ವನಮು ಲೋನ ಮಲಯಜಂಬುನ್ನಟ್ಲು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕುಲದೊಳೋರ್ವ ಪುರುಷ ಗುಣವಂತ ತಾನಿರೆ
ಕುಲವು ಬೆಳಗು ಅವನ ಗುಣಗಳಿಂದ
ಬೆಳಗು ವನದೊಳಗೆ ಮಲಯಜವದಿರುವಂತೆ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಶ್ರೀಗಂಧದ ಮರಗಳು ಕಾಡಿನಲ್ಲಿ ಬೆಳದಿದ್ದರೆ ಆ ಕಾಡಿಗೆ ಒಂದು ಅಲಂಕಾರ. ಸ್ವಲ್ಪ ಬೆಂಕಿ ತಾಕಿದರೆ ಅದರ ಸುವಾಸನೆ ಕಾಡೆಲ್ಲಾ ಹರಡುತ್ತದೆ. ಅದೇ ರೀತಿ ಗುಣವಂತನಾದವ ಒಬ್ಬ ಹುಟ್ಟಿದರೆ, ಅವನ ಗುಣಗಳಿಂದ ಅವನ ಕುಲಕ್ಕೆ ಒಂದು ಒಳ್ಳೆಯ ಹೆಸರು ಬರುತ್ತದೆ.

35. ಮೂಲ : ಕುಕ್ಕ ತೋಕದೆಚ್ಚಿ ಗೊಟ್ಟಂಬು ಚೇರ್ಚಿನ
ಗ್ರೊೞವಿ ಚೆಂತ ನುಂಡು ಗೊಂತ ತಡವು
ಯೆಂತ ಚೆಪ್ಪ ಚೆಡುಗು ಪಂಥಂಬು ಮಾನುನಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ನಾಯಿ ಬಾಲವದನು ಗೊಟ್ಟಕೆ ಸೇರಿಸೆ
ಕೋವಿನಂತೆ ಇಹುದು ಸ್ವಲ್ಪ ಕಾಲ
ದುಷ್ಟಗೆಷ್ಟು ಪೇಳೆ ಕೆಡುಪಂಥ ಬಿಡುವನೇ
ವಿಶ್ವದಾಭಿರಾಮ ಕೇಳ್ವೈ ವೇಮ

ತಾತ್ಪರ್ಯ : ನಾಯಿ ಬಾಲವನ್ನು ಒಂದು ಕೊಳವೆಗೆ ಸೇರಿಸಿದರೆ, ಕೊಳವೆಯಲ್ಲಿರುವವರೆಗೆ ಅದು ನೇರವಾಗಿರುತ್ತದೆ. ಗೊಟ್ಟದಿಂದ ಅದನ್ನು ಹೊರಕ್ಕೆ ತೆಗೆದರೆ, ಮತ್ತೆ ಅದು ಮೊದಲಿನಂತೆ ಡೊಂಕಾಗಿರುತ್ತದೆ. ಅದೇ ರೀತಿ ದುರುಳನಿಗೆ ಎಷ್ಟು ನೀತಿ ಹೇಳಿದರೂ ಕೇಳುವಷ್ಟು ಕಾಲ ಸುಗುಣಿಯಂತೆ ಇರುತ್ತಾನೆ. ನಂತರ ಪುನಃ ತನ್ನ ದುರ್ಗುಣಗಳಲ್ಲಿ ತೊಡಗುತ್ತಾನೆ.

36. ಮೂಲ : ಕೂಲಿ ನಾಲಿ ಚೇಸಿ ಗುಲ್ಲಾಪು ಪನಿ ಚೇಸಿ
ತೆಚ್ಚಿಪೆಟ್ಟ ನಾಲು ಮೆಚ್ಚನೇರ್ಚು
ಲೇಮಿ ಚಿಕ್ಕು ವಿಭುನಿ ವೇಪಾರು ದಿಟ್ಟುನು
ವಿಶ್ವದಾಭಿರಾಮ ಕೇಳ್ವೈ ವೇಮ

ಅನುವಾದ : ಕೂಲಿ ನಾಲಿ ಮಾಡಿ ಆಳಾಗಿ ದುಡಿಯುತ್ತೆ
ತಂದು ಕೊಡಲು ಮಡದಿ ಮೆಚ್ಚುತಿಹಳು
ಬಡವನಾಗೆ ಪತಿಯ ಸಾವಿರ ಬೈವಳು
ವಿಶ್ವದಾಭಿರಾಮ ಕೇಳ್ವೈ ವೇಮ

ತಾತ್ಪರ್ಯ : ಕೂಲಿ ನಾಲಿ ಮಾಡಿಯೋ, ಜೀತ ಮಾಡಿಯೋ ದುಡಿದು ತಂದುಕೊಟ್ಟರೆ ಹೆಂಡತಿ ಗಂಡನನ್ನು ಮೆಚ್ಚಿಕೊಳ್ಳುತ್ತಾಳೆ. ಬಡತನ ಬಂದಾಗ ಮೈಯಲ್ಲಿ ಶಕ್ತಿ ಇಲ್ಲದೆ ದುಡಿಯದೆ ಇರುವಾಗ ಹೆಂಡತಿ ಗಂಡನನ್ನು ಬಗೆ ಬಗೆಯಾಗಿ ನಿಂದಿಸುತ್ತಾಳೆ.

37. ಮೂಲ : ಕೋತಿ ಬಟ್ಟಿ ತೆಚ್ಚಿ ಕೊತ್ತ ಪಟ್ಟಮು ಗಟ್ಟಿ
ಕೊಂಡ ಮುಚ್ಚುಲೆಲ್ಲ ಕೊಲಚಿನಟ್ಲು
ನೀತಿ ಹೀನು ಲೊದ್ದ ನಿರ್ಭಾಗ್ಯುಲುಂದುರು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕಪಿಯು ಹಿಡಿದು ತಂದು ಹೊಸ ವಸ್ತ್ರವ ನುಡಿಸಿ
ಕೊಂಡ ಕಪಿಗಳು ಉಪಚರಿಸುವಂತೆ
ನೀತಿ ಹೀನರಲ್ಲಿ ನಿರ್ಭಾಗ್ಯರಿರುವರೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಕಾಡಿನ ಕಪಿಗಳೆಲ್ಲ ಸೇರಿ ಒಂದು ಕೋತಿಯನ್ನು ಹಿಡಿದು ಅದಕ್ಕೆ ಹೊಸ ವಸ್ತ್ರ ಉಡಿಸಿ ಅದು ತಮ್ಮ ಒಡೆಯನೆಂದು ಉಪಚರಿಸುವಂತೆ ನೀತಿಹೀನರ ಸಂಗದಲ್ಲಿ ನಿರ್ಭಾಗ್ಯರು ಸೇರಿ ಅವರನ್ನು ಸೇವಿಸುತ್ತಾರೆ.

38. ಮೂಲ : ಕೋಪಮುನನು ಘನತ ಕೊಂಚಮ್ಮೆ ಪೋವುನು
ಕೋಪಮುನನು ಮಿಗುಲ ಗೋಡು ಚೆಂದು
ಗೋಪ ಮಡಚೆನೇನಿ ಗೋರಿಕಲೀಡೇರು
ವಿಶ್ವದಾಭಿರಾಮ ವಿನುರಾ ವೇಮ

ಅನುವಾದ : ಕೋಪದಿಂದ ಘನತೆ ಕೊಂಚವೆನಿಸುವುದೈ
ಕೋಪದಿಂದ ಬದುಕು ಬಹಳ ಕೆಡುಗು
ಕೋಪ ವಣಚಿದಲ್ಲಿ ಬಯಕೆಗಳೀಡೇರು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಕೋಪದಿಂದ ಘನತೆ ಮಾನ ಮರ್ಯಾದೆಗಳು ಕಡಿಮೆಯಾಗುತ್ತವೆ. ಕೋಪದಿಂದ ಬಾಳಲ್ಲಿ ನೆಮ್ಮದಿ ಇಲ್ಲದಾಗುತ್ತದೆ. ಅದೇ ಕೋಪವನ್ನು ತಡೆಹಿಡಿದು ಅದನ್ನು ತುಳಿದರೆ ತನ್ನ ಮನದ ಬಯಕೆಗಳು ಈಡೇರುತ್ತವೆ.

39. ಮೂಲ : ಕೋಪಮುನನು ನರಕ ಕೂಪಮು ಜಿಂದುನು
ಕೋಪಮುನನು ಗುಣಮು ಕೊಂಚೆಮುಗುನು
ಕೋಪಮುನನು ಬ್ರತುಕು ಕೊಂಚ ಮೈ ಪೋವುನು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೋಪದಿಂದ ನರಕ ಕೂಪವ ಸೇರುವ
ಕೋಪದಿಂದ ಗುಣವು ಸ್ವಲ್ಪವಹುದು
ಕೋಪದಿಂದ ಒದುಕು ಭಾರವೆನಿಸುವುದೈ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಕೋಪದಿಂದ ಜೀವನದಲ್ಲಿ ನರಕಯಾತನೆಯನ್ನು ಅನಭವಿಸಬೇಕಾಗುತ್ತದೆ. ಕೋಪದಿಂದ ಸಹನೆಯನ್ನು ಕಳೆದುಕೊಂಡು ಗುಣವು ಕಡಿಮೆಯಾಗುತ್ತದೆ. ಕೋಪದಿಂದಲೇ ಜೀವನ ಭಾರವೆನಿಸಿ ಕಷ್ಟತರವಾಗುತ್ತದೆ. ಕೋಪ ಒಳ್ಳೆಯದಲ್ಲವೆನ್ನುವುದು ಸರ್ವವಿಧಿತ.

40. ಮೂಲ : ಗಂಗ ಗೋವು ಪಾಲು ಗೆಂಟೆ ಡೈನನು ಚಾಲು
ಕಡವಡಯಿನ ನೇಮಿ ಖರಮು ಪಾಲು
ಭಕ್ತಿ ಗಲುಗು ಕೂಡು ಪಟ್ಟೆಡಯಿನನು ಚಾಲು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಗಂಗೆ ಗೋವು ಹಾಲು ಚಮಚವಿರಲು ಸಾಕು
ಕತ್ತೆ ಹಾಲದೇಕೆ ಗಡಿಗೆ ತುಂಬ
ಭಕ್ತಿಯುಳ್ಳ ಕೂಳು ಒಂದು ತುತ್ತೇ ಸಾಕು
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಹಸುವಿನ ಹಾಲು ಒಂದೇ ಒಂದು ಚಮಚವಿದ್ದರೂ ಅದು ಅಮೃತ. ಅದರ ರುಚಿಯೋ ರುಚಿ. ಆದರೆ ಒಂದು ಗಡಿಗೆ ತುಂಬ ಕತ್ತೆ ಹಾಲು ಇದ್ದರೂ ಅದು ಕೆಲಸಕ್ಕೆ ಬರುವುದಿಲ್ಲ. ಆದರಂತೆ ಭಕ್ತಿಯಿಂದ ನೀಡಿದ ಅನ್ನ ಒಂದು ತುತ್ತಾದರೂ ಸಾಕು. ಅದರಿಂದ ತೆಗೆದುಕೊಳ್ಳುವವನಿಗೆ ತೃಪ್ತಿಯೂ, ಕೊಡುವವನಿಗೆ ಪುಣ್ಯಫಲವೂ ಸಿಗುತ್ತದೆ.

41. ಮೂಲ : ಗಂಗ ಪಾರುಚುಂಡು ಕದಲನಿ ಗತಿ ತೋಡ
ಮುರಿಕಿ ಪಾರುಚುಂಡು ಮ್ರೋತ ತೋಡ
ದಾತ ಯೋರ್ಚಿನಟ್ಲ ಧಮುಡೋರ್ವಗಾಲೇಡು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಗಂಗೆ ಹರಿಯುತಿಹುದು ಕದಲದೆ ತುಳುಕದೆ
ಮೊಹರಿ ಹರಿಯುತಿಹುದು ಭೋರ್ಗರೆಯುತ
ದಾತ ಸಹಿಸುವಂತೆ ಅಧಮ ಸೈರಿಸುವನೆ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಗಂಗಾ ನದಿಯು ತುಂಬಿ ಹರಿಯುವಾಗ ಅದು ತುಳುಕದೆ ಶಬ್ದ ಮಾಡದೆ ಹರಿಯುತ್ತದೆ. ಆದರೆ ಕೊಳಕು ನೀರಿನ ಕಾಲುವೆ ಬಹಳ ಶಬ್ದ ಮಾಡುತ್ತ ಹರಿಯುತ್ತದೆ. ಅದೇ ರೀತಿ ದಾನ ಮಾಡುವ ದಾತನು ಕೊಟ್ಟದ್ದನ್ನು ಮರೆತು ತನ್ನ ದಾನವನ್ನು ಇತರರಲ್ಲಿ ಹೇಳುವುದಿಲ್ಲ. ಅಧಮನು ತಾನು ಕೊಟ್ಟಿದ್ದನ್ನು ಇತರರಿಗೆ ಸಾರಿ ಸಾರಿ ಹೇಳುತ್ತಾನೆ.

42. ಮೂಲ : ಗಾಜು ಕುಪ್ಪೆಲೋನ ಗಡಗುಚು ದೀಪಂಬ
ದೆಟ್ಟು ಲುಂಡು ಜ್ಞಾನ ಮಟ್ಟು ಲುಂಡು
ತೆಲಿಸಿನಟ್ಟಿವಾರಿ ದೇಹಂಬುಲಂದುನು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಗಾಜು ಬುರುಡೆಯೊಳು ಬೆಳಗುತಿಹ ದೀಪವ
ದೆಂತಿರುವುದೋ ಜ್ಞಾನವಂತಿರುವುದು
ತಿಳಿದು ಅರಿತವರ ಒಡಲಲಿ ಬೆಳಗುವುದು
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ಗಾಜು ಬುರುಡಯಲ್ಲಿ (ಲಾಂದ್ರ) ದೀಪವು ಉರಿಯುವಾಗ, ಒಂದೇ ಸಮನೆ ಗಾಳಿಯ ಬಡಿತಕ್ಕೆ ಸಿಕ್ಕದೆ ಅಲುಗಾಡದೆ ಉರಿಯುತ್ತದೆ. ಅದೇ ರೀತಿ ಜ್ಞಾನ ಜ್ಯೋತಿಯು ಅರಿತವರ ಒಡಲಲ್ಲಿ ಒಂದೇ ಸಮನೆ ಕುಗ್ಗದೆ ಪ್ರಕಾಶಿಸಿಸುತ್ತಿರುತ್ತದೆ.

43. ಮೂಲ : ಗುಣಯುತುನಕು ಮೇಲು ಗೋರಂತ ಚೇಸಿನ
ಕೊಂಡ ಯಶೌನುವಾನಿ ಗುಣಮು ಚೇತ
ಕೊಂಡ ಕೊದ್ದಿ ಮೇಲು ಗುಣಹೀನುಡೆರು ಗುನಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಗುಣವಂತನಿಗೆ ಒಳಿತು ಕಿಂಚಿತ್ತುಗೈದೊಡೆ
ಬೆಟ್ಟವಾಗು ಅವನ ಗುಣಗಳಿಂದ
ಬೆಟ್ಟದಷ್ಟು ಒಳಿತ ಗುಣಹೀನ ಬಲ್ಲನೇ
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ಗುಣವಂತನಿಗೆ ಕಿಂಚಿತ್ತು ಒಳ್ಳೆಯದನ್ನು ಮಾಡಿದರೆ ಅದರ ಫಲವು ಅವನ ಗುಣಗಳಿಂದ ಬೆಟ್ಟದಷ್ಟಾಗಿ ರೂಪಿಸುತ್ತದೆ. ಆದರೆ ಗುಣಹೀನನಿಗೆ ಬೆಟ್ಟದಷ್ಟು ಉಪಕಾರ ಮಾಡಿದರೂ ಸಹ ಅದು ನಿಷ್ಪ್ರಯೋಜಕವಾಗಿ ಹೋಗುತ್ತದೆ. ಗುಣಹೀನನು ಅವನಿಗಾದ ಉಪಕಾರವನ್ನು ಎಂದೂ ಸ್ಮರಿಸುವುದಿಲ್ಲ.

44. ಮೂಲ : ಚಂಪದಗಿನಯಟ್ಟಿ ಶತ್ರುವು ತನಚೇತ
ಚಿಕ್ಕನೇನಿ ಕೀಡುಸೇಯರಾದು
ಪೊಸಗ ಮೇಲು ಚೇಸಿ ಪೊಮ್ಮನುಟೇಚಾಲು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೊಲ್ಲಲರ್ಹನಾದ ಶತ್ರು ತನ್ನ ಕೈಯಲಿ
ಸಿಗಲು ಅವನಿಗೆ ಕೇಡು ಬಗೆಯ ಸಲ್ಲ
ಬದಲು ಹಿತವ ಬಯಸಿ ಪೋಗೆಂದರದು ಸಾಕು
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ಕೊಲ್ಲಲು ಅರ್ಹನಾದಂತ ಶತ್ರುವು ತನ್ನ ಕೈಯಲ್ಲಿ ಸಿಕ್ಕಿ ಬಿದ್ದಾಗ ಅವನಿಗೆ ಹಿಂಸೆ ಮಾಡದೆ ಅವನಿಗೆ ಒಳ್ಳೆಯದನ್ನು ಬಯಸಿ ಹೋಗೆಂದು ಕಳುಹಿಸಿದರೆ, ಅವನಿಗೆ ಅದರಿಂದ ಆಗುವ ಅವಮಾನ ಶಿಕ್ಷೆಗೆ ಸಮಾನವಾದುದು.

45. ಮೂಲ : ಚದುವುಲುದುನು ರಾಜ್ಯಪದವುಲುದುನು ಪಾಡಿ
ಮೊದವುಲಂದುನು ಸ್ತ್ರೀಲ ಪೆದವುಲಂದು
ನಾಶಲುಡುಗುನಟ್ಟಿ ಯಯ್ಯುಲು ಮುಕ್ತುಲು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕಲಿಕೆಯುಲಿ ರಾಜ್ಯಪದವಿಗಳಲಿ ನೆಲದಲುಂ
ಹಸುಗಳಲ್ಲಿ ಸ್ತ್ರೀಯು ತುಟಿಗಳಲ್ಲಿ
ಆಸೆ ಉಡುಗಿದಂಥ ಮನುಜರು ಮುಕ್ತರೈ
ವಿಶ್ವದಾಭಿರಾಮ ಕೇಳ್ಯೆ ವೇಮ

ತಾತ್ಪರ್ಯ : ಓದಿ ಘನ ಪಂಡಿತನಾಗಬೇಕೆಂಬ ಆಸೆ, ರಾಜ್ಯಾಧಿಕಾರ ಮಾಡಬೇಕೆಂಬ ಆಸೆ, ಹಸು, ಭೂ ಸಂಪತ್ತು ಪಡೆಯುಬೇಕೆಂಬ ಆಸೆ. ಸ್ತ್ರೀಯರನ್ನು ಅನುಭವಿಸಬೇಕೆಂಬ ಆಸೆ, ಇವೆಲ್ಲವನ್ನೂ ತೊರೆದ ಮನುಜನು ನಿಜವಾಗಿ ಮುಕ್ತನೇ ಸರಿ.

46. ಮೂಲ : ಚೆಪ್ಪುಲೋನಿ ರಾಯಿ ಚೆವಿಲೋನಿ ಜೋರೀಗ
ಕಂಟಿ ಲೋನಿ ನಲುಸು ಕಾಲಿ ಮುಲ್ಲು
ಯಿಂಟಿ ಲೋನಿ ಪೋರು ನಿಂತಂತ ಗಾದಯಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಮೆಟ್ಟಿನಲ್ಲಿ ಕಲ್ಲು ಕಿವಿಯೊಳಗೆ ತೊಣಚಿ
ಕಣ್ಣಿನಲ್ಲಿ ಧೂಳು ಕಾಲ ಮುಳ್ಳು
ಮನೆಯೊಳಗಿನ ಜಗಳ ಅಷ್ಟಿಷ್ಟು ಅಲ್ಲವೈ
ವಿಶ್ವದಾಭಿರಾಮ ಕೇಳ್ಯೆ ವೇಮ

ತಾತ್ಪರ್ಯ : ಕೆರದಲ್ಲಿ ಒಂದು ಕಲ್ಲು ಸೇರಿಕೊಂಡರೆ ಕಿವಿಯಲ್ಲಿ ತೊಣಚಿ ಸೇರಿದರೆ ಕಣ್ಣಿನಲ್ಲಿ ಧೂಳು ಬಿದ್ದರೆ, ಕಾಲಿನಲ್ಲಿ ಮುಳ್ಳು ಹೊಕ್ಕರೆ ; ನಿತ್ಯವೂ ಗೃಹ ಕಲಹ, ಇವುಗಳಿಂದ ಆಗುವ ಸಂಕಟ ವಿವರಿಸಲಾಗದಷ್ಟು ಉಂಟಾಗುತ್ತದೆ.

47. ಮೂಲ : ಚಿಕ್ಕಿಯುನ್ನ ವೇಳ ಸಿಂಹಂಬು ನೈನನೀ
ಬಕ್ಕ ಕುಕ್ಕಚೇರಿ ಭಾದ ಸೇಯು
ಬಲಿಮಿ ಲೇನಿ ವೇಳ ಪಂತಂಬು ಚೆಲ್ಲದು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಬಲವು ಕುಂದಿದಾಗ ಸಿಂಹವೆ ಇರಲೇಕೆ
ನಾಯಿ ನರಿಯು ಸೇರಿ ಬಾಧೆ ಗೊಳಿಸು
ಬಲವಿಲ್ಲದ ಸಮಯದಿ ಪಂಥವು ಸಲ್ಲದೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಬಲವು ಹೋದ ಕಾಲದಲ್ಲಿ ಸಿಂಹವೇ ಆಗಲಿ ನರಿ ನಾಯಿಗಳಿಗೆ ಸಿಕ್ಕಿ ಅವುಗಳಿಂದ ತೊಂದರೆಯನ್ನು ಅನುಭವಿಸುತ್ತದೆ. ಆದುದರಿಂದ ಬಲವಿಲ್ಲದಿರುವಾಗ ಪಂಥವನ್ನು ಬಿಡಬೇಕು.

48. ಮೂಲ : ಚಿತ್ತಶುದ್ಧಿಗಲ್ಗಿ ಚೇಸಿನ ಪುಣ್ಯಂಬು
ಕೊಂಚೆಮಯಿನ ನದಿಯು ಗೊದುವಕಾದು
ವಿತ್ತನಂಬು ಮರ್ರಿವೃಕ್ಷಂಬುನಕು ನೆಂತ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಚಿತ್ತಶುದ್ಧಿಯಿಂದ ಮಾಡಿದ ಪುಣ್ಯವು
ಸ್ವಲ್ಪವಾದರೂ ಅದು ಕಡಿಮೆಯಲ್ಲ
ಬೀಜಮಿನಿತಾದರು ಆಲದ ಮರವದೆನಿತು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಆಲದ ಮರದ ಬೀಜವು ಬಹಳ ಚಿಕ್ಕದಾಗಿದ್ದರೂ ಅದು ಮೊಳೆತು ಬೆಳೆದಾಗ ದೊಡ್ಡ ವಟವೃಕ್ಷವಾಗುತ್ತದೆ. ಅಂತೆಯೇ ಚಿತ್ತಶುದ್ಧಿಯಿಂದ ಮಾಡಿದ ಚಿಕ್ಕ ಪುಣ್ಯಕಾರ್ಯದಿಂದ ಬರುವ ಪುಣ್ಯವು ಹೆಚ್ಚಾಗಿರುತ್ತದೆ.

49. ಮೂಲ : ಚೇಟು ವಚ್ಚೆನೇನಿ ಚೆಡನಾಡು ದೈವಂಬು
ಮೇಲು ವಚ್ಚಿನೀನಿ ಮೆಚ್ಚುದನ್ನು
ಚೇಟು ಮೇಲು ದಲಪ ಚೇಸಿನ ಕರ್ಮಮುಲೆ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೇಡು ಸಂದ ಸಮಯ ದೈವ ನಿಂದೆಯ ಗೈವ
ಒಳ್ಳೆ ಕಾಲ ಬರಲು ತನ್ನದೆನುವ
ಒಳಿತು ಕೆಡಕು ತಿಳಿಸು ತಾವಾಳ್ವ ಕರ್ಮಗಳ್
ವಿಶ್ವದಾಭಿರಾಮ ವಿನುರ ವೇಮ

ತಾತ್ಪರ್ಯ : ತನಗೆ ತೊಂದರೆಯಾದಾಗ ಮಾನವ ದೇವರನ್ನು ದೂಷಿಸುತ್ತಾನೆ. ಒಂದು ಸಮಯ ತನಗೆ ಒಳ್ಳೆಯದಾಗಿ ಅನುಕೂಲ ಸ್ಥಿತಿಗೆ ಬಂದಾಗ ಅದು ತನ್ನ ಪ್ರಯತ್ನ ತನ್ನಿಂದಾದುದು ಎಂದು ತನ್ನನ್ನು ತಾನು ಮೆಚ್ಚಿಕೊಳ್ಳುತ್ತಾನೆ. ಆದರೆ ಒಳಿತು ಕೆಡಕುಗಳೆರಡು ಅವರವರು ಮಾಡುವ ಕರ್ಮಫಲಗಳೇ ಆಗಿರುತ್ತವೆ.

50. ಮೂಲ : ತನದು ಭ್ರಾತಲೆಲ್ಲ ದಾನಂಬು ಸೇಯಂಗ
ತನಕು ಗಲವಟಂಚು ನನಗರಾದು
ತನದು ಕಾಲು ಗೋಯ ದನ ದಮ್ಮುಡೇಡ್ಚುನಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ತನ್ನ ಭ್ರಾತರೆಲ್ಲ ದಾನವಂ ಮಾಡಲು
ತನಗು ಸಿಗುವುದೆಂದು ಹೇಳಬರದು
ತನ್ನ ಕಾಲು ಕಡಿಯೆ ತಮ್ಮನಳುವನೇನು
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ಅಣ್ಣ ತಮ್ಮಂದಿರು ದಾನವನ್ನು ಮಾಡಿದರೆ ಅದರಿಂದ ತನಗೂ ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬುದು ಸುಳ್ಳು. ತನ್ನ ಕಾಲನ್ನು ಕತ್ತರಿಸಿದರೆ ತನ್ನ ತಮ್ಮನು ಅಳುತ್ತಾನೆಯೋ. ಇಲ್ಲ. ಅದರಂತೆ ಅವರವರ ಪುಣ್ಯ ಫಲ ಅವರವರಿಗೆ ಸೇರಿದ್ದು.

51. ಮೂಲ : ತప్పు లెన్నువారు తండోప తండము
ఉర్వి జనులకెల్ల నుండు దప్పు
తప్పులెన్నువారు దమ తప్పులెరుగరు
విశ్వదాభిరామ వినుర వేమ

ಅನುವಾದ : ತಪ್ಪನೆಣಿಸುವವರು ತಂಡೋಪ ತಂಡವು
ಉರ್ವಿ ಜನರಲೆಲ್ಲ ಇಹುದು ತಪ್ಪು
ತಪ್ಪನೆಣಿಸುವವರು ತಮ್ಮ ತಪ್ಪರಿಯರ್ರೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಇತರರಲ್ಲಿ ತಪ್ಪುಗಳನ್ನು ಹುಡುಕುವವರು ಬಹಳ ಜನರಿದ್ದಾರೆ. ಎಲ್ಲಾ ಮಾನವರೂ ಒಂದಲ್ಲ ಒಂದು ತಪ್ಪು ಮಾಡುತ್ತಾರೆ. ಇತರರಲ್ಲಿ ತಪ್ಪುಗಳನ್ನು ಹುಡುಕುವ ಜನ ತಮ್ಮ ತಪ್ಪುಗಳನ್ನು ಅರಿಯರು. ಇಲ್ಲವೆ ತಮ್ಮ ತಪ್ಪನ್ನು ಮರೆಮಾಚುತ್ತಾರೆ.

52. ಮೂಲ : తల్లి తండ్రిమీద దయలేని పుత్రుండు
పుట్టనేమి ? వాడు గిట్టనేమి ?
పుట్టలోన చెదలు పుట్టదాగిట్టదా
విశ్వదాభిరామ వినుర వేమ

ಅನುವಾದ : ತಾಯಿ ತಂದೆಯಲ್ಲಿ ದಯೆ ಇಲ್ಲದಾ ತನಯ
ಹುಟ್ಟಲೇನು ? ಅವನು ಸಾಯಲೇನು
ಹುತ್ತದಲ್ಲಿ ಗೆದ್ದಲುಳ ಪುಟ್ಟದೇಂ ? ಸಾಯದೇಂ ?
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ತಂದೆ ತಾಯಿಯಲ್ಲಿ ದಯೆಯನ್ನು ತೋರದ ಮಗನು ಹುಟ್ಟಿದರೇನು ಅವನು ಸತ್ತರೇನು. ಹುತ್ತದಲ್ಲಿ ಗೆದ್ದಲು ಹುಟ್ಟಿ ದುಡಿದು, ಸಾಯುವ ಹಾಗೆ ಮನುಷ್ಯನಾಗಿ ಹುಟ್ಟಿಯೂ ಗೆದ್ದಲು ಹುಳಕ್ಕೆ ಸಮಾನವೆನಿಸುತ್ತಾನೆ.

53. ಮೂಲ : ತಲ್ಲಿ ತಂಡ್ರುಲಂದುದಾರಿದ್ರ್ಯ ಯುತುಲಂದು
ನಮ್ಮಿನ ನಿರುಪೇದ ನರುಲಂದು
ಪ್ರಭುವುಲಂದು ಜೂಡ ಭಯಭಕ್ತುಲಮರಿನ
ನಿಹಮು ಪರಮು ಗಲ್ಗು ನೆಸಗು ವೇಮ

ಅನುವಾದ : ತಂದೆ ತಾಯಿಯಲ್ಲಿ ದಾರಿದ್ರ್ಯಯುತರಲ್ಲಿ
ನಂಬಿದ ಕಡು ಬಡವ ಜನರಲಂತೆ
ಪ್ರಭುಗಳಲ್ಲಿ ನೋಡೆ ಭಯಭಕ್ತಿಗಳಮರಿರೆ
ಇಹವು ಪರವು ಯಶವು ದೊರೆಗು ವೇಮ

ತಾತ್ಪರ್ಯ : ತಂದೆ ತಾಯಿಗಳಲ್ಲಿ ದಾರಿದ್ರ್ಯದಿಂದ ತೊಳಲುವ ದೀನರಲ್ಲಿ ಕಡು ಬಡವರಲ್ಲಿ ಅಧಿಕಾರಿಗಳಲ್ಲಿ ಭಯ ಭಕ್ತಿಗಳಿಂದ ನಡೆದುಕೊಂಡರೆ, ಇಹದಲ್ಲಿಯೂ, ಪರದಲ್ಲಿಯೂ ಯಶಸ್ಸು ಲಭಿಸುತ್ತದೆ.

54. ಮೂಲ : ತಾಮುಗನ್ನವಾರು ತಮುಗನ್ನವಾರುನು
ಚಚ್ಚುಟೆಲ್ಲ ತಮಕು ಸಾಕ್ಷಿಗಾದೆ
ಬ್ರತುಕುಟೆಲ್ಲ ತಮಕು ಬ್ರಹ್ಮಕಲ್ಪಂಬುಲಾ ?
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ತಾವು ಹೆತ್ತಂಥವರು ತಮ್ಮನು ಹೆತ್ತವರ್
ಸಾಯುವುದೆಲ್ಲ ತಮಗೆ ಸಾಕ್ಷಿಯಲ್ತೆ
ಬದುಕುವುದದು ತಮಗೆ ಬ್ರಹ್ಮಕಲ್ಪಂಗಳಾ
ವಿಶ್ವದಾಭಿರಾಮ ಕೇಳ್ವೈ ವೇಮ

ತಾತ್ಪರ್ಯ : ತಮ್ಮ ಕಣ್ಣೆದುರಿಗೆ ತಮ್ಮ ಮಕ್ಕಳು ತಮ್ಮ ತಂದೆ ತಾಯಿ ಸಾಯುವುದನ್ನು ನೋಡಿದಾಗ, ಜನರಿಗೆ ತಾವೂ ಒಂದು ದಿನ ಸಾಯುತ್ತೇವೆ ಎಂಬ ಸತ್ಯ ಅರಿವಾಗಬೇಕು. ಯಾರೂ ಬ್ರಹ್ಮಕಲ್ಪದ ಕ[illegible]ಂತ ಜೀವಿಸುವುದಿಲ್ಲ. ಆದರೆ ಜೀವನ ಸಾರ್ಥಕವಾಗುವಂತೆ ನಡೆಸಬೇಕು.

55. ಮೂಲ : ತಾಮಸಿಂಚಿ ಚೇಯ ದಗದೆಟ್ಟಿ ಕಾರ್ಯಂಬು
ವೇಗಿರಿಂಪ ನದಿಯು ವಿಷಮು ಮಗುನು
ಪಚ್ಚಿಕಾಯದೆಚ್ಚಿ ಪಡವೇಯ ಫಲಮೌನೆ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ತಾಮಸದೊಳು ಕಾರ್ಯವಂ ಮಾಳ್ಪುದೊಳಿತಲ್ಲ
ತಾಮಸದೊಳು ಕೆಲಸ ಕೆಡುಗು ಸಹಜ
ಹೀಚುಕಾಯ ಮಾಗಿಸೆ ಅದು ಪಕ್ವವಹುದೆ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಆತುರಪಟ್ಟು ಅಜ್ಞಾನದಿಂದ ಯಾವ ಕಾರ್ಯವನ್ನೂ ಮಾಡುವುದು ಸರಿಯಲ್ಲ. ಆತುರಪಟ್ಟು ಮಾಡುವ ಎಲ್ಲಾ ಕೆಲಸಗಳು ಕೆಟ್ಟುಹೋಗುತ್ತದೆ. ಅದು ಹೇಗೆ ಅಂದರೆ ಹೀಚು ಕಾಯಿಗಳನ್ನು ಮಾಗುವುದಕ್ಕೆ ಇಟ್ಟರೆ ಅದು ಹಣ್ಣಾಗುತ್ತದೆಯೇ ? ಇಲ್ಲ, ಕೆಟ್ಟುಹೋಗುತ್ತವೆ. ಆದ್ದರಿಂದ ಆತುರಪಡದೆ ಸೂಕ್ತ ಸಮಯದಲ್ಲಿ ಸೂಕ್ತ ಕೆಲಸ ಮಾಡಬೇಕು.

56. ಮೂಲ : ತುಮ್ಮಚೆಟ್ಟು ಮುಂಡ್ಲು ತೊಡನೇ ಪುಟ್ಟುನು
ವಿತ್ತುಲೋನನುಂಡಿ ವೆಡಲಿನಟ್ಲು
ಮೂರ್ಖುನಕುನು ಬುದ್ಧಿ ಮುಂದುಗಾ ಬುಟ್ಟುನೋ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ತುಂಬೆ ಗಿಡದ ಮುಳ್ಳು ಜತೆಯಲೆ ಬರ್ಪುದು
ಬೀಜದೊಳಗಿನಿಂದ ಮೊಳೆಯುವಂತೆ
ಮೂರ್ಖನಿಗೆ ದುರ್ಬುದ್ಧಿ ಮೊದಲೆ ಹುಟ್ಟುವುದೇನೊ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ತುಂಬೆ ಗಿಡದಲ್ಲಿ (ಜಾಲಿಗಿಡ) ಬೀಜದಿಂದ ಮೊಳಕೆ ಹೊರಡುವಾಗ ಅದರ ಜತೆಯಲ್ಲಿಯೇ ಮುಳ್ಳು ಹುಟ್ಟುತ್ತವೆ. ಅದೇ ರೀತಿ ಮೂರ್ಖನಿಗೆ ದುರ್ಬುದ್ಧಿ ತನ್ನ ಹುಟ್ಟಿನಿಂದಲೇ ಬಂದಿರುತ್ತದೆ.

57. ಮೂಲ : ತೇನೆ ತೆರೆಲು ಜಾಡೆ ತೇನೆ ಟೀಗ ಯೆರುಂಗು
ಸುಮರಸಂಬು ಜಾಡ ಭ್ರಮರ ಮೆರುಗು
ಪರಮ ಯೋಗಿ ಜಾಡ ಭಕ್ತುಂಡೆರುಂಗುನು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಜೇನುಗೂಡ ಜಾಡುಜೇನುನೊಣಕರಿವು
ಸುಮರಸದ ಜಾಡು ಭ್ರಮರವರಿವುದು
ಪರಮ ಯೋಗಿ ಜಾಡು ಭಕ್ತತಾನರಿವನ್ನೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಜೇನುಗೂಡಿನ ನಿರ್ಮಾಣ ಜೇನುನೊಣಕ್ಕೆ ತಿಳಿದಿರುತ್ತದೆ. ಹೂಗಳಲ್ಲಿನ ಜೇನು ಭ್ರಮರಕ್ಕೆ ತಿಳಿದಿರುತ್ತದೆ. ಅದೇ ರೀತಿ ಯೋಗಿಯ ವೈಖರಿ ಅವನ ಮಹತ್ವವನ್ನು ಭಕ್ತನು ಅರಿಯಲು ಶಕ್ತನಾಗಿರುತ್ತಾನೆ.

58. ಮೂಲ : ಧನಮು ಗೂಡಬೆಟ್ಟಿ ಧರ್ಮಂಬು ಸೇಯಕ
ತಾನು ದಿನಕ ಲೆಸ್ಸ ದಾಚುಗಾಕ
ತೇನೆ ನೀಗೆ ಗೂರ್ಚಿ ತೆರುವರಿಕೀಯದಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಧನವ ಕೂಡಿ ಹಾಕಿ ಧರ್ಮವ ಮಾಡದೆ
ತಾವು ಅನುಭವಿಸದೆ ಶೇಖರಿಸುವರ್
ಜೇನುನೊಣವು ಕೂಡಿಟ್ಟು ಪರರಿಗೀವಂತೆ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಲೋಭಿಯು ಧನವನ್ನು ಶೇಖರಿಸಿ ತಾನು ಭೋಗಿಸದೆ ಇತರರಿಗೂ ದಾನ ಮಾಡದೆ ಬಚ್ಚಿಡುತ್ತಾನೆ. ಜೇನುನೊಣಗಳು ಕಷ್ಟಪಟ್ಟು ಜೇನನ್ನು ಕೂಡಿ ಹಾಕುತ್ತವೆ. ಕೊನೆಗೆ ಆ ಜೇನು ಇತರರ ಪಾಲಾಗುತ್ತದೆ. ಅದೇ ರೀತಿ ಲೋಭಿಯ ಹಣವು ಪರರ ಪಾಲಾಗುತ್ತದೆ.

59. ಮೂಲ : ದಾನಮುಲನು ನನ್ನ ದಾನಮು ದೊಡ್ಡದಿ
ಗಾನಮುಲನು ಸಾಮ ಗಾನ ಮೆಚ್ಚು
ಧ್ಯಾನ ಮುಲನು ಶಿವುನಿ ಧ್ಯಾನಮು ಶ್ರೇಷ್ಠಮು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ದಾನದೊಳಗೆ ಅನ್ನದಾನವು ದೊಡ್ಡದು
ಗಾನದೊಳಗೆ ಸಾಮಗಾನವಧಿಕ
ಧ್ಯಾನದೊಳಗೆ ಶಿವನ ಧ್ಯಾನವೇ ಶ್ರೇಷ್ಠವೈ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ದಾನಗಳಲ್ಲೆಲ್ಲಾ ಅನ್ನದಾನವು ದೊಡ್ಡದು. ಗಾನದಲ್ಲಿ ಸಾಮಗಾನವು ದೊಡ್ಡದು. ಅಂತೆಯೇ ಧ್ಯಾನಗಳಲ್ಲಿ ಶಿವನನ್ನು ಕುರಿತು ಧ್ಯಾನ ಮಾಡುವುದು ಉತ್ತಮವಾದುದು.

60. ಮೂಲ : ದಾತಗಾನಿವಾನಿ ತರಚುಗಾ ವೇಡಿನ
ವಾಡು ದಾತ ಯಗುನೆ ವಸುಧಲೋನ
ನವುರು ದರ್ಭ ಯೌನೆ ಯಬ್ಧಿಲೋ ಮುಂಚಿನ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ದಾತನಲ್ಲದವನ ಅತಿಯಾಗಿ ಬೇಡಲು
ಆವನು ದಾತನೆಂತು ವಸುಧೆಯೊಳಗೆ
ಕೇಶದರ್ಭೆಯಹುದೆ ಅಬ್ಧಿಯೊಳ್ ಮುಳುಗಿಸೆ
ವಿಶ್ವದಾಭಿರಾಮ ಕೇಳ್ಳೈ ವೇಮ

ತಾತ್ಪರ್ಯ : ದಾನಿಯಲ್ಲದ ಮನುಷ್ಯನನ್ನು ಎಷ್ಟೇ ವಿಧವಾಗಿ ಬೇಡಿದರೂ ಅವನು ಕೊಡುವುದಿಲ್ಲ. ಅವನು ದಾನಿ ಎನಿಸಲಾರ. ಕೂದಲನ್ನು ಸಮುದ್ರದಲ್ಲಿ ಅದ್ದಿದರೆ ಅದು ದರ್ಭೆಯಾಗುತ್ತದೆಯೇ? ಅದೇ ರೀತಿ ಲೋಭಿಯು ಅವನ ಹುಟ್ಟುಗುಣವನ್ನು ಬಿಡುವುದಿಲ್ಲ.

61. ಮೂಲ : ದಾನ ಮಡುಗು ವಾಡು ಧರಲೋನ ನಧಮುಂಡು
ದಾನ ಮಡುಗ ಡೇನಿ ದೈವ ಸಮುಂಡು
ದಾನ ಮೀನಿವಾಡು ಧನ್ಯುಡು ಕಾಡಯಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ದಾನ ಕೇಳುವವನು ಅಧಮನು ಧರೆಯಲಿ
ದಾನ ಕೇಳದವನು ದೈವ ಸಮನು
ದಾನವೆ ಕೊಡದವನು ಧನ್ಯ ತಾನೆನಿಸನೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಇತರರಲ್ಲಿ ದಾನವನ್ನು ಬೇಡುವವನು ನೀಚನು. ದಾನವನ್ನೇ ಕೇಳದೆ ಇರುವವನು ದೇವರಿಗೆ ಸಮಾನನಾದವನು. ದಾನವನ್ನೇ ಕೊಡದೆ ಇರುವವನು ಧನ್ಯ ಎನಿಸಿಕೊಳ್ಳಲಾರ.

62. ಮೂಲ : ಧನಮು ಲೇಮಿ ಯನೆಡು ದಾವಾನಲಂಬುನು
ತನ್ನ ಚೆರುಚುನು ದರಿದಾಪು ಜರುಚು
ಧನಮು ಲೇಮಿ ಜೂಡ ದಲಚವೆ ಪಾಪಂಬು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಹಣವದಿಲ್ಲವೆನುವ ದಾವಂತ ಅನಲವು
ತನ್ನ ಕೆಡಿಸು ತನ್ನ ನೆಲೆಯ ದಹಿಸು
ಧನವಿಲ್ಲೆಂದು ಮನದಿ ಯೋಚಿಸಲ್ ಪಾಪವೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಹಣ ಕೊರತೆಯ ದಾವಂತ ಜ್ವಾಲೆ ತನ್ನನ್ನು ಪೂರ್ಣ ಕೆಡಿಸುತ್ತದೆ. ಜತೆಗೆ ತನ್ನ ನೆಲೆಯನ್ನು ನಾಶಮಾಡುತ್ತದೆ. ತನಗೆ ಸಾಕಷ್ಟು ಹಣ ಇಲ್ಲವೇ ಎಂಬುದಾಗಿ ಯೋಚಿಸುವುದೂ ಸಹ ಪಾಪವೆನಿಸುವುದು.

63. ಮೂಲ : ಚಿಕ್ಕವ್ವಾನ ಮಂಚಿ ನೀಲ ಮೊಕ್ಕಟಿ ಚಾಲು
ತಳಕು ಬೆಳಕುರಾಳ್ಳು ತಟ್ಟೆಡೇಲ
ಚದುವ ಪದ್ಯಮರಯ ಚಾಲದೊಯೊಕ್ಕಟೈನ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಚೊಕ್ಕವಿರುವ ನೀಲ ಒಂದೆ ಇರಲು ಸಾಕು
ತಳಕು ಬೆಳಕು ಕಲ್ಲುರಾಶಿಯೇಕೆ ?
ಓದಿ ತಿಳಿಯೆ ಪದ್ಯ ಒಂದಿರೆ ಸಾಲದೇ
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ತಳಕು ಬೆಳಕು ಕಲ್ಲುಗಳು ಒಂದು ತಟ್ಟೆ ತುಂಬ ಇರುವುದಕ್ಕಿಂತ ಅಪ್ಪಟ ಜಾತಿಯ ನೀಲ ಒಂದೇ ಒಂದು ಇದ್ದರೆ ಸಾಕು. ಅದೇ ರೀತಿ ತತ್ವವನ್ನು ತಿಳಿಯಲು, ಅನೇಕ ಗ್ರಂಥಗಳನ್ನು ಓದುವುದಕ್ಕಿಂತ ಒಂದೇ ಒಂದು ಒಳ್ಳೆಯ ಪದ್ಯವಿದ್ದರೆ ಸಾಕು.

64. ಮೂಲ : ನೀಳ್ಳಲೋನ ನೋಡ ನಿಗಿಡಿ ತಿನ್ನಗ ಬ್ರಾಕು
ಬೈಟ ಮೂರೆಡಯಿನ ಬ್ರಾಕ ಲೇದು
ನೆಲವುದಪ್ಪು ಚೋಟ ನೇರ್ಪರಿ ಕೊರಿಗಾಡು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಜಲದೊಳಗೆ ನಾವೆ ಲಗುಬಗೆ ದೂರಕೆ ಚಲಿಸು
ಹೊರಗೆ ಒಂದು ಮೊಳವಾದರು ಚಲಿಸದು
ನೆಲೆತಪ್ಪಿದ ಎಡೆಯೊಳು ಚತುರನು ದಡ್ಡನೈ
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ದೋಣಿ ನೀರಿನಲ್ಲಿರುವವರೆಗೆ ಲಗುಬಗೆಯಾಗಿ ನೇರವಾಗಿ ಮುಂದೆ ಚಲಿಸುತ್ತದೆ. ಅದು ನೀರಿನ ಹೊರಗಡೆ ಒಂದು ಮೊಳವಾದರೂ ಮುಂದೆ ಹೋಗಲು ಆಗುವುದಿಲ್ಲ. ಹಾಗೆಯೇ ತನ್ನ ನೆಲೆಯನ್ನು ಕಳೆದುಕೊಂಡ ಬುದ್ಧಿವಂತನೂ ಸಹ ದಡ್ಡನಂತೆ ಆಗಿಬಿಡುತ್ತಾನೆ.

65. ಮೂಲ : ನೀಳ್ಳಲೋನ ಮೊಸಲಿ ನಿಗಿಡಿ ಯೇನುಗು ಬಟ್ಟು
ಬೈಟ ಕುಕ್ಕಚೇತ ಭಂಗಪಡುನು
ಸ್ಥಾನ ಬಲಮು ಕಾನಿ ತನಬಲಮು ಕಾದಯಃ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ನೀರಲಿಪ್ಪನೆಗಳು ಆನೆಯಂ ಪಿಡಿವುದು
ಹೊರಗೆ ಶುನಕನಿಂದ ಭಂಗಗೊಳದೆ
ಸ್ಥಾನ ಬಲವದುವೆ ತನಬಲವದಲ್ಲವೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ನೀರಿನಲ್ಲಿರುವವರೆಗೆ ಮೊಸಳೆ ಆನೆಯನ್ನಾದರೂ ಹಿಡಿಯಲು ಶಕ್ತಿ ಇರುತ್ತದೆ. ಅದೇ ಮೊಸಳೆ ನೀರಿನಿಂದ ಹೊರಗಡೆ ಬಂದಾಗ ಅದು ನಾಯಿಗಳಿಂದ ತೊಂದರೆಯನ್ನು ಅನುಭವಿಸಬೇಕಾಗುತ್ತದೆ. ಯಾವುದಕ್ಕೂ ಸ್ಥಾನಬಲ ಮುಖ್ಯವೇ ವಿನಃ ತಮ್ಮ ಬಲ ಮುಖ್ಯವಲ್ಲ.

66. ಮೂಲ : ನೀಳ್ಲಲೋನಿ ಚೇಪ ನೆರಿ ಮಾಂಸ ಮಾಶಕು
ಗಾಲಮಂದು ಜಕ್ಕಿ ಕೂಲಿ ನಟ್ಲು
ಆಶಪುಟ್ಟಿ ಮನುಜುಡಾ ರೀತಿ ಜೆಡಿಪೋವು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ನೀರೊಳಗಿನ ಮೀನು ಎರೆ ಮಾಂಸದಾಶೆಯಿಂದ
ಗಾಳದಲ್ಲಿ ಸಿಕ್ಕಿ ಬೀಳ್ವ ತೆರದಿ
ಆಶೆ ಹುಟ್ಟಿ ಮನುಜನಾ ರೀತಿ ಕೆಡುವನು
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ನೀರಿನಲ್ಲಿರುವ ಮೀನು ಎರೆಹುಳದ ಮಾಂಸಕ್ಕೆ ಆಶೆಪಟ್ಟು ಗಾಳಕ್ಕೆ ಸಿಕ್ಕಿ ಬೀಳುತ್ತದೆ. ಅದೇ ರೀತಿ ಆಶೆಯಿಂದ ಮಾನವನು ಅನೇಕ ಕರ್ಮಗಳಲ್ಲಿ ತೊಡಗಿ ಮುಕ್ತಿಯನ್ನು ಕಾಣದೆ ಅಧೋಗತಿಯನ್ನು ಹೊಂದುತ್ತಾನೆ.

**67.** **ಮೂಲ** : ಪರಗರಾತಿ ಗುಂಡು ಪಗಲ ಗೊಟ್ಟಗವಚ್ಚು
ಗೊಂಡಲನ್ನಿ ಪಿಂಡಿ ಗೊಟ್ಟವಚ್ಚು
ಕಠಿಣ ಚಿತ್ತು ಮನಸು ಗರಗಿಂಪರಾದಯಾ
ವಿಶ್ವದಾಭಿರಾಮ ವಿನುರ ವೇಮ

**ಅನುವಾದ** : ಗಟ್ಟಿಕಲ್ಲುಗುಂಡು ಒಡೆದು ಸೀಳಬಹುದು
ಬೆಟ್ಟ ಕುಟ್ಟಿ ಹಿಟ್ಟು ಮಾಡಬಹುದು
ಕಠಿಣ ಚಿತ್ತ ಮನವ ಕರಗಿಸಲಾಗದೈ
ವಿಶ್ವದಾಭಿರಾಮ ಕೇಳೈ ವೇಮ

**ತಾತ್ಪರ್ಯ** : ಗಟ್ಟಿ ಕಲ್ಲನ್ನು ಚೆನ್ನಾಗಿ ಒಡೆದು ಸೀಳಿ ಹೋಳು ಮಾಡಬಹುದು. ಬೆಟ್ಟಗಳನ್ನು ಕುಟ್ಟಿ ಪುಡಿ ಮಾಡಬಹುದು. ಆದರೆ ಕಠಿಣ ಮನಸ್ಸಿನವನಿಗೆ ಬುದ್ಧಿ ಹೇಳಿ ಮನಸ್ಸನ್ನು ಕರಗಿಸಲು ಆಗುವುದಿಲ್ಲ.

**68.** **ಮೂಲ** : ಪರಗ ಚೆಟ್ಟು ಪೆಟ್ಟಿ ಪಾಲಿಂಪಕುಂಡೆನಾ
ವೆಲುಗು ದಾಟಿ ವೀದಿ ವೆಳ್ಳ ಬಾರು
ನಾಡುವಾರಿ ಚಿತ್ತ ವಟುವಲೆ ನುಂಡುರಾ
ವಿಶ್ವದಾಭಿರಾಮ ವಿನುರ ವೇಮ

**ಅನುವಾದ** : ಅಂಗಳದಿಹ ಗಿಡವ ಅಂಕೆಗೊಳಿಸದಿರೆ
ಅಂಗಳವ ದಾಟಿ ಅದು ಬೀದಿ ಸೇರು
ನಾರಿಯರಲಿ ಚಿತ್ತವಾತೆರದೊಳಿಹುದೈ
ವಿಶ್ವದಾಭಿರಾಮ ಕೇಳೈ ವೇಮ

**ತಾತ್ಪರ್ಯ** : ಮನೆಯ ಅಂಗಳದಲ್ಲಿ ಒಂದು ಗಿಡವನ್ನು ನೆಟ್ಟು ಅದನ್ನು ಸರಿಯಾಗಿ ಅಂಕೆಯೊಳಗೆ ಇಡದಿದ್ದರೆ ಅದು ಸಿಕ್ಕಾಪಟ್ಟೆ ಬೆಳೆದು ಬೀದಿಗೂ ಹರಡುತ್ತದೆ. ಅದೇ ರೀತಿ ಹೆಂಗಸರನ್ನು ಹತೋಟಿಯಲ್ಲಿ ಇಡದೇ ಹೋದರೆ ಅವರು ಚಂಚಲೆಯಿಂದ ಹೊರಗೆ ಸುತ್ತುವವರಾಗುತ್ತಾರೆ.

69. ಮೂಲ : ಪರುಲಕುಪರಿಂಪ ಪಾಪ ಕ್ಷಯಮಗು
ಬರುಲಕುಪರಿಂಪ ಪಟ್ಟುಕೊಮ್ಮು
ಬರುಲಕುಪಕರಿಂಪ ಬರಲೋಕ ಹಿತ ಮಗು
ಬರುಲಕುಪಕರಿಂಪ ಬಲಿಮಿ ವೇಮ

ಅನುವಾದ : ಪರರಿಗುಪಕರಿಸಲು ಪಾಪ ಕ್ಷಯುವಹುದು
ಪರರಿಗೆ ಉಪಕಾರ ಊರುಗೋಲು
ಪರರಿಗುಪಕರಿಸಲು ಪರಲೋಕ ಹಿತವದು
ಪರರಿಗುಪಕರಿಸಲು ಬಲವು ವೇಮ

ತಾತ್ಪರ್ಯ : ಪರರಿಗೆ ಉಪಕಾರ ಮಾಡಿದರೆ ಪಾಪವು ಕರಗಿಹೋಗುತ್ತದೆ. ಪರರಿಗೆ ಮಾಡುವ ಉಪಕಾರ ಮುಕ್ತಿ ಮಾರ್ಗಕ್ಕೆ ಊರುಗೋಲು. ಪರೋಪಕಾರದಿಂದ ಪರಲೋಕ ಹಿತವು ಉಂಟಾಗುತ್ತದೆ.

70. ಮೂಲ : ಪತಿನಿ ವಿಡುವರಾದು ಪದಿವೇಲಕೈನನು
ಪೆಟ್ಟಿ ಚೆಪ್ಪರಾದು ಪೇದ ಕೈನ
ಪತಿನಿದಿಟ್ಟರಾದು ಸತಿ ರೂಪವತಿ ಯ್ಯೈನ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಪತಿಯು ತೊರೆಯಬಾರದು ದಶ ಸಹಸ್ರಕು
ನೀಡಿ ನುಡಿಯೆಸಲ್ಲ ಬಡವನಿರಲು
ಪತಿಯು ಜರೆಯೆ ತಗದು ಸತಿರೂಪವತಿ ಇರೆ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಯಾವುದೇ ಕಾರಣವಿರಲಿ ಗಂಡನನ್ನು ಬಿಡಬಾರದು. ದಾನ ಮಾಡಿ, ದಾನ ಪಡೆದವನು ಬಡವನೇ ಇದ್ದರೂ ಸಹ, ದಾನ ನೀಡಿದೆನೆಂದು ಪರರಿಗೆ ಹೇಳಿಕೊಳ್ಳಬಾರದು.. ಎಷ್ಟೇ ರೂಪವತಿಯಾಗಿದ್ದರೂ ಸಹ ಗಂಡನನ್ನು ಹೀಯಾಳಿಸಬಾರದು.

71. ಮೂಲ : ಪದುಗುರಾಡು ಮಾಟ ಪಾಟಿಯೈಧರಂಚೆಲ್ಲು
ನೊಕ್ಕಡಾಡು ಮಾಟ ನೆಕ್ಕದೆಂದು
ನೂರಕುಂಡುವಾನಿ ನೂರೆಲ್ಲ ನೋಪದೋ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಪಲರು ನುಡಿವ ನುಡಿಯು ಪಾಲಿಸು ಜಗವೆಲ್ಲ
ಒಬ್ಬ ನುಡಿವ ಮಾತು ಸಾಗದೆಲ್ಲು
ಸುಮ್ಮನಿರುವವನ ಊರೆಲ್ಲ ಮನ್ನಿಸುವರೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಅನೇಕರು ಒಪ್ಪುವ, ನುಡಿಯುವ ಯಾವ ಮಾತನ್ನೇ ಆಗಲಿ ಪ್ರಪಂಚದಲ್ಲಿ ಎಲ್ಲರೂ ಪಾಲಿಸುತ್ತಾರೆ. ಅದು ಒಳ್ಳೆಯ ಮಾತಾದರೂ ಒಬ್ಬನು ನುಡಿಯುವ ಮಾತನ್ನು ಯಾರೂ ಒಪ್ಪುವುದಿಲ್ಲ. ಆದರೆ ತನ್ನ ಅಭಿಪ್ರಾಯವನ್ನು ತಿಳಿಸದೆ ಸುಮ್ಮನಿರುವವನನ್ನು ಊರಿನ ಜನವೆಲ್ಲಾ ಮನ್ನಿಸುತ್ತದೆ.

72. ಮೂಲ : ಪಟ್ಟನೇರ್ಚು ಪಾಮು ಪಡಿಗ ಯೋರಗ ಚೇಯು
ಚೆರಪ ಚೂಚುವಾಡು ಚೆಲಿಮಿ ಚೇಯು
ಚಂಪದಲಚು ರಾಜು ಚನುವಿಚ್ಚು ಚೂಡರಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕಡಿಯ ಬಯಸೆ ಹಾವು ಹೆಡೆಯ ಓರೆ ಇರಿಸು
ಕೆಡಿಸ ಬಯಸುವವನು ಸ್ನೇಹಗೈವ
ವಧಿಸೆ ಬಯಸೆ ರಾಜ ಸದರ ತೋರ್ವಸನಿಹ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಹಾವು ಕಡಿಯಬೇಕೆಂದುಕೊಂಡಾಗ ಅದು ತನ್ನ ಹೆಡೆಯನ್ನು ಹಿಂದಕ್ಕೆ ಓರೆಯಾಗಿ ಬಗ್ಗಿಸುತ್ತದೆ. ಕೆಡಿಸಬೇಕು ಎಂಬುವವನು ಸ್ನೇಹ ಬಯಸಿ ಹತ್ತಿರ ಬರುತ್ತಾರೆ. ಹಾಗೆಯೇ ಅರಸನು ಕಡಿದು ಹಾಕಬೇಕೆಂದು ಬಯಸಿದಾಗ ಬಹಳ ಸಲಿಗೆ ಕೊಟ್ಟು ಹತ್ತಿರ ಬರುವಂತೆ ಮಾಡಿ ಕತ್ತರಿಸುತ್ತಾನೆ.

73. ಮೂಲ : ಪಂದಿಪಿಲ್ಲಲೀನು ಪದಿಯು ನೈದಿಂಟಿನಿ
ಕುಂಜರಂಬು ನೀನು ಕೊದಮು ನೊಕಟಿ
ಮುತ್ತಮುಂಡು ಪುರುಷು ಡೊಕ್ಕಡು ಚಾಲಡಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಹಂದಿ ಮರಿಗಳೀನು ಹತ್ತುಮತ್ತದಿನ್ಯೆದು
ಕುಂಜರವದೀನು ಮರಿಯು ನೊಂದೆ
ಉತ್ತಮ ಪುರುಷನು ಒಬ್ಬನಿರಲು ಸಾಲದೇಂ
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ಹಂದಿಯು ಒಂದು ಸಲಕ್ಕೆ ಹತ್ತು ಹದಿನೈದು ಮರಿಗಳನ್ನು ಹಾಕುತ್ತದೆ ಪ್ರಯೋಜನವೇನು ? ಆ ಮರಿಗಳು ತನ್ನಂತೆ ಕೆಸರಿನಲ್ಲಿ ಬೆಳೆಯುತ್ತವೆ. ಹಾಗಲ್ಲದೆ ಆನೆಯು ಒಂದೇ ಒಂದು ಮರಿಯನ್ನು ಹಾಕುತ್ತದೆ. ಒಂದೇ ಮರಿಯಾದರೂ ಆನೆಯಂತೆ ಬೆಳೆಯುತ್ತದೆ. ಆದ್ದರಿಂದ ಕೆಲಸಕ್ಕೆ ಬಾರದ ಹತ್ತಾರು ಮಕ್ಕಳು ಹುಟ್ಟುವುದಕ್ಕಿಂತ, ಉತ್ತಮನಾದ ಒಬ್ಬ ಮಗ ಹುಟ್ಟಿದರೆ ಅವನು ತನ್ನ ಕುಲಕ್ಕೆ ಒಳ್ಳೆಯ ಹೆಸರು ತರುತ್ತಾನೆ.

74. ಮೂಲ : ಪಿಸಿನಿ ವಾನಿ ಯಿಂಟ ಬೀನುಗು ವೆಡಲಿನ
ಕಟ್ಟೆ ಕೋಲಲಕುನು ಗಾಸುಲಿಚ್ಚಿ
ವೆಚ್ಚ ಮಾಯೆನಂಚು ವೆಕ್ಕಿವೆಕ್ಕೇಡ್ಚುರಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೃಪಣನ ಮನೆಯಲ್ಲಿ ಕುಣಪವು ಹೊರಡಲು
ಬೊಂಬು ಅರಿವೆ, ಮರಿಗೆ ಕಾಸುತೆತ್ತು
ವೆಚ್ಚವಾಯಿತೆನುತ ಬಿಕ್ಕಿ ಬಿಕ್ಕಿ ಅಳುವ
ವಿಶ್ವದಾಭಿರಾಮ ಕೇಳ್ಳೆ ವೇಮ

ತಾತ್ಪರ್ಯ : ಜಿಪುಣನ ಮನೆಯಲ್ಲಿ ಯಾರಾದರೂ ಸತ್ತುಹೋದರೆ ಶವ ಸಂಸ್ಕಾರಕ್ಕೆ ಖರ್ಚು ಮಾಡಿ ಮನೆಗೆ ಬಂದು, ಆ ವೆಚ್ಚವನ್ನು ಸ್ಮರಿಸಿ ಬಿಕ್ಕಿ ಬಿಕ್ಕಿ ಅಳುತ್ತಾನೆ. ಜಿಪುಣನಿಗೆ ಹಣ ವೆಚ್ಚ ಮಾಡಬೇಕು ಅಂದರೆ ಅವನಿಗೆ ವ್ಯಸನವಾಗುತ್ತದೆ.

75. ಮೂಲ : ಫಾಲಗಲಯು ನೀರು ಪಾಲೆಯ್ಯೆ ರಾಜಿಲ್ಲು
ನದಿಯು ಪಾನ ಯೋಗ್ಯ ಮಯಿನ ಯಟ್ಲು
ಸಾಧು ಸಜ್ಜನಮುಲು ಸಾಂಗತ್ಯಮುಲಚೇತ
ಮೂಡ ಜನುಡು ಮುಕ್ತಿ ಮೊನಯು ವೇಮ

ಅನುವಾದ : ಹಾಲು ಕಲೆತ ಜಲವು ಹಾಲಿನಂತಾಗಲು
ಅದುವೆ ಪಾನಯೋಗ್ಯವಾದ ತೆರದಿ
ಸಾಧು ಸಜ್ಜನರ ಸಾಂಗತ್ಯ ಸಂಯೋಗದಿ
ಮೂಢ ನರನು ಮುಕ್ತಿ ಪಡೆವ ವೇಮ

ತಾತ್ಪರ್ಯ : ಹಾಲಿನಲ್ಲಿ ನೀರು ಸೇರಿದರೆ ಆಗ ನೀರು ಕಲೆತ ಹಾಲು ಕುಡಿಯಲು ಯೋಗ್ಯವೆ ಆಗಿರುತ್ತದೆ. ಆದೇ ರೀತಿ ಮೂಢ ನರನು ಸಾಧು ಸಜ್ಜನರ ಸಂಗದಲ್ಲಿ ಇದ್ದರೆ ಅವನಿಗೂ ಜ್ಞಾನ ಪ್ರಾಪ್ತಿಯಾಗುತ್ತದೆ.

76. ಮೂಲ : ಪಾಗ ಪಚ್ಚಡಂಬು ಪೈಕಿ ಕೂಸಂಬುನು
ಪೋಗು ಉಂಗುರಮುಲು ಬೊಜ್ಜು ಕಡುಪು
ಗಲಿಗಿನಟ್ಟಿವಾನಿ ಗಂಡುರು ಚುಟ್ಟಮುಲ್
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಪಾಗು ಪಚ್ಚಡವು ಮೇಲ್ ವಸ್ತ್ರವು ನಿಲುವಂಗಿ
ಓಲೆ ಉಂಗುರಗಳು ಬೊಜ್ಜು ಬೆಳೆದ ಹೊಟ್ಟೆ
ಉಳ್ಳವನನಾದರಿಸುವರು ಬಂಧು ಬಾಂಧವರ್
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಪೇಟ, ಶಾಲು, ಕೋಟು, ಮಣಿಹಾರ, ಕಿವಿಗೆ ಆಭರಣ, ಉಂಗುರ, ಬೆಳೆದ ಹೊಟ್ಟೆ ಇವುಗಳಿಂದ ಅಲಂಕೃತನಾಗಿ ಹಣವಂತನಾಗಿದ್ದರೆ, ಬಂಧು ಜನ ಮರ್ಯಾದೆಯಿಂದ ಉಪಚಾರ ಮಾಡುತ್ತಾರೆ.

77. ಮೂಲ : ಪೂರ್ವ ಜನ್ಮಮಂದು ಬುಣ್ಯಂಬು ಸೇಯನಿ
ಪಾಪಿ ಧನಮು ಕಾಶ ಪಡುಟಗಿಲ್ಲ
ವಿತ್ತು ಮರಿಚಿ ಕೋಮು ವೆದಕಿನ ಚಂದಂಬು
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಪೂರ್ವ ಜನ್ಮದಲ್ಲಿ ಪುಣ್ಯವಂ ಮಾಡದೆ
ಪಾಪಿ ಧನಕೆ ಆಶೆ ಪಡುವುದೆಲ್ಲ
ಬೀಜ ನೆಡದೆ ಹೊಲಕೆ ಕುಯಿಲಿಗೆ ಹೊರಟಂತೆ
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ : ಹೊಲಕ್ಕೆ ಬಿತ್ತನೆ ಹಾಕದೆ ಸುಗ್ಗಿಯಲ್ಲಿ ಕುಯಿಲಿಗೆ ಆಸೆಪಟ್ಟಂತೆ ಹಿಂದಿನ ಜನ್ಮದಲ್ಲಿ ದಾನ ಮಾಡಿ ಪುಣ್ಯ ಸಂಪಾದನೆ ಮಾಡದೆ ಈ ಜನ್ಮದಲ್ಲಿ ತನಗೆ ಹಣವಿಲ್ಲವಲ್ಲಾ ಎಂಬುದಾಗಿ ಪಾಪಿಯಾದವನು ಪರಿತಪಿಸುತ್ತಾನೆ.

78. ಮೂಲ : ಪೆಟ್ಟಿಪೋಯಲೇನಿ ವಟ್ಟಿನರುಲು ಭೂಮಿ
ಬುಟ್ಟರೇಮಿ ವಾರು ಗಿಟ್ಟರೇಮಿ ?
ಪುಟ್ಟಲೋನ ಚೆದಲು ಪುಟ್ಟದಾ ಗಿಟ್ಟದಾ
ವಿಶ್ವದಾಭಿರಾಮ ವಿನುರ ವೇಮ

ಅನುವಾದ : ಕೊಟ್ಟು ಸಲಹಲರಿಯ ವ್ಯರ್ಥ ನರರು ಭುವಿ
ಹುಟ್ಟಲೇನು ಅವರು ಸಾಯಲೇನು
ಹುತ್ತದೊಳು ಗೆದ್ದಲು ಹುಟ್ಟದೇಂ ಸಾಯದೇಂ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಇತರರು ಸಂಕಟದಲ್ಲಿರುವಾಗ ಅವರಿಗೆ ನೆರವಾಗಬೇಕು. ಅವರಿಗೆ ಅಲ್ಪ ಸ್ವಲ್ಪವಾದರೂ ಕೊಟ್ಟು ಸಲಹಬೇಕು. ಇಲ್ಲದಿದ್ದರೆ ಮನುಷ್ಯನು ಹುಟ್ಟಿ ಸಾರ್ಥಕವಿಲ್ಲ, ಉದಾಹರಣೆಗೆ ಹುತ್ತದಲ್ಲಿ ಗೆದ್ದಲು ಹುಟ್ಟುತ್ತದೆ. ಸಾಯುತ್ತದೆ.

79. ಮೂಲ : ಪುರುಷುಡೆರುಗ ಜಂಪು ಭೂಪತಿ ಏನಚೇಟು
ನಖಿಲ ನಿಂದಲಕುನು ನಾಲಯುಂಬು
ಬರಸತುಲ ಗಮನಮು ಬ್ರತ್ಯಕ್ಷ ನರಕಮು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಪುರುಷನರಿಯೆ ಕೊಲುವ ಅರಸನರಿಯೆ ಕೇಡು
ಅಖಿಲನಿಂದೆಗಳಿಗೆ ಆಲಯುವದು
ಪರಸತಿಯುರ ಗಮನ ಪ್ರತ್ಯಕ್ಷ ನರಕವು
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ : ಪರನಾರಿಯ ಸಂಗ ಪ್ರತ್ಯಕ್ಷ ನರಕವಿದ್ದಂತೆ ಅವಳ ಗಂಡ ನೋಡಿದರೆ ಕೊಲ್ಲುವುದಕ್ಕೂ ಹೇಸುವುದಿಲ್ಲ. ಸರಕಾರದ ಗಮನಕ್ಕೆ ಬಂದರೆ ದಂಡ ತೆರಬೇಕಾಗುತ್ತದೆ. ಎಲ್ಲಾ ತರಹೆ ನಿಂದೆ, ಅವಮಾನಗಳಿಗೆ ಪರ ನಾರಿಯ ಗಮನ ಆಲಯುವಿದ್ದ ಹಾಗೆ.

80. ಮೂಲ : ಪ್ರಿಯಮು ಲೇನಿವಿಂದು ಪಿಂಡಿವಂಟಲ ಚೇಟು
ಭಕ್ತಿಲೇನಿ ಪೂಜ ಪತ್ರಿ ಚೇಟು
ಪಾತ್ರಮೆರುಗ ನೀವಿ ಬಂಗಾರು ಚೇಟುರಾ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಪ್ರೀತಿ ಇರದ ಭೋಜ್ಯ ಅಡುಗೆ ತಿನಿಸು ವ್ಯರ್ಥ
ಭಕ್ತಿ ಇರದ ಪೂಜೆ ಪತ್ರೆ ವ್ಯರ್ಥ
ಪಾತ್ರವರಿಯದ ಕೊಡುಗೆಯದು ಚಿನ್ನ ವ್ಯರ್ಥ
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ : ಪ್ರೀತಿಯಿಂದ ಕರೆದು ಉಣಬಡಿಸದಿದ್ದರೆ ಅಡುಗೆಗೋಸ್ಕರ ಉಪಯೋಗಿಸಿದ ತಿಂಡಿ ತಿನಿಸು ವ್ಯರ್ಥವಾದಂತೆಯೇ ಸರಿ. ಪಾತ್ರ ಪಾತ್ರಗಳನ್ನು ಅರಿತು ದಾನ ಮಾಡಬೇಕು. ಅಪಾತ್ರನಿಗೆ ಮಾಡಿದ ದಾನ ತನ್ನಲ್ಲಿದ್ದ ಹಣ ವ್ಯರ್ಥವಾಯಿ ತೆಂದೆ ತಿಳಿಯಬೇಕು. ಅದೇ ರೀತಿ ಭಕ್ತಿಯಿಲ್ಲದ ಪೂಜೆಯಿಂದ ಬಿಲ್ವಪತ್ರೆ ವ್ಯರ್ಥ.

81. ಮೂಲ : ಪೂಸಪೋಗು ಲೈನ ಪುಟ್ಟಂಬು ಮಿಡಿಯಂಬು
ಕಾಯಪುಷ್ಟಿ ಮಿಗುಲ ಗಲಿಗಿಯುನ್ನ
ಹೀನ ಜಾತಿ ನೈನ ನಿಂದು ರಮ್ಮಂದುರು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಮಣಿಯ ಹಾರ ಓಲೆ ವಸ್ತ್ರವು ವೀಳೆಯ
ಹೆಚ್ಚು ಕಾಯ ಪುಷ್ಟಿಯಿಂದ ಇರಲು
ಹೀನ ಜಾತಿ ಇರಲಿ ಕರೆದು ಮನ್ನಿಸುವರೈ
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ : ಕಂಠಿಹಾರ, ಒಳ್ಳೆಯ ವಸ್ತ್ರ, ತಾಂಬೂಲ ಮತ್ತು ದೃಢ ಕಾಯವಿರುವವನು ಹೀನ ಜಾತಿಯವನಾದರೂ ಅವನನ್ನು ಕರೆದು ಕೂರಿಸಿ ಮರ್ಯಾದೆ ಮಾಡುತ್ತಾರೆ. ಅವಿಲ್ಲದೆ ಹೋದರೆ ಉಚ್ಚ ಜಾತಿಯವನಾದರೂ ಸಹ ಯಾರೂ ಮಾತ ನಾಡಿಸುವುದಿಲ್ಲ.

82. ಮೂಲ : ಬಡುಗು ನೆರುಂಗಲೇನಿ ಪ್ರಾಭವಂಬದಿಯೇಲ
ಪ್ರೋಡಿಯಿಡನಿ ಬಿಂಧು ಭೂತಮೇಲ
ವ್ಯಾಧಿ ತೆಲಿಯ ಲೇನಿ ವೈದ್ಯುಡು ಮರಿಯೇಲ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಅಬಲರ ಸಲಹದ ರಾಜ್ಯಾಧಿಕಾರವದೇಕೆ
ಪೋಷಣೆಯ ಮಾಡದ ಬಂಧುಗಳು ಏಕೆ
ವ್ಯಾಧಿ ತಿಳಿಯದಿಹ ವೈದ್ಯನವ ತಾನೇತಕೆ
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ: ದುರ್ಬಲ ವರ್ಗದವರನ್ನ ಗುರುತಿಸಿ ಅವರ ಏಳಿಗೆಗೆ ಗಮನ ಹರಿಸುವುದು ಸರ್ಕಾರದ ಹೊಣೆ. ಸಂಕಟದಲ್ಲಿರುವಾಗ ಪೋಷಣೆ ಮಾಡುವ ಹೊಣೆ ಬಂಧುಗಳದ್ದು. ಮೊದಲು ಕಾಯಿಲೆ ಏನು ಎಂಬುದನ್ನು ಕಂಡು ತಿಳಿಯುವುದು ವೈದ್ಯನ ಕರ್ತವ್ಯ, ಹಾಗಿಲ್ಲದೆ ಬರಿ ಹೆಸರಿಗೆ ಸರಕಾರ, ಬಂಧು, ವೈದ್ಯ ರೆಂದರೆ ಇದ್ದೂ ಇಲ್ಲದ ಹಾಗೆ ವ್ಯರ್ಥ.

83. ಮೂಲ : ಬಂಗಾರು ಬೊಡಗನ್ನ ಭಾಮಲ ಬೊಡಗನ್ನ
ಚಿತ್ತಮುನನು ಚಿಂತ ಚೇಯಬೋನಿ
ವಾಡೆ ಪರಮ ಯೋಗಿ ವರ್ಣಿಂಪ ಜಗಮುಂದು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಕಾಂಚನವನು ನೋಡಿ ಕಾಮಿನಿಯರ ನೋಡಿ
ಚಿತ್ತದಲ್ಲಿ ಚಿಂತೆ ಮಾಡದಿಹನೊ
ಆವನೆ ಪರಮ ಯೋಗಿ ವರ್ಣಿಸೆ ಧರೆಯಲಿ
ವಿಶ್ವದಾಭಿರಾಮ ಕೇಳ್ಳೈ ವೇಮಾ.

ತಾತ್ಪರ್ಯ: ಬಂಗಾರದ ಒಡವೆಗಳನ್ನು ನೋಡಿದಾಗ ಹೆಂಗಸಿನ ಅಂಗಾಂಗ ಸೌಂದರ್ಯವನ್ನು ಕಣ್ಣಲ್ಲಿ ಕಂಡಾಗ ಚಿತ್ತ ಚಲಿಸದೆ ಆದರ ಬಗ್ಗೆ ಚಿಂತೆ ಮಾಡದೆ ದೃಢ ಮನಸ್ಸಿನವನು ಪ್ರಪಂಚದಲ್ಲಿ ನಿಜವಾದ ಯೋಗಿ.

84. ಮೂಲ: ಬುದ್ಧಿಯುತುನ ಕೇಲ ಪೊಸಗನಿ ಸಖ್ಯಂಬು
ಕಾರ್ಯವಾದಿ ಕೇಲ ಕಡುಚಲಂಬು
ಕುತ್ಸಿತುನಕು ನೇಲ ಗುರುದೇವತಾ ಭಕ್ತಿ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಬುದ್ಧಿವಂತಗೇಕೆ ಬೆರೆಯದಾ ಸಖ್ಯವು
ಕಾರ್ಯ ಗೆಲುವಂಗೇಕೆ ಬಿಡದ ಛಲವು
ಕುತ್ಸಿತನಿಗೇಕೆ ಗುರುದೇವತಾ ಭಕ್ತಿಯುಂ
ವಿಶ್ವದಾಭಿರಾಮ ಕೇಳ್ಳೈ ವೇಮಾ.

ತಾತ್ಪರ್ಯ: ಬುದ್ಧಿವಂತನಿಗೆ ಬೆರೆಯುವ ಸ್ನೇಹ ಅಂದರೆ ಬುದ್ಧಿಹೀನರಲ್ಲಿ ಗೆಳೆತನ ಬೇಕಾಗಿಲ್ಲ. ಕೆಲಸ ಸಾಧಿಸಬೇಕು ಎನ್ನುವವನಿಗೆ ಛಲ ಬೇಕಾಗಿಲ್ಲ. ಅಂತೆಯೇ ಕುತ್ಸಿತ ಬುದ್ಧಿಯುಳ್ಳವನಿಗೆ ಗುರು ದೈವ ಮುಂತಾದವರಲ್ಲಿ ಭಕ್ತಿ ಭಾವವಿರುವುದಿಲ್ಲ.

85. ಮೂಲ : ಭೂಮಿ ನಾದಿ ಯನ್ನ ಭೂಮಿ ಪಕ್ಕುನ ನವ್ವು
ದಾನ ಹೀನುಜೂಚಿ ಧನಮು; ನವ್ವು
ಕದನ ಬೀತು ಜೂಚಿ ಕಾಲುಡು ನವ್ವುನು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಭೂಮಿ ತನದು ಎನಲು ಭೂಮಿ ತಾ ನಗುವುದು
ದಾನ ಹೀನ ನೋಡಿ ಧನ ನಗುವುದು
ಕದನ ಹೇಡಿ ನೋಡಿ ಕಾಲನು ನಗುವನು
ವಿಶ್ವದಾಭಿರಾಮ ಕೇಳ್ಮೆ ವೇಮಾ.

ತಾತ್ಪರ್ಯ: ಭೂಮಿ ನನ್ನದು ಎಂದರೆ ಆ ಭೂಮಿ ಪಕ್ಕನೆ ನಗುತ್ತದೆ, ಕಾರಣ ಆ ಭೂಮಿಯನ್ನು ನನ್ನದು ನನ್ನದು ಎಂಬುದಾಗಿ ಹೇಳಿ ಹೇಳಿ ಅನೇಕರು ಭೂಗತರಾದರು. ಈಗ ಹೇಳುವವನೂ ಅಷ್ಟೆ. ಧನವನ್ನು ಶೇಖರಿಸಿ ದಾನ ಮಾಡದೆ ಇರುವವನನ್ನು ನೋಡಿ ಆ ಧನವು ನಗುತ್ತದೆ. ಅವನ ನಂತರವೂ ಈಗಲೋ ಆಗಲೋ ಆ ಧನ ಪರರಿಗೆ ಸೇರುತ್ತದೆ. ಅಂತೆಯೇ ಹೇಡಿ ಯನ್ನು ನೋಡಿ ಯಮನು ನಗುತ್ತಾನೆ.

86. ಮೂಲ : ಬೊಂದಿ ಎವರಿ ಸೊಮ್ಮು ಪೋಷಿಂಪ ಬಲುಮಾರು
ಪ್ರಾಣ ಮೆವರಿಸೊಮ್ಮು ಭಕ್ತಿಸೇಯ
ಧನಮು ಎವರಿ ಸೊಮ್ಮು ಧರ್ಮ ಮೇತನ ಸೊಮ್ಮು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ: ಕಾಯ ಯಾರ ಒಡವೆ ಬಲವಾಗಿ ಪೋಷಿಸೆ
ಪ್ರಾಣ ಯಾರ ಒಡವೆ ಭಕ್ತಿಮಾಡೆ
ಧನವು ಯಾರ ಒಡವೆ ಧರ್ಮವೇ ತನ್ನೊಡವೆ
ವಿಶ್ವದಾಭಿರಾಮ ಕೇಳ್ಮೆ ವೇಮಾ.

ತಾತ್ಪರ್ಯ: ಈ ಶರೀರವನ್ನು ಸದೃಢವಾಗಿ ಕಾಪಾಡಿ ತನ್ನ ಶರೀರವೆಂಬ ಹೆಮ್ಮೆಯಿಂದ ಇದ್ದರೂ ಒಂದುದಿನ ಇದು ಶಿಥಿಲವಾಗಿ ಹೋಗುತ್ತದೆ. ಭಕ್ತಿಭಾವದಿಂದ ಪ್ರಾಣ ಸಮರ್ಪಣೆ ಮಾಡೋಣವೆಂದರೆ ಪ್ರಾಣ ಯಾರಿಗೆ ಸೇರಿದ್ದು, ಅದೂ ಸಹ ನಮ್ಮ ಶಕ್ತಿಗೆ ಮೀರಿದ್ದು, ಅಂತೆಯೇ ಧನವನ್ನು ಕೂಡಿ ಹಾಕಿದರೂ ಒಂದು ದಿನ ಅದು ಪರರ ಪಾಲಾಗುತ್ತದೆ. ಆದರೆ ದಾನ ಮಾಡಿದ್ದು ಮಾತ್ರ ಎಂದೂ ತನ್ನಿಂದ ದೂರವಾಗದೆ ಅದು ತನ್ನ ಸ್ವತ್ತಾಗಿ ಜನ್ಮ ಜನ್ಮಗಳಲ್ಲಿ ಫಲ ಕೊಡುತ್ತದೆ.

87. ಮೂಲ : ಮಂಚಿವಾರು ಲೇರು ಮಹಿಮೀದ ವೆದಕಿನ
ಗಪ್ಪುಲೆಂದರ್ಕೈನ ಗಲರು ಭುವಿನಿ
ಪಸಿಡಿ ಲೇದೆ ಗಾನಿ ಪದಡೆಂತ ಲೇದಯಾ
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಒಳ್ಳೆಯವರು ಸಿಗರು ಹುಡುಕಲು ಜಗದಲಿ
ಕಷ್ಟಾತ್ಮರು ಬಹುಜನರಿಹರು ಇಳೆಯೊಳ್
ಕನಕವಿಲ್ಲದಿರಲು ಬೂದಿಗೇನು ಕಡಿಮೆ
ವಿಶ್ವದಾಭಿರಾಮ ಕೇಳ್ಳೈ ವೇಮಾ

ತಾತ್ಪರ್ಯ : ಒಳ್ಳೆಯವರನ್ನು ಹುಡುಕುವುದು ಬಹು ಕಷ್ಟ. ಕೆಟ್ಟವರು ಇತರರಿಗೆ ತೊಂದರೆ ಕೊಡುವವರು ಮಾತ್ರ ಬೇಕಾದಷ್ಟು ಜನ ಸಿಗುತ್ತಾರೆ. ಉದಾಹರಣೆಗೆ ಬಂಗಾರ ಸಿಗುವುದು ಕಷ್ಟ. ಆದರೆ ಬೂದಿ ಬೇಕಾದಷ್ಟು ಸಿಗುವುದಿಲ್ಲವೇ.

88. ಮೂಲ : ಮಧು ರಸಮುಲು ಗೋರಿ ಮಕ್ಷಿಕಂಬುಲು ಸೇರಿ
ಚೊಚ್ಚಿ ವೆಡಲ ಲೇಕ ಚೊಚ್ಚಿನಟ್ಲು
ಮುನಿಗಿವೆಡಲ ಲೇಡು ಮೋಹಂಬು ರಾಶಿಲೋ
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಮಧು ರಸವನು ಬಯಸಿ ನೊಣಗಳವು ಮುಸುರಿ
ಹೊಕ್ಕು ಹೊರಗೆ ಬರದೆ ಸಿಕ್ಕಿದಂತೆ
ಮುಳುಗಿ ಹೊರಗೆ ಬರನು ಮೋಹಪಾಶಗಳಲ್ಲಿ
ವಿಶ್ವದಾಭಿರಾಮ ಕೇಳ್ಳೈ ವೇಮಾ

ತಾತ್ಪರ್ಯ : ಜೇನಿನ ರುಚಿಗೆ ಆಸೆಪಟ್ಟು ನೊಣಗಳು ಗುಂಪಾಗಿ ಸೇರಿ ಜೇನಿನ ಮೇಲೆ ಮುಸುರುತ್ತವೆ. ಆಗ ಅವುಗಳ ಕಾಲುಗಳು ರೆಕ್ಕೆಗಳು ಜೇನಿಗೆ ಅಂಟಿಕೊಂಡು ಹೊರಕ್ಕೆ ಬಾರದಂತೆ ವ್ಯಥೆಪಡುತ್ತವೆ. ಅದೇ ರೀತಿ ಮಾನವನು ಮೋಹಪಾಶಗಳಿಗೆ ಸಿಕ್ಕಿ ಅನೇಕ ಕರ್ಮಗಳಲ್ಲಿ ತೊಡಗಿ ಅಲ್ಲಿಯೇ ಮುಳುಗಿರುತ್ತಾನೆ. ಮುಕ್ತಿಗೆ ಬಹು ದೂರವಾಗುತ್ತಾನೆ.

89. ಮೂಲ : ಮಗನಿ ಕಾಲಮುಂದು ಮಗುವ ಕಷ್ಟಿಂಚಿನ
ಸುತುಲ ಕಾಲಮುಂದು ಸುಖಮು ಬೊಂದು
ಗಲಿಮಿ ಲೇಮಿ ರೆಂಡು ಗಲ ವೆಂತವಾರಿಕಿ
ಬಲಿಮಿ ಪುತ್ರ ಬಲಿಮಿ ಬಲಿಮಿ ವೇಮಾ

ಅನುವಾದ : ಪತಿಯು ಕಾಲದಲ್ಲಿ ಕಷ್ಟಪಟ್ಟ ಸ್ತ್ರೀಯು
ಸುತರ ಕಾಲದಲ್ಲಿ ಸುಖವ ಪಡೆವ
ಬಡತನ ಸಿರಿತನ ಸಕಲರಿಗು ಇರುವುದೈ
ಬಲವು ಪುತ್ರ ಬಲವು ಬಲ ವೇಮಾ

ತಾತ್ಪರ್ಯ : ಗಂಡನ ಕಾಲದಲ್ಲಿ ಅತ್ತೆಯ ಕೈಕೆಳಗೆ ಗಂಡನ ಆಜ್ಞೆಯಲ್ಲಿ ಕಷ್ಟಪಟ್ಟ ಸ್ತ್ರೀಯು ಮಕ್ಕಳ ಕಾಲದಲ್ಲಿ ಸುಖವನ್ನು ಪಡೆಯುತ್ತಾಳೆ. ಕಷ್ಟ ಸುಖ ಎಂಬುವುದು ಎಲ್ಲರಿಗೂ ಇರುತ್ತದೆ. ಸಿರಿತನ, ಬಡತನಗಳು ಒಂದಾದ ಮೇಲೆ ಒಂದು ಬರುತ್ತವೆ.

90. ಮೂಲ : ಮಾಟದಿದ್ದವಚ್ಚು ಮರಿಯೆಗ್ಗು ಲೇ ಕುಂಡ
ದಿದ್ದ ವಚ್ಚುರಾಯಿ ತ್ರಿನ್ನಗಾನು
ಮನಸು ದಿದ್ದರಾದು ಮಹಿ ನೆಂತ ವಾರಿಕಿ
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಮಾತು ತಿದ್ದಬಹುದು ತಪ್ಪುಗಳಿರದಂತೆ
ತಿದ್ದಬಹುದು ಕಲ್ಲು ನೇರವಾಗಿ
ಮನಸು ತಿದ್ದಬರದು ಭುವಿಯಲ್ಲಿ ಯಾರಿಗುಂ
ವಿಶ್ವದಾಭಿರಾಮ ಕೇಳೈ ವೇಮಾ

ತಾತ್ಪರ್ಯ : ಆಡುವ ಮಾತನ್ನು ತಪ್ಪುಗಳಿಲ್ಲದಂತೆ ತಿದ್ದಬಹುದು. ವಕ್ರವಾಗಿರುವ ಕಲ್ಲನ್ನು ನೇರವಾಗಿ ತಿದ್ದಬಹುದು. ಆದರೆ ವಕ್ರಬುದ್ಧಿಯ ಮನಸ್ಸನ್ನು ಯಾರಿಂದಲೂ ತಿದ್ದಲು ಆಗುವುದಿಲ್ಲ.

91. ಮೂಲ : ಮಾಟಲಾಡವಚ್ಚು ಮನಸು ನಿಲ್ಪಗರಾದು
ತೆಲುಪವಚ್ಚು ದನ್ನು ತೆಲಿಯುರಾದು
ಸುರಿಯು ಬಟ್ಟವಚ್ಚು ಶೂರುಂಡು ಗಾರಾದು
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಮಾತನಾಡಬಹುದು ಮನಸ್ಸು ನಿಲಿಸಬರದು
ತಿಳಿಸಬಹುದು ತನ್ನ ತಿಳಿಯೆ ಬರದು
ಕತ್ತಿ ಹಿಡಿಯಬಹುದು ಶೂರನೆನಿಸಬರದು
ವಿಶ್ವದಾಭಿರಾಮ ಕೇಳ್ಳೆ ವೇಮಾ

ತಾತ್ಪರ್ಯ : ಬೇಕಾದಷ್ಟು ಮಾತನಾಡಬಹುದು. ಆದರೆ ಮನಸ್ಸನ್ನು ನಿಲ್ಲಿಸಲು ಬಹಳ ಕಷ್ಟ. ಮತ್ತೊಬ್ಬರಿಗೆ ಸಾಕಷ್ಟು ಉಪದೇಶ ಕೊಡಬಹುದು. ಆದರೆ ತನ್ನ ತಾ ತಿಳಿಯುವುದು ಬಹಳ ಕಷ್ಟ. ಕತ್ತಿಯನ್ನು ಕೈಯಲ್ಲಿ ಹಿಡಿದು ಜಳಪಿಸ ಬಹುದು. ಆದರೆ ಶೂರ ಎಂಬ ಹೆಸರನ್ನು ಪಡೆಯುವುದು ಬಹಳ ಕಷ್ಟ.

92. ಮೂಲ : ಮಾಸಿನ ಪನಿ ತೋಡ ಮಲಿನ ವಸ್ತ್ರಮು ತೋಡ
ಯಾಡಲ ಜಿಡ್ಡು ತೋಡ ನುಂಡೆ ನೇನಿ
ಯುಗ್ರ ಜನ್ಮುಡಯುನ ನಟ್ಟಿಪೊಮ್ಮಂದುರು
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಹೀನ ಕಾರ್ಯದಿಂದ ಮಲಿನ ವಸ್ತ್ರಗಳಿಂದ
ಕೊಳಕು ದೇಹದಿಂದ ಕೂಡಿ ಇರಲು
ಅಗ್ರ ಜನ್ಮವಿರಲು ದೂರ ಸಾಗೆನ್ನುವರ್
ವಿಶ್ವದಾಭಿರಾಮ ಕೇಳ್ಳೆ ವೇಮಾ

ತಾತ್ಪರ್ಯ : ಹೀನ ಕೃತ್ಯಗಳ ಮಾಡುವವನನ್ನು, ಕೊಳಕಾದ ಬಟ್ಟೆ ಧರಿಸಿದವನನ್ನೂ, ಕೊಳಕು ಜಿಡ್ಡಿನಿಂದ ಕೂಡಿದ ಶರೀರದವನನ್ನು ಒಂದು ಸಮಯ ಅವನು ಉತ್ತಮ ಜಾತಿಯುವನಾದರೂ ಸಹ ಹತ್ತಿರ ಬರಗೊಡದೆ ದೂರ ಹೋಗೆನ್ನುತ್ತಾರೆ.

93. ಮೂಲ : ಮಾಟ ನಿಲುಪಲೇನಿ ಮನುಜು ಚಂಡಾಲು
ಡಾಜ್ಞಲೇನಿರಾಜು ಯಾಡು ಮುಂಡ
ಮಹಿಮಲೇನಿ ವೇಲ್ಪು ಮಂಟಿ ಚೇಸಿನ ಪುಲಿ
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಮಾತು ನಿಲಿಸದಾ ಮನುಜನವ ಚಂಡಾಲ
ಆಜ್ಞೆ ನಿಲಿಸದಾ ಅರಸ ಹೆಣ್ಣು ಮುಂಡೆ
ಮಹಿಮೆ ಇರದ ದೈವ ಮಣ್ಣಿನ ಹುಲಿಯುದು
ವಿಶ್ವದಾಭಿರಾಮ ಕೇಳೈ ವೇಮಾ

ತಾತ್ಪರ್ಯ : ಕೊಟ್ಟ ಮಾತಿಗೆ ತಪ್ಪುವವನು ಚಂಡಾಲ. ಆಜ್ಞೆಯನ್ನು ಅಮಲುಗೊಳಿಸಲಾರದ ರಾಜನು ಹೆಂಗಸಿಗೆ ಸಮಾನನು, ಮಹಿಮೆ ಇಲ್ಲದ ದೈವ, ಮಣ್ಣಿನಿಂದ ಮಾಡಿದ ಹುಲಿ ಇದ್ದಂತೆ. ಮಹಿಮೆ ತೋರದ ದೈವ ಬರೀ ನೋಟಕ್ಕೆ ಹೆಸರಿಗೆ ಮಾತ್ರ ದೇವರು ಎನಿಸಿಕೊಳ್ಳುತ್ತದೆ

94. ಮೂಲ : ಮಿರಪಕಾಯ ಚೂಡ ಮೀದ ನೆರ್ರಗನುಂಡು
ಗೊರಿಕಿ ಚೂಡಲೋನ ಚುರುಕು ಮನುನು
ಸಜ್ಜನುಲಗುವಾರಿ ಸಾರ ಮಿಟ್ಟುಲ ನುಂಡು
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಮೆಣಸಿನಕಾಯಿ ನೋಡೆ ಹೊರಗೆ ಕೆಂಪಗಿಹುದು
ಜಗಿದು ನೋಡೆ ಒಳಗೆ ಚುರುಕುಕಾರ
ಸಜ್ಜನರೊಳು ಸಾರವದು ಅಂತೆಯೆ ಇಹುದೈ
ವಿಶ್ವದಾಭಿರಾಮ ಕೇಳೈ ವೇಮಾ

ತಾತ್ಪರ್ಯ : ಮೆಣಸಿನಕಾಯಿ (ಹಣ್ಣು) ಇತರೆ ಹಣ್ಣುಗಳಂತೆ ಕೆಂಪಗೆ ಕಾಣುತ್ತದೆ. ಇತರೆ ಹಣ್ಣುಗಳು ಸಿಹಿಯಾಗಿದ್ದರೆ, ಮೆಣಸಿನಕಾಯಿ ಮಾತ್ರ ಖಾರವಾಗಿರುತ್ತದೆ. ಅಂತೆಯೇ ಸಜ್ಜನರು ಇತರೆ ಮನುಷ್ಯರಂತೆ ಕಂಡರೂ ಅವರ ಶಕ್ತಿ ಸಾಮರ್ಥ್ಯಗಳು ಬೇರೆಯಾಗಿರುತ್ತವೆ.

95. ಮೂಲ : ಮುಷ್ಟಿವೇಪಚೆಟ್ಟು ಮೊದಲುಗಾ ಪ್ರಜಲಕು
ಪರಗ ಮೂಲಿಕಲಕು ಪನಿಕಿ ವಚ್ಚು
ನಿರ್ದಯಾತ್ಮಕುಂಡು ನೀಚುಡೆಂಡು ನರುನು
ಪನಿಕಿರಾಡು ಗದರ ಪರಗ ವೇಮಾ.

ಅನುವಾದ : ಮುಷ್ಟಿ ಬೇವುಗಳವಿಲ್ಲ ಉಪಯುಕ್ತ ಜನಕೆ
ಔಷಧಿಗಳಲಿ ಅದರ ಮಿಲನ ಪಡುದು
ನಿರ್ದಯಾತ್ಮ ನೀಚಮನುಜನಾವ ಕೆಲಸಕು
ಒದಗನು ನಿಜದೊಳುಪಕರಿಸೆ ವೇಮಾ.

ತಾತ್ಪರ್ಯ : ಮುಷ್ಟಿಗಿಡ, ಬೇವಿನ ಗಿಡ ಇವು ಬಹು ಕಹಿಯಾಗಿದ್ದರೂ ಸಹ ಔಷಧಿಗಳಲ್ಲಿ ಅವನ್ನು ಉಪಯೋಗಿಸಲಾಗುತ್ತದೆ. ನಿರ್ದಯೆಯಿಂದ ಕೂಡಿದ ನೀಚನು ಯಾರಿಗೂ ಉಪಯೋಗಕ್ಕೆ ಬರುವುದಿಲ್ಲ. ಅವನಿಂದ ಇತರರಿಗೆ ತೊಂದರೆಯೇ ವಿನಃ ಉಪಯೋಗವೇನೂ ಇಲ್ಲ.

96. ಮೂಲ : ಮೆಲತ ನಡವಿನುಂಚಿ ಮೃಗಮು ವೆಂಟನೆ ಬೋವು
ರಾಮಚಂದ್ರು ಕನ್ನ ರಸಿಕು ಡೇಡಿ
ಚೇಟುಕಾಲಮುನಕು ಚೆಡು ಬುದ್ಧಿ ಪುಟ್ಟುನು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಸ್ತ್ರೀಯ ಅಡವಿಲಿರಿಸಿ ಜಿಂಕೆ ಹಿಂದೆಯೋ ಹೋದ
ರಾಮಚಂದ್ರಗಿಂತ ರಸಿಕನಾರು
ಕೇಡು ಕಾಲಕೆ ಕೆಡು ಬುದ್ಧಿತಾ ಹುಟ್ಟದೇ
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ : ಶ್ರೀ ರಾಮಚಂದ್ರನು ಬಹಳ ಬುದ್ಧಿವಂತ, ಮೇಧಾವಿ. ಕೆಟ್ಟ ಕಾಲ ಬಂದಾಗ ದಿಕ್ಕು ತೋರದಂತಾಗಿ ಹೆಂಡತಿಯನ್ನು ಕಾಡಿನಲ್ಲಿ ಬಿಟ್ಟು ತಾನು ಜಿಂಕೆಯ ಹಿಂದೆ ಹೋಗುತ್ತಾನಲ್ಲವೆ, ಅಂದರೆ ಕೆಡುವ ಕಾಲಕ್ಕೆ ಬುದ್ಧಿಯೂ ಸಹ ಕೆಡುತ್ತದೆ.

97. ಮೂಲ : ಮೋಘ ಮಡ್ಡವಾಯಿನ ಮಿಹಿರುನಿ ಚೆರುಚುನು
ಚಿತ್ತಮಡ್ಡಮಯಿನ ಸ್ಥಿರಮು ಚೆರುಚು
ಮರಪು ಅಡ್ಡಮಯಿನ ಮರಿಮುಕ್ತಿ ಚೆರಚುರಾ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಮೋಘ ಅಡ್ಡ ಬರಲು ಮಿಹಿರನನು ಕೆಡಿಸು
ಚಿತ್ತ ಅಡ್ಡ ಬರಲು ಸ್ಥಿರತೆ ಕೆಡುಗು
ಮರೆವು ಅಡ್ಡ ಬರಲು ಮುಕ್ತಿ ತಾ ಕೆಡುವುದೈ
ವಿಶ್ವದಾಭಿರಾಮ ಕೇಳ್ಳೈ ವೇಮಾ.

ತಾತ್ಪರ್ಯ : ಮೋಡಗಳು ಸೂರ್ಯನಿಗೆ ಅಡ್ಡಬರಲು ಸೂರ್ಯನ ಪ್ರಕಾಶವನ್ನು ಕಡಿಮೆ ಮಾಡುತ್ತವೆ. ಚಿತ್ತದಲ್ಲಿ ಅನೇಕ ವಿಚಾರಗಳು ಉದಯಿಸಿದರೆ ಸ್ಥಿರತೆಯನ್ನು ಕೆಡಿಸುತ್ತದೆ. ಅಂತೆಯೆ ಮರೆವು ಅಡ್ಡ ಬಂದರೆ ಮುಕ್ತಿಯನ್ನು ಕೆಡಿಸುತ್ತದೆ.

98. ಮೂಲ : ಮೇಡಿಪಂಡು ಚೂಡ ಮೇಲಿ ವ್ಯೆಯುಂಡುನು
ಪೊಟ್ಟವಿಪ್ಪಿ ಚೂಡ ಬುರುಗುಲುಂಡು
ಬೆರಕುವಾನಿ ಬಿಂಕ ಮೀಲಾಗುರಾ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಹತ್ತಿ ಹಣ್ಣು ನೋಡೆ ಬಹು ರಮ್ಯ ಹೊರಗಡೆ
ಸಿಪ್ಪೆ ಬಿಚ್ಚೆ ನೋಡೆ ತುಂಬ ಹುಳವು
ಬೆದರು ಮನುಜ ಮನದ ಬಿನ್ನಾಣವಾರೀತಿ
ವಿಶ್ವದಾಭಿರಾಮ ಕೇಳ್ಳೈ ವೇಮಾ.

ತಾತ್ಪರ್ಯ : ಹೊರ ನೋಟಕ್ಕೆ ಹತ್ತಿ ಹಣ್ಣು ಬಹಳ ಸುಂದರವಾಗಿ ಕಂಡುಬರುತ್ತದೆ. ಅದನ್ನು ಬಿಚ್ಚಿ ಒಳಗೆ ನೋಡಿದರೆ ಅದು ಹುಳುಗಳಿಂದ ತುಂಬಿರುತ್ತದೆ, ಅದೇ ರೀತಿ ಬೆದರುವ ಮನುಷ್ಯನ ಮನಸ್ಸಲ್ಲಿ ಅನೇಕವಾಗಿ ಭೀತಿ ಇದ್ದರೂ ಹೊರಗಡೆ ಚೆನ್ನಾಗಿಯೇ ಕಾಣುತ್ತಾನೆ.

99. ಮೂಲ : ರಾಮ ವಿಭುಂಡು ಪುಟ್ಟಿ ರಘುಕುಲಮುವೆಲರಿಂಚೆ
ಗುರು ವಿಭುಂಡು ಪುಟ್ಟಿ ಕುಲಮು ಚೆರಿಚೆ
ಯೆವರಿ ಮಂಚಿ ಚೆಡ್ಡ ಲೆಂಚಚೂಚಿನ ದೇಟ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ ; ರಾಮ ವಿಭುವು ಜನಿಸಿ ರಘುಕುಲವೇರಿತು
ಕುರು ಕುಲ ವಿಭು ತನ್ನ ಕುಲವಳಿಸಿದ
ಯಾರ ಒಳಿತು ಕೆಡುಕು ಪರಿಕಿಸೆ ಪ್ರತ್ಯಕ್ಷ
ವಿಶ್ವದಾಭಿರಾಮ ಕೇಳ್ಳೈ ವೇಮಾ.

ತಾತ್ಪರ್ಯ : ರಾಮಚಂದ್ರನು ರಘುಕುಲದಲ್ಲಿ ಉದಯಿಸಿ ತನ್ನ ಗುಣಗಳಿಂದ ತನ್ನ ಕುಲವನ್ನೇ ಉದ್ಧಾರ ಮಾಡಿದ. ಆದರೆ ಕುರುಕುಲದಲ್ಲಿ ಜನಿಸಿದ ದುರ್ಯೋಧನನು ತನ್ನ ದುರ್ಗುಣಗಳಿಂದ ತನ್ನ ಕುಲವನ್ನೇ ಹಾಳುಮಾಡಿದ. ಇತರರ ಒಳ್ಳೆಯತನ, ಕೆಟ್ಟತನವನ್ನು ತಿಳಿಯಬೇಕಾದರೆ ಅವರ ಗುಣಗಳನ್ನು ಅರಿಯಬೇಕು.

100. ಮೂಲ : ಲೋಭಿವಾನಿ ಚಂಪ ಲೋಕಂಬು ಲೋಪಲ
ಮಂದುವಲದು ವೇರೆ ಮಂತ್ರಮು ಗಲದು
ಪೈಕಮಡುಗುಜಾಲ ಭಗ್ಗುನ ಪಡಿ ಚಚ್ಚು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಲೋಭಿಯನ್ನು ಸಾಯಿಸಲ್ ವಸುಧೆಯೊಳಗೆ
ಮದ್ದು ಬೇಡ ಬೇರೆ ಮಂತ್ರವೆ ಇಹುದು
ಹಣವ ಕೇಳಲವನಾಕ್ಷಣವೆ ನೆಗೆದು ಬೀಳ್ವ
ವಿಶ್ವದಾಭಿರಾಮ ಕೇಳ್ಳೈ ವೇಮಾ,

ತಾತ್ಪರ್ಯ : ಜಿಪುಣನನ್ನು ಕೊಲ್ಲಬೇಕಾದರೆ ಅದಕ್ಕೆ ಯಾವ ವಿಷವೂ ಬೇಕಾಗಿಲ್ಲ. ಅದಕ್ಕೆ ಸರಿಯಾದ ಮಾರ್ಗ ಎಂದರೆ ಜಿಪುಣನಲ್ಲಿ ಹಣವನ್ನು ಕೇಳಿದರೆ ಸಾಕು. ಅಷ್ಟಕ್ಕೆ ಅವನು ಕೊರಗಿ ಸಾಯುತ್ತಾನೆ.

101. ಮೂಲ : ವ್ರೇಯ ವ್ರೇಯಗಾನು ವಿತ್ತನ ಮನಿಪಿಂಚು
ವ್ರೇಯ ವ್ರೇಯ ಪ್ರಬಲ ವೃಕ್ಷಮಗುನು
ತೆಲಿಯ ದೆಲಿಯ ವಾಡು ದೇವುಡ ನಂದಗು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಎರಚೆ ಎರಚೆ ಎರಚೆ ಬಿತ್ತನೆ ಯಹುದೈ
ಎರೆಯೆ ಎರೆಯೆ ಪ್ರಬಲ ವೃಕ್ಷವಹುದು
ಅರಿಯೆ ಅರಿಯೆ ಅವನು ದೈವಸಮಾನನೈ
ವಿಶ್ವದಾಭಿರಾಮ ಕೇಳೈ ವೇಮಾ,

ತಾತ್ಪರ್ಯ ; ಕಾಳುಗಳನ್ನು ಅನೇಕ ಬಾರಿ ಎರಚಿದರೆ ಅದು ಬಿತ್ತನೆಯಾಗುತ್ತದೆ. ಅನೇಕ ಬಾರಿ ನೀರನ್ನು ಎರೆದರೆ ಒಂದು ಸಣ್ಣ ಗಿಡ ದೊಡ್ಡ ಮರವಾಗಿ ಬೆಳೆಯುತ್ತದೆ. ಹಾಗೆಯೇ ಅರಿವು ಮೂಡುತ್ತ ಮೂಡುತ್ತ ಮನುಜನು ದೇವರ ಸಮಾನನಾಗುತ್ತಾನೆ.

102. ಮೂಲ : ವೇಮು ಪಾಲು ಬೋಸಿ ವೆಯ್ಯೇಂಡ್ಲು ಪೆಂಚಿನ
ಚೇದು ವಿಡಚಿ ತೀಪು ಚೆಂದನಟ್ಲು
ನೋಗು ಗುಣಮು ವಿಡಚಿಯುಚಿತಜ್ಞುಡಗುನೆಟ್ಲು
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಬೇವು ಗಿಡಕೆ ದಶನೂರು ವರುಷ ಹಾಲು ಎರೆಯೆ
ಕಹಿಯ ತೊರೆದು ಸಿಹಿಯ ಪಡೆಯದಂತೆ
ಹೀನಗುಣವ ತೊರೆದು ಯುಚಿತಜ್ಞನೆನಿಪನೆ
ವಿಶ್ವದಾಭಿರಾಮ ಕೇಳೈ ವೇಮಾ.

ತಾತ್ಪರ್ಯ : ಬೇವಿನ ಗಿಡಕ್ಕೆ ಸಾವಿರ ವರುಷ ಹಾಲನ್ನು ಎರೆದರೆ ಅದು ತನ್ನ ಕಹಿಯನ್ನು ಬಿಟ್ಟು ಸಿಹಿಯುಳ್ಳದ್ದಾಗುತ್ತದೆಯೇ ? ಇಲ್ಲ. ಅದರಂತೆ ಗುಣಹೀನನಿಗೆ ಏನೆಲ್ಲಾ ಉಪದೇಶ ಮಾಡಿದರೂ ಸಹ ಅವನು ತನ್ನ ಹುಟ್ಟು ಗುಣವನ್ನು ಬಿಡುವುದಿಲ್ಲ.

103. ಮೂಲ : ಸುತುಲಚೇತ ಪುಣ್ಯ ಸುಖಮು ಬೊಂದುದಮನಿ
ಮನುಜುಂಡು ಕರ್ಮ ಮತಮು ದಗಿಲಿ
ಯೇನಗು ಪಡಿಯುನ್ನ ನೆತ್ತುನಾ ಮಶಕಂಬು
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಸುತರರಿಂದ ಪುಣ್ಯ ಸುಖವ ಪಡೆವೆನೆಂದು
ಮನುಜತಾನು ಕರ್ಮ ಮತಕೆ ಬಿದ್ದ
ಕರಿಯು ಬಿದ್ದಿರಲು ಎತ್ತುವುದೇ ಮಶಕಗಳು
ವಿಶ್ವದಾಭಿರಾಮ ಕೇಳೈ ವೇಮಾ

ತಾತ್ಪರ್ಯ : ಪುಣ್ಯ ಪ್ರಾಪ್ತಿಯಾಗಬೇಕೆಂದು, ಪರಲೋಕ ಸುಖ ಪ್ರಾಪ್ತಿಗೋಸ್ಕರ ಮಕ್ಕಳನ್ನು ಪಡೆದು ಸಲಹಿ ಅವರಿಗೋಸ್ಕರ ಕಷ್ಟಪಡುತ್ತಾರೆ. ಆನೆಯು ಬಿದ್ದಿರಲು ಸೊಳ್ಳೆಗಳು ಅದನ್ನು ಎತ್ತಿ ನಿಲ್ಲಿಸಲಾಗುತ್ತದೆಯೇ ? ಅದೇ ರೀತಿ ಮಕ್ಕಳಿಂದ ಮಾನವ ತನ್ನ ಉನ್ನತಿಯನ್ನು (ಮುಕ್ತಿ) ಪಡೆಯಲಾರ.

104. ಮೂಲ : ವೇರುಪುರುಗು ಚೇರಿ ವೃಕ್ಷಂಬು ಚೆರುಚುನು
ಚೀಡಪುರುಗುಚೇರಿ ಚೆಟ್ಟು ಚೆರಚು
ಕುತ್ಸಿತುಂಡು ಚೇರಿ ಗುಣವಂತು ಚೆರಚುರಾ
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಬೇರು ಹುಳುವು ಸೇರಿ ಮರವ ಕೆಡಿಸುವುದು
ಕೀಡೆ ಹುಳುವು ಸೇರಿ ಗಿಡವ ಕೆಡಿಸು
ಕೆಟ್ಟವನು ತಾ ಸೇರಿ ಸುಗುಣಿಯ ಕೆಡಿಸುವ
ವಿಶ್ವದಾಭಿರಾಮ ಕೇಳೈ ವೇಮಾ

ತಾತ್ಪರ್ಯ : ಬೇರು ಕೊರೆಯುವ ಹುಳ ಸೇರಿದರೆ ಮರವನ್ನು ಕೊರೆದು ಅದನ್ನು ಒಣಗುವಂತೆ ಮಾಡುತ್ತದೆ. ಕೀಟಗಳು ಸೇರಿ ಗಿಡದ ಎಲೆಗಳನ್ನೆಲ್ಲಾ ತಿಂದು ಗಿಡವನ್ನು ಒಣಗುವಂತೆ ಮಾಡುತ್ತದೆ. ಅದೇ ರೀತಿ ಗುಣಹೀನನು ತನ್ನ ಕೆಟ್ಟ ನಡತೆಯಿಂದ ಗುಣವಂತನನ್ನು ಕೆಡಿಸುತ್ತಾನೆ.

105. ಮೂಲ : ಸಾಧು ಸಜ್ಜನುಲನು ಸಂತರಿಂಚಿನವಾಡು
ಪ್ರಜಲ ಸಂತಸಂಬು ಪರಿಚುವಾಡು
ಕದಸಿ ಶಾತ್ರವುಲನು ಗರುಣ ಜೂಚಿನವಾಡು
ಪಾದು ಕೊನ್ನ ಮುಕ್ತಿ ಪರುಡು ವೇಮಾ

ಅನುವಾದ : ಸಾಧು ಸಜ್ಜನರನು ಸಂತೈಸಿದ ನರನು
ಪ್ರಜೆಗಳನು ಸಂತಸಗೊಳಿಸಿದವನು
ಶತ್ರುಗಳಿಗೆ ಕರುಣೆ ತೋರಿದ ಮನುಜನು
ಕಾಯ್ದುಕೊಂಡ ಮುಕ್ತಿಪರನು ವೇಮಾ

ತಾತ್ಪರ್ಯ : ಸಾಧು ಸಜ್ಜನರನ್ನು ಸತ್ಕರಿಸುವವನು, ಪ್ರಜಾರಂಜಕನು ಶತ್ರುಗಳಲ್ಲಿ ಕರುಣೆಯನ್ನು ತೋರುವವನು, ಮುಂದೆ ಮುಕ್ತಿಯನ್ನು ಕಾಯ್ದಿರಿಸಿಕೊಂಡ ಸತ್ಪುರುಷನು.

106. ಮೂಲ : ಸ್ತ್ರೀಲ ಸುಖಮು ಜೂಚಿ ಚಿತ್ತಂಬು ನಿಲುಕಡ
ಚೇಯನಿಮನುಜುಂಡು ಚೆಡುನಿಜಂಬು
ಏಟಿ ಗಡ್ಡಮ್ರಾನಿ ಕೆಪ್ಪುಡು ಜಲನಂಬು
ವಿಶ್ವದಾಭಿರಾಮ ವಿನುರ ವೇಮಾ

ಅನುವಾದ : ಸ್ತ್ರೀಯ ಸುಖವ ಬಯಸಿ ಚಪಲ ಮಾನಸವನ್ನು
ನಿಲಿಸಿದಾ ಮನುಜನು ಕೆಡುವ ನಿಜದಿ
ನದಿಯ ದಡದ ಮರಕೆಡಬಿಡದೆ ಜಲನವೈ
ವಿಶ್ವದಾಭಿರಾಮ ಕೇಳೈ ವೇಮ

ತಾತ್ಪರ್ಯ : ಸ್ತ್ರೀ ಸುಖಕ್ಕೆ ಪರಿತಪಿಸುವ ಮನುಷ್ಯನು ಖಂಡಿತವಾಗಿ ಕೆಟ್ಟುಹೋಗುತ್ತಾನೆ. ಅದು ಹೇಗೆಂದರೆ ಹೊಳೆಯ ದಡದಲ್ಲಿರುವ ಮರವನ್ನು ಅಲೆಗಳು ಬಡಿಯುತ್ತವೆ. ಬುಡದಲ್ಲಿರುವ ಮಣ್ಣನ್ನು ಕೊರೆಯುತ್ತವೆ. ಆದ್ದರಿಂದ ಆ ಮರ ಯಾವಾಗಲೂ ಅಲುಗಾಡುತ್ತ ವೃದ್ಧಿಯಾಗುವುದಿಲ್ಲ. ಅದೇ ರೀತಿ ಚಂಚಲತೆ ಇರುವವನಿಗೆ ದೃಢ ಮನಸ್ಸು ಉಂಟಾಗದು. ಜ್ಞಾನ ಮಾರ್ಗ ಸಿಗದು.

**107.** ಮೂಲ : ಹೀನುಡೆನ್ನಿ ವಿದ್ಯಲಿಲ ನಭ್ಯಸಿಂಚಿನ
ಘನುಡುಗಾಡು ಹೀನ ಜನುಡೆ ಕಾನಿ
ಪರಿಮಳ ಮುನು ಗರ್ದಭಮು ಮೋಯ ಘನಮೌನ
ವಿಶ್ವದಾಭಿರಾಮ ವಿನುರ ವೇಮಾ.

ಅನುವಾದ : ಹೀನ ನೆನಿತು ವಿದ್ಯೆಗಳ ಕಲಿಯೆ ಜಗದಲಿ
ಘನನೆನಿಸನು ತನ್ನ ಹೀನ ತನದಿ
ಕತ್ತೆ ಪರಿಮಳವ ಹೊರಲು ಘನವೆನಿಪುದೆ
ವಿಶ್ವದಾಭಿರಾಮ ಕೇಳ್ಳೆ ವೇಮಾ,

ತಾತ್ಪರ್ಯ : ಕತ್ತೆ ಭಾರ ಪೊರುತ್ತದೆ. ಪರಿಮಳ ದ್ರವ್ಯಗಳನ್ನು ಹೊತ್ತು ಸಾಗುತ್ತದೆ. ಪರಿಮಳಗಳನ್ನು ಹೊತ್ತಾಕ್ಷಣ ಅದರ ಘನತೆ ಹೆಚ್ಚುವುದಿಲ್ಲ, ಅದರಂತೆ ಹೀನ ಮಾನವನು ಎಷ್ಟೇ ಶಾಸ್ತ್ರಗಳನ್ನು ಓದಿದರೂ ಅವನು ದೊಡ್ಡ ಮನುಷ್ಯ ನಾಗಲಾರ.

**108.** ಮೂಲ : ಹೀನನರುಲ ತೋಡ ನಿಂತುಲ ತೋಡನು
ಪಡುಚುವಾಂಡ್ರ ತೋಡ ಪ್ರಭುವು ತೋಡ
ಪ್ರಾಜ್ಞ ಜನುಲ ತೋಡ ಬ್ರಹ್ಮ ಜನುಲತೋ
ವೈಪು ದೆಲಿಸಿ ಪಲುಕವಲಯು ವೇಮಾ.

ಅನುವಾದ : ಹೀನ ನರನ ಸಂಗ ಅಂಗನೆಯರ ಸಂಗ
ಕನ್ಯೆಯರಲಿ ಅಂತೆ ಪ್ರಭುವಿನಲ್ಲಿ
ಪ್ರಾಜ್ಞಪುರುಷರಲ್ಲಿ ಬ್ರಹ್ಮಜ್ಞ ಜನರಲಿ
ರೀತಿ ಅರಿತು ನುಡಿಯಬೇಕೈ ವೇಮಾ.

ತಾತ್ಪರ್ಯ : ಗುಣಹೀನರಲ್ಲಿ, ಸ್ತ್ರೀಯರಲ್ಲಿ, ಹುಡುಗಿಯರಲ್ಲಿ, ಅಧಿಕಾರಿಗಳಲ್ಲಿ (ಅರಸ) ಪಂಡಿತರಲ್ಲಿ ಯೋಗಿಗಳಲ್ಲಿ ಮಾತನಾಡುವಾಗ ರೀತಿ ನೀತಿಗಳನ್ನು ಅರಿತು ಮಾತನಾಡಬೇಕು.

09. ಮೂಲ : ಶತಸಂಖ್ಯ ಪದಮುಲನೇ
ಮತಿ ಮಂತುಡು ಪಠನ ಸೇಯು ಮಮತಲು ದೀರುನ್
ಆತಡು ನಾಲುಗುಪದಮುಲ
ಶಶಿ ಕಂಠುನಿ ಪದಮು ಜೇರು ಸಿದ್ಧಮು ವೇಮಾ

ಅನುವಾದ : ಶತ ಸಂಖ್ಯ ಪದಗಳನು ಯಾ
ಮತಿ ವಂತನು ಪಠಣೆ ಮಾಡೆ ಮಮಕಾರ ತೊಲಗು
ಆತನು ನಾಲಕು ಪದಗಳ
ಶಶಿ ಕಂಠನ ಪದವ ಸೇರ್ವ ಸಿದ್ಧವೋ ವೇಮಾ

ತಾತ್ಪರ್ಯ : ಈ ನೂರು ಪದ್ಯಗಳನ್ನು ಯಾ ಒಬ್ಬ ಗುಣವಂತನು ಪಠಿಸಿ ಮನನ ಮಾಡಿ ಅನುಷ್ಠಾನಕ್ಕೆ ತಂದರೆ ಆತನಿಗೆ ಮ ಮ ಕಾ ರ ಗ ಳು ತೊಲಗಿ ಶಿವನ ಸಾನಿಧ್ಯವನ್ನು ಪಡೆಯುತ್ತಾನೆ.



ಶಿಕ್ಷಕರಾಗಿ, ತೆರಿಗೆ ಅಧಿಕಾರಿಯಾಗಿ ಸೇವೆ ಸಲ್ಲಿಸಿದ ಹಿರಿಯರಾದ ಶ್ರೀ ಎಂ. ದೇವರ ಕೊಂಡಪ್ಪನವರು ನಿವೃತ್ತಿಯ ನಂತರವೂ ಸಾಹಿತ್ಯ ಕೃಷಿಯನ್ನು ಮುಂದುವರಸಿಕೊಂಡು ಬಂದಿದ್ದಾರೆ. ಕಾವ್ಯ ಇವರ ಪ್ರೀತಿಯ ಕ್ಷೇತ್ರ. ಕೈವಾರ ಯತೀಂದ್ರ ಶ್ರೀ ನಾರಾಯಣಪ್ಪನವರ ಎರಡು ಶತಕಗಳನ್ನು 1983ರಷ್ಟು ಹಿಂದೆಯೇ ಅನುವಾದಿಸಿ ಪ್ರಕಟಿಸಿದ್ದಾರೆ. ಅದಕ್ಕೂ ಹಿಂದೆ "ಕನ್ನಡ ಕುಡಿ" ಎನ್ನುವ ಕವನ ಸಂಕಲನವನ್ನು ಹೊರ ತಂದಿದ್ದಾರೆ. 1988ರಲ್ಲಿ "ಕೊಂಡಯ್ಯನ ಪದಗಳು" ಸ್ವಂತ ಕೃತಿಯನ್ನು ರಚಿಸಿ ತಮ್ಮ ಅನುಭವಗಳನ್ನು ಸರ್ವಕಾಲಿಕ ಸತ್ಯಗಳನ್ನು ತ್ರಿಪದಿಗಳಲ್ಲಿ ಮೂಡಿಸಿದ್ದಾರೆ. ಇವನ್ನು ಓದಿದರೆ ಡಿವಿಜಿಯವರ "ಮಂಕುತಿಮ್ಮನ ಕಗ್ಗ" ಓದಿದಷ್ಟು ಆನಂದವಾಗುತ್ತದೆ. ಅಷ್ಟು ಸರಳ, ಅರ್ಥಪೂರ್ಣ ಮತ್ತು ಆಗಾಗ ಗುನುಗುನಿಸಬೇಕಾದ ಕವನಗಳಾಗಿ ಬಂದಿವೆ. ಯತೀಂದ್ರ ನಾರಾಯಣಪ್ಪನವರ ತತ್ತ್ವಗಳ ದೀರ್ಘ ಅಧ್ಯಯನದಿಂದಾಗಿ, ಪ್ರಭಾವದಿಂದಾಗಿ ಆ ಪುಣ್ಯಾತ್ಮನ ಮಾತುಗಳನ್ನು ತಮ್ಮದನ್ನಾಗಿಸಿಕೊಂಡು ತೆಲುಗಿನಲ್ಲಿ ಭಾವಿಸಿ ಕನ್ನಡದಲ್ಲಿ ಕಂದ ಶೈಲಿಯಲ್ಲಿ "ನಾರಾಯಣ ವೇದಾಂತ ತತ್ತ್ವ ಶತಕಂ" ಕಿರು ಪುಸ್ತಕವನ್ನು ಪ್ರಕಟಿಸಿದ್ದಾರೆ. (1989).

ಈಗ ಪ್ರಕಟವಾಗುತ್ತಿರುವ "ಅನುಭವ ಬೋಧಾಮೃತ " ಮೂರು ತೆಲುಗು ಮೂಲದ ವೇದಾಂತ ಕೃತಿಗಳ, ಹಾಗೆನ್ನುವುದಕ್ಕಿಂತ ಅನುಭವ ಸತ್ಯಗಳ ಕನ್ನಡ ರೂಪ. ಸುಮತಿ, ನರಸಿಂಹ ಶತಕಗಳನ್ನು ಮತ್ತು ವೇಮನ ಪದ್ಯಗಳನ್ನು ಈ ಕವಿಯು ಕನ್ನಡಿಸಿರುವುದು ಕನ್ನಡಿಗರಿಗೆ ಮಹದುಪಕಾರವಾಗಿದೆ. ಗದ್ಯಾನುವಾದ ಕ್ಲಿಷ್ಟದ ಕೆಲಸವೇನಲ್ಲ. ಆದರೆ ಪದ್ಯಾನುವಾದ ತುಂಬ ಕಸರತ್ತಿನ ಕೆಲಸ. ಕಂದ, ಸೀಸ ಮತ್ತು ಆಟವೆಲದಿ ಛಂದಸ್ಸುಗಳಲ್ಲಿರುವ ಈ ತೆಲುಗು ಮೂಲದ ಪದ್ಯಗಳನ್ನು ಅದೇ ಛಂದಸ್ಸುಗಳಲ್ಲಿ ಕನ್ನಡಕ್ಕೆ ತಂದಿರುವುದು ವಿಶೇಷ. ನೈಜತೆಯನ್ನು ಕಾಪಾಡಿಕೊಂಡು ಮೂಲಕ್ಕೆ ದೋಷ ತರದೆ ಪಡಿಮೂಡಿಸಿದ ಶ್ಲಾಘನೀಯ ಕೆಲಸ ಮಾಡಿದ್ದಾರೆ. ಕಾದಂಬರಿಯಂತೆ ಒಂದೇ ಸಮನಾಗಿ ಓದಿಕೊಂಡು ಹೋಗುವ ಕೃತಿಗಳು ಇವಲ್ಲ. ನಿಧಾನವಾಗಿ ಮೆಲ್ಲಬೇಕಾದ ಸಿಹಿಗವನಗಳಿವು. ಬಹುಕಾಲ ಮನದಲ್ಲಿ ನಿಲ್ಲುವ ಸುಭಾಷಿತಗಳು.

ಶ್ರೀಯುತರು ಅಮರನಾರಾಯಣ ಶತಕದ ಕನ್ನಡ ರೂಪವನ್ನು, ಕೈವಾರ ನಾರಾಯಣಪ್ಪನವರ ನೀತಿ ವಚನಗಳನ್ನು ಬರೆದಿದ್ದಾರೆ. ಅವು ಅಚ್ಚಿನಲ್ಲಿವೆ. ಸಹೃದಯಿಗಳಾದ ಶ್ರೀಯುತರು ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲಿ ರಾಗವಾಗಿ ಹಾಡಿ ವೇಮನ, ಸುಮತಿ, ನಾರಾಯಣಪ್ಪ ಇಂತಹ ಯತಿಗಳ ಮಾತುಗಳನ್ನು ಜನಪ್ರಿಯ ಮಾಡುವ ಕೈಂಕರ್ಯದಲ್ಲಿ ತೊಡಗಿದ್ದಾರೆ. ಇವರ ತೆಲುಗಿನ ಮಾಧುರ್ಯ ಅವರ ಬಾಯಿಯಿಂದಲೇ ಕೇಳಬೇಕು. ಅಷ್ಟೇ ಅವರ ಅನುಭವದ ಮಾತುಗಳು ಕೂಡ.

ಇವರ ಕೃತಿಗಳು ವಿಮರ್ಶಕರ ಕಣ್ಣಿಗೆ ಬಿದ್ದು ಚರ್ಚಿತವಾಗಬೇಕಾಗಿದೆ.